ಅಂದು ದಶರಥಜನಕರಿರ್ವರು ||
ಮೊಂದುಮಣಿಮಯಪೀಠದೊಳು ಬಗೆ |
ದಂದು ಕುಳ್ಳಿರಲಾ ಶತಾ ಸಂದರ್ಶಿಯೈದಿದನು ||
ಬಂದನಾಗಳೆ ಗುರುವಸಿಷ್ಠನು |
ಸಂದಿಸಿತ್ತಿದು ಸಮಯಮೆಂದನು |
ಬಂಧನನು ಮುದದಿಂದೆ ಹೊಗಳಿದರಾ ಮುನೀಶ್ವರರು ||೪೫||

ಜನಕಭೂಪನೆ ಸಫಲಮಾದುದು |
ಮನದ ಬಯಕೆಯು ಪುಣ್ಯವಶದಿಂ |
ದಿನಕುಲೇಂದ್ರನ ಬಿಯಗತನವಿದು ಸುತ್ಯಮೆನಿಪುದಲಾ
ವಿನತ ನಿನಗಾಂ ಕುಲಪುರೋಹಿತ |
ನೆನಿಸಿಪರಮಕೃತಾರ್ಥನಾದೆನು |
ಮುನಿವಸಿಷ್ಠರ ಬರವು ನಮಗಾಯ್ತಖಿಳಶುಭಕರವು ||೪೬||

ಎಲೆ ನೃಪತಿ ಕೇಳೆಮ್ಮ ಪುಣ್ಯದ |
ಬೆಳಸು ತಾಸೀ ರಾಘವನು ಮೇ |
ಣಿಳೆಯ ಭಾರವ ಕಳೆಯ ಲೈದಿಹ ಲೋಕನಾಯಕನು ||
ಕುಲಶಿರೋಮಣಿ ನಮ್ಮ ಸೀತಾ |
ಲಲನೆಯನು ಕೈವಿಡಿದು ತಾಂ ಮನೆ |
ಯಳಿಯನಾದುದು ನಿಮ್ಮ ಪಿರಿಯರ ತಪದ ಮಹಿಮೆ ಕಣಾ ||೪೭||

ಎನುತೆ ಜನಕಗೆ ಮುನಿಶತಾನಂ |
ದನು ನಿರೂಪಿಸೆ ವರದಶರಥಾ |
ವನಿಪನೊಡನೆ ವಸಿಷ್ಠನೊರೆದನು ಜನಕನನ್ವಯವ ||
ಜನಪ ನಿಮಿಯಿಂದಾಯ್ತು ವಂಶವು |
ಜನಿಸಿದಾನೃಪರೆಲ್ಲ ಸೆತ್ಯವ |
ನಿನಿತುಮುಳಿಯದೆ ರಾಜ್ಯವಾಳಿದರೆಂದನಾ ಮುನಿಪ ||೪೮||

ಇಂತು ಸಂಭ್ರಮದಿಂದೆ ದಿನದಾ |
ದ್ಯಂತವನು ತಾಂ ಕಳೆದು ಮರುದಿನ |
ಶಾಂತಿಮೊದಲಾದಖಿಳಮಂಗಳಕಾರ್ಯಗಳ ಗೈಸಿ ||
ಅಂತರಾತ್ಮ ಪ್ರೀತಿಗಾಗಿಯ |
ನಂತಗೋಭೂಮ್ಯಾದಿದಾನವ |
ನಂತರಿಸದೊಸೆದೀಯುತೆಸೆದನು ಜನಕಭೂಪತಿಯು ||೪೯||

ಬಂದೊದವಿದುದು ಲಗ್ನವಾವಿದ |
ರಿಂದು ಸಾಧಿಸಬೇಕು ಬರಹೇ |
ಳಿಂದುಮುಖಿಯನು ಪಸೆಯ ಜಗುಲಿಗೆಯೆಂದು ಪೇಳಿದೊಡೆ ||
ಅಂದುಗೆಯ ದನಿ ಘಲಿರುಘಲಿರೆನೆ |
ಮಂದಯಾನದೆ ರಾಜಹಂಸಿಯ |
ಚಂದವನು ನಿಂದಿಸುತೆ ಬಂದಳು ಸೀತೆ ಮಂಟಪಕೆ ||೫೦||

ಎಡದ ಕರದಿಂ ನಿರಿಯ ಕುಚ್ಚನು |
ಪಿಡಿದು ಸೆರಗನು ಬಲದ ಕರದಿಂ |
ದಡಿಗಡಿಗೆ ಸಾವರಿಸುತೆಡಬಲಕಿಡದೆ ದಿಟ್ಟಿಯನು ||
ಅಡಿಯನೀಕ್ಷಿಪಳೆನಲು ಶಿರವನು |
ಬಿಡದೆ ಬಾಗಿಸಿ ತೂಗುತೈದುವ |
ಬೆಡಗಿನಾನೆಯ ತೆರದೆ ಬಂದಳು ಸೀತೆಯೊಲವಿನಲಿ ||೫೧||

ಈಕೆ ಮದನಪತಾಕೆ ಜಾನಕಿ |
ನಾಕಿಜನನುತೆ ಯಾಗಭೂಮಿಯೊ |
ಳೀಕೆ ದೊರೆತಳು ಜನಕಭೂಪನ ಪೂರ್ವಸುಕೃತದಲಿ ||
ಜೋಕೆಯಿಂದಿರಿ ಸಿರವ ಬಾಗಿರಿ |
ಲೋಕನಾಯಕನರಸಿ ಬರುವಳು |
ಸಾಕು ತೊಲಗಿಮೆನುತ್ತು ಮುಗ್ಘಡಿಸಿದರು ವಂದಿಗಳು ||೫೨||

ಬಂದಕುವರಿಯ ನೋಡಿಯನುನಯ |
ದಿಂದೆ ತನ್ನಯ ತೊಡೆಯನೇರಿಸಿ |
ಯೆಂದುಜನಕಾವನಿಪನಾ ಶ್ರೀರಾಮಚಂದ್ರಂಗೆ ||
ಇಂದುಪರಿಯಂತೀಕೆಯನು ನಲ |
ವಿಂದೆ ಸಾಕಿದೆ ನೀಗಳಾಗೋ |
ವಿಂದನಹ ನಿನಗೊಪ್ಪಿಸಿದೆನೆಂದೆರೆದ ಧಾರೆಯನು ||೫೩||

ಒಂದುಕಡೆ ಜನರುಲಿವ ಜಯರವ |
ಮೊಂದುಕಡೆಯೊಳ್ ಸ್ವಸ್ತಿವಾಚನ |
ಮೊಂದುಕಡೆ ಭೋರೆಂಬ ಮಂಗಳವಾದ್ಯದಬ್ಬರಣೆ ||
ಒಂದುಕಡೆಯೊಳ್ ವೇದಘೋಷವ |
ದೊಂದುಕಡೆ ಮಾಗಧರ ನುತಿರವ |
ಮೊಂದುಗೂಡುತೆ ಶಬ್ದಮಯವೆನೆ ತೋರಿತಾ ಸ್ಥಾನ ||೫೪||

ಧರಣಿಪತಿ ಯೂರ್ವಿಳೆವೆಸರ ಬಂ |
ಧುರತನೂಜೆಯ ಲಕ್ಷ್ಮಣಂಗಿ |
ತ್ತಿರೆದು ಧಾರೆಯನಂತು ಸೋದರನಹಕುಶಧ್ವಜನ ||
ವರತನುಜೆಯರ ಭರತಶತ್ರು |
ಘ್ನರಿಗೆ ಕೊಟ್ಟೆಸಗಿದನು ಮದುವೆಯ |
ನುರುತರದ ವೈಭವದೆ ಸುರಭೂಸುರರು ನಲಿದಾಡೆ ||೫೫||

ನಾಲ್ಕನೆಯ ಸಂಧಿ ಸಂಪೂರ್ಣಂ.

## ಐದನೆಯ ಸಂಧಿ

ಸೂ || ರಾಮನನುಪಮಬಲನು ಭಾರ್ಗವ |
ರಾಮಮದವನು ಮುರಿಯೆ ದಶರಥ |
ಭೂಮಿಪತಿ ನಲವಿಂದಯೋಧ್ಯಾಪುರವನೈದಿದನು ||

---

ಜನಕನನುಮತಿವಡೆದು ದಶರಥ |
ಜನಪನಲ್ಲಿಂ ಪಯಣಲಗುನದೊ |
ಳನುವಿನಿಂ ಪೊರಮಟ್ಟನಾ ಸಾಕೇತಪುರಕಂದು ||
ತನುಜರೊಡನೈದುತ್ತುಮಿದಿರೊ |
ಳ್ಮಿನುಗುತಿಹ ಪರಶುವನು ಪಿಡಿದಿ |
ರ್ಪನುಪಮದ ಜಮದಗ್ನಿಸುತನನು ಕಂಡನಾಭೂಪ ||೧||

ಕಾಣಲೊಡನೆಯೆ ನಡುಕಗೊಳುತುಂ |
ಶ್ರಾಣಗೆಟ್ಟನು ನಿಖಿಲರಾಜ |
ಪ್ರಾಣಹಾರಕನಿವನ ಕೈಗಾನಿಂದು ಸಿಲುಕಿದೆನೆ ||
ಜಾಣತನವಿವನಲ್ಲಿ ಸಾಗದು |
ಕ್ಷೀಣದಿಂ ಮತ್ಸುತರನಿಕ್ಕದೆ |
ಮಾಣನಿದಕೇಗೈವೆನೆಂದೆದೆಗಳಲಿದನು ನೃಪತಿ ||೨||

ಕಂಡನಿವನನು ಮುನಿಪನಂತ್ಯದ |
ಖಂಡಪರುಶುವೊ ಎನಲು ನೇತ್ರದೆ |
ಕೆಂಡಮುಗುಳುತೆ ನಿಂದು ನುಡಿಸಿದನಂದು ದಶರಥನ ||
ಕಂಡಕಂಡಾ ಕ್ಷತ್ರಿಯರ್ಕಳ |
ದಿಂಡುದರಿವ ಭುಜೋರುಬಲದಿಂ |
ಚಂಡನೆನಿಪೀಪರಶುರಾಮಂಗಿಂದು ಸಿಕ್ಕಿದೆಯಾ ||೩||

ಹಿಂದೆ ರಾಜನ್ಯರನು ಸವರು |
ತ್ತೊಂದುದಿನ ನಿನ್ನರಮನೆಗೆ ಬರ |
ಲಂದು ತಲೆಯನು ಮರೆಸಿಕೊಂಡ್ಯೆ ರಾಣಿವಾಸದಲಿ ||
ಇಂದುಪಾಯವನೇನಮಾಡುವೆ |
ಬಂದು ಬಿಡಿಸುವರಾರು ನಿನ್ನನು |
ಹಂದೆ ನೋಡೀಪರಶುಮಹಿಮೆಯನಿನ್ನು ತೋರಿಪೆನು ||೪||

ತರಳರಿವರನು ಕೂಡಿ ಜನಕನ |
ಪುರವನೈದಿ ಮದೀಯಗುರುಶಂ |
ಕರನಧನುವನು ಮುರಿಯಿಸಿದೆ ನಾನೆಂಬಗರ್ವದಲಿ |
ಸರಿಯೆನಿಪ್ಪವರಾರುಮೆನಗೀ |
ಧರಣಿಯೊಳಗಿಲ್ಲೆಂದು ಬಗೆದ್ಯೆ |
ಪರಶುವಿಲ್ಲವೆ ಜಾಮದಗ್ನ್ಯನ ಕರದೆ ನೀನರಿಯಾ ||೫||

ಅರಸುಮಕ್ಕಳ ಸಿರವನರಿಯುತೆ |
ಪರಿವರಕುತದೆ ಪಿತರರಿಗೆ ನೆರೆ |
ತೆರಪಣಂ ಗೈದುರುಕಪಾಲದೆ ನಾಕಮಾರ್ಗಕ್ಕೆ ||
ಮೆರೆವ ಸೋಪಾನವನು ರಚಿಸಿದ |
ಪರಶುರಾಮನ ಕರಕೆ ಸಿಲುಕಿರ |
ಲಿರವು ನಿಮಗಿನ್ನೆಂತು ಲಭಿಪುದು ಕೆಟ್ಟಿರಕಟೆಂದ ||೬||

ಕೇಳುತಿರ್ದನು ಮುನಿಯವಚನವ |
ನೇಳಿಸದೆ ಗಂಭೀರತನದಿಂ |
ಪೇಳಿ ನೋಡುವೆ ಬುದ್ಧಿವಾದವನೆಂದು ರಾಘವನು ||
ಕೀಳುನುಡಿಗಳನೇಕೆ ನುಡಿವಿರಿ |
ಚಾಳಿಯೇನಿದು ವಿಪ್ರಜಾತಿಗೆ |
ಮೇಲ್ ವೃದ್ಧರು ಹೇಳಲಮ್ಮೆನು ಬಾಲನಾನೆಂದ ||೭||

ಮುನಿಯೆ ಬೆಸಸುವುದೆನಗೆ ತವಿಶ್ವಾ |
ಘನಪದಾಂಬುಜವಿಲ್ಲಗೃತಂ |
ದನುವನಿನಿಸುಂ ಮರೆಯಮಾಂಜದೆ ಶಾಂತಿಯನು ವಹಿಸಿ ||
ಇನಕುಲೋದ್ಭವರರ್ಥಿವಾಂಛಿತ |
ಮೆನಿತು ಘನವಾದೊಡೆಯುಮೆಸಗುವ |
ರನಿಶಮೆಂಬೀನುಡಿಗೆ ಲೋಪವೆ ನಿಮ್ಮ ವಿಷಯದಲಿ ||೮||

ಮನದಭೀಷ್ಟವ ಪಡೆದು ತೆರಳದೆ |
ಜನಕನನು ಜಗದೀಡ್ಯಗುಣನನು |
ಮನದ ಮೈಲಿಗೆಯಿಂದೆ ನಿಂದಿಪುದುಚಿತವೇ ನಿಮಗೆ ||
ದಿನಪವಂಶದ ಸಾರ್ವಭೌಮರು |
ಬಿನುಗುಪಾರ್ವನದೊರ್ವನಿದಿರಿಸೆ |
ಘನಪರಾಕ್ರಮಿಯೆನುತುಮವನೊಡನೆಂತು ಸೆಣಸುವರು ||೯||

ಪೋಗಲೊಳ್ಳಿತು ನೋಳ್ಪೆವೆನುತುಂ |
ತೂಗಿ ಬಿಡಲೊಂದಂಬನದು ಬಿರಿ |
ಸಾಗಿ ನಿಮ್ಮೊಳು ತಪ್ಪನೆಸಗಲು ಕೀರ್ತಿಯೇನೆಮಗೆ ||
ತಾಗುವುದು ತಾಂ ಬ್ರಹ್ಮಹತ್ಯೆಯ |
ರೋಗವೆಮ್ಮನು ಬಿಡದೆ ನೆಲದೊಳು |
ಕೂಗಿಗಾಕರವಹೆವು ದುಷ್ಟರು ರವಿಕುಲಜರೆಂದು ||೧೦||

ಇದರ ಮರ್ಮವ ನರಿಯದಕಟಾ |
ಸದಮಲಾನ್ವಯತಿಲಕನನು ಪೊ |
ಳ್ದೆದೆಯನೆನುತಿಂದಣಕವಾಡಿದ ನಿಮ್ಮ ನಾಲಗೆಯ ||
ತುದಿಯನರಿಯಲು ಮನವು ತವಕಿಪು |
ದಿದನು ಮಾಹ್ಮಾಣ್ ಬ್ರಹ್ಮಹತ್ಯಾ |
ಸ್ಪದತೆ ಲೇಸಲ್ಲೆಂದು ತಡೆವುದು ಶಾಸ್ತ್ರದೊಕ್ಕಣೆಯು ||೧೧||

ಅದರಿನಿಲ್ಲಿರದೀಗ ಬೇಗನೆ |
ಚದರಿಪೋಗೆಂದೆನಲು ಭಾರ್ಗವ |
ನುದುರಿಸುತೆ ಕಿಡಿಗಳನು ನೇತ್ರದೊಳಿಂತು ಪೇಳಿದನು ||
ಸದರವಾದನೆ ಬಾಲ ನಿನಗಾ |
ವಿಧಿಯನಂಜಿಪ ಪರಶುರಾಮನು |
ಮೆದೆಯ ಮುಟ್ಟೇನಿಮ್ಮ ತಂದೆಯದೆಂತಿಹುದು ನೋಡ ||೧೨||

ಮಂಜರನ ಮರಿಗಕಟ ಸರಸವೆ |
ಕುಂಜರೇಂದ್ರನೊಳಾಡಲೇಂ ಮೃ |
ತ್ಯುಂಜಯನ ಶಿಷ್ಯಂಗೆ ತನಗೆಲೆ ಸಾಟಿಯೇ ನೀನು ||
ನಂಜನುಂಬರೆ ಪಸಿವಿಗರಿತವ ||
ರಂಜದಬಲಾವಧೆಗೆ ತಾಟಕೆ |
ಯಂ ಜಯಿಸಿದಬ್ಬರದ ಕೊಬ್ಬಿಂದುಬ್ಬಿ ನುಡಿದಪೆಯ ||೧೩||

ಪರೆಯತೆರದಿಂದೊಳಗೆ ಪೊಳ್ಳಹ |
ಹರನ ಧನುವನು ಮುರಿದೆನೆಂಬಾ |
ಗರುವಗರಮೆಡೆಗೊಂಡು ಒರುಚುವೆ ಯೆಮ್ಮೊಳಿಂತಕಟಾ ||
ತರಣಿವಂಶಜನೆಂದು ಬೆರೆತಿಹೆ |
ಧರಣಿಯಮರರನಣಕವಾಡುವೆ |
ವರವಸಿಷ್ಠನ ವರ್ಣಮಾವುದು ಗುರುವಲ್ತೈ ನಿನಗೆ ||೧೪||

ಎನುತೆ ನುಡಿಯಲು ಪರಶುರಾಮನು |
ದಿನಪಕುಲಮಣಿಯಿಂತು ನುಡಿದನು |
ಮುನಿಯೆ ನಿಮಗೇಕವರ ಗೊಡವೆಯು ದೈವವವರೆಮಗೆ ||
ತನುಮನಂಗಳೊಳೆಮ್ಮ ಕುಶಲವ |
ನನುದಿನದಿನರ್ಥಿಸುತೆ ಬೊಮ್ಮವ |
ಮನದೊಳೆಡೆಬಿಡದಿಹರ ಪೂಜಿಪುದೆಮ್ಮ ಕುಲಧರ್ಮ ||೧೫||

ಪದುಳಮಿರದನವರತವಾನೇ |
ಚದುರನಾನೇ ಶ್ರೇಷ್ಠನೆಂಬಾ |
ಮದದೆ ನಿಜಕುಲಜಾತಿಧರ್ಮವ ಬಿಸುಟು ದೂರದಲಿ ||
ಬುಧರ ಚರ್ಯೆಯು ಇಲ್ಲದವರನು |
ಸದೆದು ಬುದ್ಧಿಯನೊರೆವುದೆಮ್ಮಯ |
ಸದಮಲಾನ್ವಯಧರ್ಮವಾಬಿದನುಳಿಯಲೆಂತಹುದು ||೧೬||

ಶಾಪಕೀಡಾಗುತ್ತೆ ವನದಲಿ |
ತಾಪಸರನುರೆ ವಧಿಸುತಿರ್ದಾ |
ಪಾಪೆತಾಟಕೆಯೆಂಬಳನು ನಾನಂತು ನುಡಿಪಿದೆನು ||
ಚಾಪಲದೆ ನಿನ್ನವೊಲು ಮಾತೆಯ |
ನಾಪರಿಯಿನುರೆ ಮುದುಪರನು ಕಡು |
ಗೋಪದಿಂ ಪಸುಳೆಗಳನಾನೇಂ ಕೊಂದಿಹೆನೆ ಮುನಿಯೆ ||೧೭||

ಕಡುಗಿಡುಕತನದಿಂದೆ ಧರ್ಮ |
ಕ್ಕೆಡರನೆಸಗುವ ಖಳರ ತರಿವುದು |
ಪೊಡವಿಯಾಣ್ಮರ ಕರದ ಕಂಕಣದತುಳವರ್ಮವಿದು ||
ಪಿಡಿದಮಾತ್ರದೆ ಪರಶುವನು ನೀಂ |
ನಡೆಸಬಲ್ಲೈ ಕ್ಷಾತ್ರಧರ್ಮವ |
ಬಡಿಗೆಗಡಿಯುವ ಕೊಡಲಿಯಾದುದು ಸೇರಿ ನಿನ್ನನದು ||೧೮||

ಒಳ್ಳಿತಾಗಲಿ ಹರನ ಧನುವದು |
ಜಳ್ಳು ಮುರಿದೆನು ಹೋಗಲದು ಬಲ |
ವುಳ್ಳಪಂತವನೊಂದನೊಡ್ಡುತ್ತೆನ್ನ ಪರಿಕಿಸೆನೆ ||
ಒಲ್ಲಿದನು ನೀನಾದೊಡೀಗೀ |
ಬಿಲ್ಲಿಗೇರಿಸಿ ಹೆದೆಯನಂಬನು |
ಬಲ್ಲವಿಸಿ ಪೂಡೆನುತೆ ವೈಷ್ಣವಚಾಪವನು ನೀಡೆ ||೧೯||

ಲೀಲೆಯಿಂದದನಾಂತು ಕರದೊಳು |
ಮೇಲೆ ಸೇರಿಸಿ ಹೆದೆಯ ಹೂಡುತೆ |
ಕೋಲನೊರೆದನು ತೋರು ಭಾರ್ಗವ ಗುರಿಯನಿದಕೆಂದು ||
ಬೀಳುಕೊಂಡುದು ಮುನಿಯ ಧೈರ್ಯವು |
ತಾಳಿದನು ವಿಸ್ಮಯವ ಕಂಡನು |
ನೀಲಮೇಘಶ್ಯಾಮನವತಾರವನು ಬಾಲನಲಿ ||೨೦||

ಈತ ಸಾಕ್ಷಾತ್ಪರಮಪುರುಷನು |
ಭೂತಳದೆ ನರನಾಗಿ ದನುಜ |
ವ್ರಾತವನು ನಿಶ್ಶೇಷಗೈಯಲು ರಾಮನಾಮದಲಿ ||
ಪೂತವಾಗಿಹ ರಘುಕುಲದೆ ವಿ |
ಖ್ಯಾತರಾಮಾಯಣವ ಬೆಳಸಲು |
ಜಾತನಾಗೆಸೆದಪನು ನಮಗಿನ್ನಾಯ್ತು ಪರಿಣಾಮ ||೨೧||

ಇಂತು ಚಿಂತಿಸಿ ಮನದೆ ಮುನಿಪತಿ |
ಯಂತರಾತ್ಮನನೊಲಿದು ನೋಡುತ |
ಸಂತಹರ್ಷಿತನಾಗಿ ನುಡಿದನು ದೇವ ಚಿತ್ತೈಸು ||
ಶಾಂತವಾದುದು ಕೋಪಶಿಖಿ ತ |
ನ್ನಂತರಂಗದೊಳುರುವಿರಕ್ತಿಯ |
ದೆಂತೊ ಪೆರ್ಚಿತು ನಿನ್ನ ದರ್ಶನಮಾತ್ರದಿಂದೆನಗೆ ||೨೨||

ಆದರಿನೊಲಿದೀಗೆನ್ನ ಬೀಳ್ಕೊಡು |
ಬದರಿಕಾಶ್ರಮದತ್ತ ನಡೆವೆನು |
ಸದಮಲಾತ್ಮಧ್ಯಾನದಲಿ ಕಾಲವನು ಕಳೆಯುವೆನು ||
ಹೆದೆಯೊಳಳವಡಿಸಿರ್ಪ ಬಾಣದಿ |
ನೊದೆದು ಸಗ್ಗದ ಮೆಟ್ಟಿಲನು ಕಳೆ |
ಮುದದೆ ನೀನೆಂದೆನುತು ಮಾಶೀರ್ವದಿಸಿ ಪೊರಮಟ್ಟ ||೨೩||

ಉಬ್ಬಿದನು ದಶರಥನು ಮಗನನು |
ತಬ್ಬಿ ಮುಂಡಾಡಿದನು ಲೋಕದೆ |
ಹಬ್ಬವಾದುದು ಕಂದ ಬಾಹುಜಕುಲಕೆ ನಿನ್ನಿಂದ ||
ಸಬ್ಬರೀಜಮದಗ್ನಿಸುತನಿಂ |
ಮಬ್ಬು ಮುಸುಕಿದತೆರದೊಳಿರ್ದರು |
ದೆಬ್ಬಿಯವಸನು ಸಲಹಿದೈ ವಸುಧಾಧಿಪತಿಗಳನು ||೨೪||

ಪೊಗಳುತಿಂತವನಿಪನು ತನಯನ |
ನೊಗುಮಿಗೆಯ ಹರ್ಷದಿನಯೋಧ್ಯಾ |
ನಗರಿಯನು ಸೇರಿದನು ಕಂಡುದು ಬಂದು ನಿಖಿಲಜನ ||
ಮುಗಿದು ಕರಗಳ ಶಿರವ ಬಾಗಿಸಿ |
ರಘುವರನ ಚರಿತವನು ಕೇಳುತೆ |
ಬಗೆಯೊಳಾನಂದಿಸುತುಮಿರ್ದರು ಬಗೆಯದಿತರವನು ||೨೫||

---

ವಿದಿತಘನಕರ್ಣಾಟರಾಜ್ಯದ |
ಪದಕೊಡೆಯನಹ ಕೃಷ್ಣಭೂಪನ |
ಪದದ ಸೇವಕನೆನಿಪ ಚಿಕಲಿಂಗಾಖ್ಯಪಾರ್ಥಿವನು ||
ಪದೆದು ನುಡಿದನು ಬಾಲಕಾಂಡವ |
ನಿದನು ಸುಲಲಿತಭಾಮಿನೀಷ |
ಟ್ಪದಿಯೊಳಿದು ರಾಜಿಸುಗೆ ಸುಜನರ್ಗೊಲವನೊಡರಿಸುತೆ ||೨೬||

ಬಾಲಕಾಂಡಂ ಸಮಾಪ್ತಂ.

# ಅಯೋಧ್ಯಾಕಾಂಡವು.

ಸೂಚನೆ || ಅರಸಿಯಾಗಿಹಕೈಕೆ ರಾಮಂ |
ಗಿರದೆ ವನವಾಸವನು ಭರತಂ |
ಗುರುತರದ ರಾಜ್ಯವನು ಕೇಳಿದಳೊಲಿದು ದಶರಥನ ||

ಧರೆಯ ಮೇಲಣ ಸಕಲಸಂಪದ |
ಕೆರೆಯನೆನಿಸುತೆ ಚಾರುಯೌವನ |
ಭರದ ಸುತರಭ್ಯುದಯಸಾಮ್ರಾಜ್ಯಾಭಿಷೇಚಸದ ||
ನಿರುಪಮಾನಂದಾನುಭವದಿಂ |
ಮೆರೆಯುತಿಹ ದಶರಥಮಹೀಪತಿ |
ಯರಸುತನದಾಡಳಿತಮೆಳೆದುದು ನಿಖಿಲಜನಮನವ ||೧||

ಒಂದುದಿನದೆ ಯುಧಾಜಿತನು ಮನ |
ದಂದು ನಿಜಸೋದರಿಯ ತನುಜನ |
ನಂದು ಭರತನ ನೋಡಲೆಂದೈತಂದನೊಲವಿನೊಳು ||
ಬಂದಕೇಕಯರಾಜಸುತನನು |
ಮಂದಿರದೊಳುಪಚರಿಸೆ ಭೂಪತಿ |
ಕುಂದದೊಲವಿಂದವನು ಕಳೆಯುತೆ ಕೆಲದಿನವನಲ್ಲಿ ||೨||

ಭರತಶತ್ರುಘ್ನರಿಗೆ ಚಾಪದ |
ಪರಮವಿದ್ಯೆಯನರಿಪಲೋಸುಗ |
ವರಗಿರಿವ್ರಜಪುರಕೆ ಕಳುಹೆಂದರಸನನು ಬೇಡಿ ||
ತರಳರಿರ್ವರಸೊಲಿದು ತನ್ನೊಡ |
ನಿರದೆ ಕರೆದೊಯ್ಯಲ್ಕೆ ಬಳಿಕಿಳೆ |
ಯರಸ ತನ್ನಯ ಮನದೊಳಿಂತಾಲೋಚಿಸಿದನಾಗ ||೩||

ವರುಷ ಹನ್ನೆರಡಾಯ್ತು ಮಕ್ಕಳ |
ಪರಿಣಯೋತ್ಸವಮಾಗಿ ತನಗಿ |
ನ್ನರಸುಗೈವ ವಯಸ್ಸು ಜಾರಿತು ಶಕ್ತಿಯುಡುಗಿದುದು ||
ಹರೆಯದಾನಿಜತನುಜರೊಳಗಾ |
ರರುಹನೀಸಾಮ್ರಾಜ್ಯಲಕ್ಷ್ಮೀ |
ಕರಪರಿಗ್ರಹಕವನೊಳಿಡುವೆನು ಧರೆಯ ಭಾರವನು ||೪||

ಮಕ್ಕಳೊಳು ಮಾಣಿಕವು ರಾಮನು |
ಮಿಕ್ಕಶೂರನು ಜನಮನೋರಾ |
ಗಕ್ಕೆ ಪಾತ್ರನು ಮೇಣು ಹಿರಿಯನು ನಾಲ್ವರಣುಗರೊಳು ||
ತಕ್ಕನಿವ ಯುವರಾಜಪದವಿಗೆ |
ನಿಕ್ಕವಮಿದೆಂದರಿದು ಮನದೊಳ |
ಗಕ್ಕರಿಂದಾ ಪದವಿಯಿತ್ತನು ರಾಮಭದ್ರಂಗೆ ||೫||

ರಾಮನಾ ಯುವರಾಜಪಟ್ಟವ |
ಸೇಮದಿಂ ಕೈಕೊಳಲು ನೆಲದೊಳು |
ತಾಮಸದ ಪೆಸರಡಗಿತೆಲ್ಲಿಯುಮಖಿಳಮಾನವರಾ ||
ಪ್ರೇಮವಿಮ್ಮಡಿಸಿದುದು ಸುಜನರು |
ಕಾಮಿತಾರ್ಥವ ಪಡೆದು ತಣಿದರು |
ರಾಮರಾಜ್ಯಕ್ಕೆಣೆಯದೆಲ್ಲಿಹುದೆಂದುದಖಿಳಜನ ||೬||

ಎಲ್ಲಿ ನೋಡಿದೊಡಲ್ಲಿ ತೃಣಮಯ |
ಮೆಲ್ಲಿ ನೋಡಿದೊಡಲಿ ಜಲಮಯ |
ಮೆಲ್ಲಿ ಬಯಸಿದೊಡಲ್ಲಿ ಫಲಮಯಮಾದಭೂರುಹವು ||
ಖುಲ್ಲರುಪಟಳಮಿಲ್ಲಮೆಲ್ಲುಂ |
ಬಲ್ಲಿದರು ಬಡವರನು ಬಾಧಿಪ |
ಸೊಲ್ಲಡಗಿತಾರಾಮಚಂದ್ರನ ಯೌವರಾಜ್ಯದೊಳು ||೭||

ಜಾರಚೋರರ ಸುಳಿವು ನಿಂದುದು |
ಜಾರಿಪೋದುದು ಕಪಟವೃತ್ತಿಯು |
ದೂರದಲ್ಲಿಯೆ ನಿಂದುವಾ ಪರನಿಂದೆ ಪುಸಿವಾತು ||
ಬಾರಿಬಾರಿಗು ಮಿರದೆ ಪೀಡಿಪ |
ಮಾರಿಮಸಣಿಗಳುರುಬೆ ತಗ್ಗಿತು |
ಸಾರವೀಸಂಸಾರವೆನಿಸಿತು ರಘುಜನಾಳ್ಕೆಯೊಳು ||೮||

ನೋಡಿದನು ಭೂಪತಿಯು ಕುವರನ |
ನಾಡಿಗಚ್ಚರಿಯೆನಿಪ ನಡೆಗಳ |
ಮೂಡಿದನು ನಿಶ್ಚಯವನಿವನೊಳು ರಾಜ್ಯಭಾರವನು ||
ರೂಢಿಮೆಚ್ಚಲು ವಹಿಸಿ ಕಳೆವೆನು |
ನಾಡೆ ಕಾಲವನಿಂದುಮೌಳಿಯ |
ರೂಢಪದವನು ಪಿಡಿವ ವಾನಪ್ರಸ್ಥವೃತ್ತಿಯೊಳು ||೯||

ಎನುತೆ ನರಪತಿ ನೆರಹಿ ಸಭೆಯನು |
ವನಜಭವಸುತಮುಖ್ಯರಿಗೆ ನಿಜ |
ಮನದ ಸಂಕಲ್ಪವನು ಪೇಳಿದನುಚಿತವಚನದೊಳು ||
ಎನಗೆ ಬಂದಡಸಿದುದು ಮುಪ್ಪಿದು |
ತನುಬಲವು ಕುಂದುತ್ತೆ ಬಂದುದು |
ಮನುಕುಲೇಂದ್ರರ ಧರ್ಮವನು ನಿಮಗೊರೆವುದೇನಿಹುದು ||೧೦||

ಬಾಲತನವನು ವಿದ್ಯೆಯಿಂ ಜನ |
ಪಾಲನೆಯಿನಾ ಯೌವನವನುರು |
ಶೈಲಜೇಶನ ಸೇವೆಯಿಂ ವಾರ್ಧಕವನುರೆ ಕಳೆದು ||
ಮೇಲೆ ಕಾನನುವಿಡುವಸಮಯದೆ |
ಮೇಲುಮುಕುತಿಯ ಸೂರೆಗೊಳುವುದೆ |
ಶೀಲವೆಮ್ಮಯ ವಂಶಭವರಿಗೆ ಯೋಗಮಾರ್ಗದೊಳು ||೧೧||

ನಿಮ್ಮನಾನಿದನೊಂದನರ್ಥಿಪೆ |
ನೊಮ್ಮನದೆ ಗುಣಿರಾಮಚಂದ್ರನ |
ಸೊಮ್ಮು ನಮ್ಮಯ ರಾಜ್ಯವಿದು ಮೇಣ್ಮಕ್ಕಳೊಳು ಪಿರಿಯಂ ||
ಸಮ್ಮತಿಯ ನೀವಿತ್ತೊಡೀಗಳೆ |
ನೆಮ್ಮದಿಯನಾನುತ್ತುಮಾತಂ |
ಗುಮ್ಮಹದೆ ಪಟ್ಟವನು ಕಟ್ಟುವೆನೆಂದನವನೀಶ ||೧೨||

ಕೇಳಿದೊಡನೆಯೆ ಭೂಪನಗಲಿಕೆ |
ಗಾಲಿನೀರ್ದುಂಬಿದರು ಸಭಿಕರು |
ಕಾಲವಾರನು ಕೀಳುಗೈಯದೆನುತ್ತೆ ಮರುಗಿದರು ||
ಮೇಲೆ ರಾಮಂಗಿಗಪ್ಪುದಿಳೆಯೆನೆ |
ತಾಳಿದರು ಹರುಷವನು ಸದ್ಗುಣ |
ಶಾಲಿಗಾತಗೆ ರಾಜ್ಯವೀವುದು ನಮಗೆ ಸಂಮತವು ||೧೩||

ದೇವ ನಿನ್ನಾಜ್ಞೆಯನು ಶಿರದೊಳ |
ಗಾವು ಧರಿಸುತೆ ಸಿದ್ಧರಪ್ಪೆವ |
ದಾವಕಾಲದೊಳೆಂಬುದನು ಬೆಸಸುವುದು ನೀನೆನಲು ||
ಕೋವಿದರೆ ಸುಕುಮಾರರಾಮಂ |
ಗೀವೆನಾಂ ರಾಜ್ಯವನು ನಾಳೆಯೆ |
ನೀವು ಸಕಲವ ಸಜ್ಜುಗೊಳಿಸುವುದೆಂದನಾ ನೃಪತಿ ||೧೪||

ಕೇರಿಕೇರಿಯೊಳನುಪಮಧ್ವಜ |
ತೋರಣಂಗಳ ಸಾಲು ಚಿತ್ರಾ |
ಕಾರವೆನಿಪಾ ಮೇಲುಕಟ್ಟುಗಳೆಸೆದುವಲ್ಲಲ್ಲಿ ||
ತೋರಮುತ್ತಿನ ಗುದಿಗಳೊಪ್ಪಿರೆ |
ಚಾರುಸಿಂಹಾಸನದ ಬಳಿಯೊಳು |
ಭೂರಮೆಯು ಶ್ರೀರಾಮಚಂದ್ರನ ಸೇರಲೆಳಸಿದಳು ||೧೫||

*

ಅರಸನನುಮತದಿಂದೆ ತೆರಳ್ದಾ |
ಗುರುವಸಿಷ್ಠನು ರಾಮಭದ್ರಂ |
ಗರುಹಲಾತನುಮಾರನೆಯದಿನ ಮಜ್ಜನದಬಳಿಕ ||
ಮೆರೆವ ಮಣಿಮಯಭೂಷಣವನುರೆ |
ಧರಿಸಿ ಶುಭತಾರೆಯೊಳು ನಿಜಸತಿ |
ವೆರಸಿ ಮುದದಿಂ ಪಟ್ಟದಾನೆಯನೇರಿ ತಳರಿದನು ||೧೬||

ಪೇಳಲೇನದ ಮೊರೆವ ವಾದ್ಯವಿ |
ಶಾಲನಿನದಕೆ ಜಗವು ಕಿವುಡಿಡೆ |
ಮೇಲೆಮೇಲೈತಪ್ಪ ಜನಗಳ ಭರಕೆ ನೆಲನದಿರೆ ||
ಬಾಲೆಯರು ಬೆಳಗುತಿರೆ ತಂದು ನಿ |
ವಾಳಿಯನು ಪೊಂದಟ್ಟೆಗಳೊಳಾ |
ನೀಲಮೇಘಶ್ಯಾಮನೈತರುತಿರ್ದನರಮನೆಗೆ ||೧೭||

ತಿಳಿದಳೀಯುತ್ಸವವ ಕೈಕೆಯ |
ಬಳಿಯ ಮಂಥರೆಯೆಂಬ ದಾಸಿಯು |
ಮುಳಿದಸೂಯೆಯನಾಂತು ಮನದೊಳು ಪಿಸುಣೆ ಕುದಿಯುತ್ತೆ ||
ಗಳಿಲನೊಡತಿಯ ಸನಿಹಕೈತಂ |
ದಳಿದುಪೋದುದು ನಿಮ್ಮ ವೈಭವ |
ಮಿಳೆಯೊಳಾವಿನ್ನಾರನೈದುವೆವೆನುತೆ ಹಲುಬಿದಳು ||೧೮||

ಏನಿದೇನೆಲೆ ತನಗಪಾಯವ |
ದೇನು ಬೇಗದೆ ವಿವರಿಸೆನುತಾ |
ಮಾನವೇಶನ ಮಡದಿ ತವಕದೆ ಕೇಳಲದಕವಳು ||
ಮಾನನಿಧಿ ಕೇಳ್ತಾಯೆ ನಿಮಗಹ |
ಹಾನಿಯನು ನಾನೇನನುಸಿರಲಿ |
ಸಾನುರಾಗದೆ ರಾಜ್ಯವೀವನು ನೃಪತಿ ರಾಮಂಗೆ ||೧೯||

ರಾಮನರಸಾಗಲ್ಕೆ ಬಳಿಕು |
ದ್ದಾಮನಹ ನಿನ್ನಯ ಕುಮಾರನು |
ಗೋಮಹಿಷಿಗಳ ಕಾವ ಗೋಪಾಲಕನು ತಾನಹನು ||
ಕಾಮಿನೀಜನಕೆಲ್ಲ ಸುಲಭವೆ |
ಭೂಮಿಯಾಳುವ ಸುತರ ಪಡೆವುದು |
ಭಾಮಿನೀಮಣಿ ಕೋಸಲಾತ್ಮಜೆಯೇನನೋಂತಿಹಳೋ ||೨೦||

ಎನಲು ಮಂಥರೆ ಕೇಳಿ ಕೇಕಯ |
ತನುಜೆ ಕನಲಿಕೆಯಾಂತು ನುಡಿದಳು |
ಮನುಕುಲಾಗ್ರಣಿ ರಾಮಭದ್ರಂಗಾಗೆ ರಾಜ್ಯವಿದು ||
ನಿನಗೆ ಸಂಕಟವೇನು ಕಿಲುಬಿನ |
ಮನದ ತೊತ್ತೇ ಸಾಕುಸಾಕೀ |
ಬಿನುಗುವಾತಿನ ಬವಣೆ ಕಲಹವನೆಸೆದೊಳಿಕ್ಕುವೆಯ ||೨೧||

ತನ್ನ ಜನನಿಯು ಬೇರೆ ನಾಂ ಬೇ |
ರೆನ್ನುವಾ ಕವಡಿಲ್ಲ ಮನದೊಳ |
ಗೆನ್ನ ಮಗನೊಳು ನಲವು ಬಲ್ಲಿತು ಜಾನಕೀಪತಿಗೆ ||
ಸನ್ನುತಾಂಗಿಯು ಕೌಸಲೆಯು ತಾಂ |
ಭಿನ್ನಭೇದವನೆನ್ನೊಳೆಣಿಸಳು |
ಕುನ್ನಿ ನಿನಗೇಕೆಮ್ಮ ಚಿಂತೆಯು ಸುಮ್ಮನಿಹುದೆನಲು ||೨೨||

ಅಕ್ಕಟೇನೀರೀತಿಯಾಯಿ |
ತ್ತಕ್ಕರಿಂ ನಾನೈದಿ ಪೇಳ್ವುದು |
ಟಕ್ಕುಟೌಳಿಗೆ ಕಾಲವಿದನಾನರಿಯದಾದೆನಲಾ ||
ಇಕ್ಕಿದೆನು ನಾಂ ನಿಮಗೆ ವಿಷವನು |
ಸಕ್ಕರೆಯನುಣಿಪವರ ನುಡಿ ಸವಿ |
ಯಕ್ಕೆ ನನ್ನಯ ನುಡಿಯ ಮನ್ನಿಪುದೆನುತೆ ತಿರುಗಿದಳು ||೨೩||

ಕರೆಕರೆವುದಾ ವಾಪಿಯನು ನ |
ಮ್ಮರಸುತನವನು ಸರಕುಗೈವಳೆ |
ಪಿರಿದುಸಲುಗೆಯು ನಮ್ಮೊಳಿವಳಿಗೆ ಮೇಣು ಬಹುವೃದ್ಧೆ ||
ತಿರುಗಿವುದು ನೀವೆನಲು ದೂತಿಯ |
ರಿರದೆ ತಡೆದೊಡಗೊಂಡು ಕರೆತರೆ |
ಕರುಬುಗಾರ್ತಿಯನೇಕೆ ಬರಿಸಿದಿರೆಂದಳಾಕುಬುಜೆ ||೨೪||

ಎಲೆಗೆಮಂಥರೆ ನಿನ್ನ ನುಡಿಗಳು |
ಕಲಹಬೀಜಗಳಲ್ಲವೇನೆನೆ |
ಕಲಹಕಂಜಿದವರ್ಗೆ ಸುಖಮೊದವುವುದೆ ಪೇಳೊಡತಿ ||
ಇಳೆಯು ರಾಮಂಗಾಗೆ ಕೌಸಲೆ |
ತಳಕೆ ತುಳಿಯಳೆ ನಿಮ್ಮ ಮೊದಲಿನ |
ಸಲಿಗೆ ಬರ್ಪುದೆ ರಾಣಿವಾಸದ ಕಾರ್ಯಭಾರದೊಳು ||೨೫||

ಸರಿಬರಿಯ ಪದವಿಯನು ತಾಳುತೆ |
ಧರಣಿಪನ ಮನದಣ್ಪನಾಳುತೆ |
ಪಿರಿಯಸುಖದಿಂ ಬೆಳೆದಿರೌ ನೀವಿಲ್ಲಿ ಪರಿಯಂತ ||
ಅರಸಮಾತೆಯೆನಿಪ್ಪ ಮಿಗಿಲಹ |
ಗರವಿಡಿಯೆ ಕೌಸಲ್ಯೆ ನಿಮ್ಮನು |
ತರಗೆಲೆಗೆ ಕಡೆಯಾಗಿ ಕಾಣದೆ ಬಿಡುವಳೇ ತಾಯೆ ||೨೬||

ನಿಮ್ಮ ಹವಣೀತೆರದೊಳಾಗಲು |
ನಮ್ಮ ಪಾಡನು ಪೇಳಲಳವೇ |
ಕೆಮ್ಮು ಕೇಕರಕಿನಿಸುವೂದಲೆಗಳನು ತೋರಿಸುತೆ ||
ಸುಮ್ಮನೆಮ್ಮನು ತಿರುಗಲೀವರೆ |
ಹಮ್ಮುಗಾತಿಯರವರ ಕಡೆಯವ |
ರಮ್ಮೆವಿನ್ನಿಲ್ಲಿರಲು ದೇವಿಯೆ ನಮ್ಮ ಕಳುಹುವುದು ||೨೭||

ಧರಣಿಪಾಲನ ಮನವ ತಿದ್ದುತೆ |
ಭರತಶತ್ರುಘ್ನರನು ದೇಶಾಂ |
ತರಕೆ ದಾಟಿಸಿ ವಿಹಿತವಿದ್ಯಾಭ್ಯಾಸಕೆಂದೆನುತೆ ||
ಭರದಿನೆಲ್ಲವ ಸಜ್ಜುಗೊಳಿಸುತೆ |
ಕುರುಹುದೋರದತೆರದೆ ತನಯಂ |
ಗರಸುಪಟ್ಟವ ಬಿಗಿಸುತಿಹಳಾಚದುರೆ ಕೌಸಲ್ಯೆ ||೨೮||

ಜನನಿಯಲ್ಲವೆ ನೀವು ಮೆಚ್ಚಿನ |
ತನಯನಲ್ಲಾ ರಾಮನವನೀ |
ದಿನದೆ ತನಗಹ ವೈಭವವನುಸಿರಿದನೆ ನಿಮ್ಮೊಡನೆ ||
ಘನವೆನಗೆ ನಿನ್ನಲ್ಲಿ ಕೂರ್ಪೆಂ |
ದೆನುತೆ ನುಡಿಯುತ್ತಿರ್ದ ಸೋದರಿ |
ಯನುನುವು ಚಿತ್ತಕೆ ಬಂದುದೇ ಮೇಣಿನ್ನು ಸಂಶಯವೆ ||೨೯||

ಬರೆಯಿಸೋಲೆಯ ಸೀಮೆಸೀಮೆಯ |
ಧರಣಿಪಾಲರ ನೆರಹಿ ಮೆಲ್ಲನೆ |
ವರಮಹೋತ್ಸವಮಿದನು ಬೆಸಸುವರೂಢಿ ರಘುಕುಲದೆ ||
ತೊರೆದು ಘನವೀಮಾರ್ಗವನು ತ |
ನ್ನರಮನೆಯ ಮಕ್ಕಳುಮನುಳಿದೀ |
ತುರಿಪದಿಂದಾಗಿಸುವ ವಿಘವವ ದೇವಿಯುವಧರಿಸು ||೨೦||

ಪೇಳಲೀಕಥೆ ಮುಗಿವುದೇನೌ |
ಕೇಳುತಿದೆ ಭೇರೀನಿನಾದವ |
ದೇಳಿಮೊಯ್ಯನೆ ತಕ್ಕುಪಾಯವನೆಸಗಿಮಿನ್ನೆ ಸಲು ||
ಆಳಿಯಾ ಚತುರೋಕ್ತಿಗಾಸತಿ |
ಮೌಳಿದೂಗುತೆ ಮನವ ಸೋತಳು |
ಜೋಲುಬೀಳದ ಕಿವಿಗಳುಂಟೇ ಪಿಸುಣೆಗರ ನುಡಿಗೆ ||೨೧||

ಎಲವೊ ಮಂಥರೆ ನಿನ್ನ ನುಡಿಗಳು |
ನಲವಬಯಸುವುವೆನ್ನ ಮಗನಿಗೆ |
ಹಲವು ಕೆಳದಿಯರಿದ್ದು ಫಲವೇನೆನ್ನ ನಿಳಯದೊಳು ||
ಒಲುಮೆಮಾತುಗಳಾಡುತೆಮ್ಮನು |
ಸುಲಿದು ತಿಂಬವರಲ್ಲದೀಪರಿ |
ಸಲಹಿದೊಡೆಯಗೊಳ್ಳಿತೆಸಗುವರುಂಟೆ ನಿನ್ನವೊಲು ||೨೨||

ಪರಮಹಿತಚಿಂತಿನಿಯೆ ನೀನೀ |
ಗೊರೆವುದೆನ್ನೊಳು ಮುಂದೆಯೆನ್ನಯ |
ತನಯನಿಗೆ ಶುಭವಪ್ಪುಪಾಯವದಾವುದಿರ್ದಪುದು ||
ಅರಿಯೆನಾನಿದನೆನಲು ಮಂಥರೆ |
ಯರಸಿಗುಸಿರಿದಳಮನು ಕಿವಿಯೊಳು |
ಸುರರುಘೇಯೆನೆ ನರರು ಛೀಯೆನೆ ಬೀಜಮಂತ್ರವನು ||೨೩||

ಅರಸಿ ದೇವಾಸುರರ ಯುದ್ಧದೊ |
ಳರಸನಿತ್ತಿಹನೆರಡುವರಗಳ |
ವರಕದೊಂದಕೆ ರಾಮ ಜಡೆನಾರುಡೆಗಳನು ಧರಿಸಿ ||
ತೆರಳಿ ಪದಿನಾಲ್ಕಬುದ ವನದೊಳು |
ಚರಿಸುವುದು ಮತ್ತೆರಡನೆಯವರ |
ಕಿರದೆ ಬೇಡುವುದರಸುಪಟ್ಟವನಿಂದು ಭರತಂಗೆ ||೨೪||

ವೃದ್ಧರಾಯನ ಬುದ್ಧಿ ಚಪಲವು |
ಮುದ್ದು ಬೀರುವರತ್ತಲೊಲಿವುದು |
ಹೊದ್ದುವುದು ನೀನವನನೀಗಳೆ ಸದ್ದುಗುಡದಂತೆ ||
ಬಿದ್ದು ಪಾದಕೆ ಬಿಡದೆ ಕಲಿತಿಹ |
ಬುದ್ಧಿಯೆಲ್ಲವ ತೋರಿಯೊಲುಮೆಯ |
ಮದ್ದನೂಡಿಸಿ ಗೆದ್ದುಕೊಂಬುದು ನಿಮ್ಮ ಕಾರ್ಯವನು ||೩೫||

ಎನುತೆ ಮಂಥರೆ ಕೈಕೆಯಾ ಮನ |
ದೆಣಿಕೆಯನು ಪರಿಹರಿಸಲಾಕ್ಷಣ |
ವನಿತೆ ಪೊಂದೊಡವುಗಳನೆಲ್ಲವ ಬಿಸುಟು ನೆಲಕೊರಗಿ ||
ಇನಿಯನೈತಹಸಮಯವರಿದುರೆ |
ನನೆದು ಲೋಚನಜಲದೆ ತನ್ನಯ |
ಮನದ ಬಯಕೆಯ ಪಡೆಯೆ ನಾನಾನಟನೆದೋರಿದಳು ||೩೬||

ಅರಸ ದಶರಥನಾಗ ತನ್ನಯ ।
ವರಕುಮಾರನ ರಾಜ್ಯಲಾಭದ |
ಪಿರಿಯಸುದ್ದಿಯನಾಕೆಗರುಹುವ ಕುತುಕದಿಂ ಬಂದು ||
ಅರಸಿಯಿರವನು ಕಂಡು ಜಗ್ಗನೆ |
ಬೆರಗನಾನುತೆ ನಿಂದಿದೇನೀ |
ತೆರದ ದುಗುಡವು ತೊಡರಿಕೊಂಡುದು ನಿನಗೆ ಮನದನ್ನೆ ||೩೭||

ಇದಕೆ ಕಾರಣವೇನು ನುಡಿನುಡಿ |
ಕೆದರಿತೇಕೀಕೇಶಪಾಶವು |
ವದನ ಕಳೆಗುಂದಿಹುದು ರನ್ನದ ತೊಡವು ಚದರಿಹುದು ||
ಸುದತಿ ನಿನಗೀಪರಿ ಮನೋವ್ಯಥೆ |
ಯೊದವಿತಾರಿಂದೆನುತೆ ಗಲ್ಲವ |
ಮುದದೆ ಪಿಡಿಯುತೆ ಮುದ್ದಿಸಿದನಾಕಪಟಹೃದಯೆಯನು ||೩೮||

ಕಾಂತ ನಿನ್ನೊಳಗಲ್ಲದೆನ್ನೀ |
ಯಂತರಂಗವನಾರೊಳುಸಿರಲಿ |
ಚಿಂತೆಯಡಸಿದೊಡಾರು ಪರಿಹರಿಸುವರು ನೀನುಳಿಯೆ ||
ಪಿಂತೆ ದೇವಾಸುರರ ಯುದ್ಧದೆ |
ಸಂತಸದೆ ನೀನೆರಡುವರಗಳ |
ಕಾಂತೆ ನೀಂ ಕೇಳ್ದಂದು ಕುಡುವೆನೆನುತ್ತೆ ವಚಿಸಿರುವೆ ||೩೯||

ಜನಪತಿಯನರ್ಥಿಸಲು ತಕ್ಕುವೆ |
ಧನಕನಕವಸ್ತುಗಳು ಲೋಕದ |
ಜನಕೆ ದುರ್ಲಭಮೆನಿಸಿಪವರವನು ಬೇಡಬೇಕೆನುತೆ ||
ಇನಿತುದಿನ ಕಾದಿರ್ದೆಸದು ತಾ |
ನೆನಗೆಗೋಚರವಾದುದೀಗಳು |
ಘನಮನೋರಥವಿದನು ಬೇಡುವೆನಭಯವೀಯೆನಲು ||೪೦||

ಅರಸಿ ನಿನ್ನುಪಕಾರವನು ನಾಂ |
ಮರೆಯಲಾರ್ಪೆನೆ ದೇಹಮುಳ್ಳ |
ನ್ನೊರೆವುದೇನಾ ವರಗಳೆಂಬವನೀಗಳಿತ್ತಪೆನು ||
ತಿರುಗುವರೆ ಸತ್ಪಥವನುಳಿದಾ |
ಧರಣಿಪಾಲರು ಕೋಮಲಾಂಗಿಯೆ |
ಭರವಸವ ಕೊಳ್ಳೆನುತೆ ಬಡಿದನು ಸತಿಯ ಕರತಲವ ||೪೧||

ವರಕದೊಂದಕೆ ಜನಪ ಬಳಿಯಿಸು |
ಭರತನಿಗೆ ಪಟ್ಟಾಭಿಷೇಕವ |
ನೆರಡನೆಯ ವರಕಿಂದು ಕಳುಹಿಸು ರಾಮನನು ವನಕೆ ||
ಧರಿಸಿ ಜಟೆಯನು ತವಸಿನಾರುಡೆ |
ವೆರಸಿ ತಾಂ ಪದಿನಾಲ್ಕುವರಿಸವು |
ಚರಿಸುತಿರಬೇಕಡವಿಯೊಳಗಿವನೆಂದಳಾಕೈಕೆ ||೪೨||

ಕಾದಲೋಹದ ಸರಳು ಕಿವಿಯೊ |
ಳ್ಕೋದವೋಲ್ಪರಿತಪಿಸಿ ಭೂಪತಿ |
ಹಾ ದುರಾತ್ಮಕೆ ಯೆನುತೆ ಬಿದ್ದನು ಮೂರ್ಛೆ ತಲೆದೋರೆ ||
ಆ ಧರಾಧಿಪನಿರದೆ ಯೆಚ್ಚ
ತ್ತಾದುದೇನಿದು ತನಗೆ ಚಿತ್ತವಿ |
ಷಾದಮಿಂದೇಕೆನುತೆ ನೆನೆದನು ಸತಿಯ ಸಂಗತಿಯ ||೪೩||

ಎಲೆಲೆಘಾತುಕೆ ಘೋರಪಾತಕೆ |
ಕುಲವಿದೂಷಕೆ ನೆನೆದೆಯೇನನು |
ಕಲುಷಮಾನಸೆ ನಿನಗೆ ರಾಮನದೇನಗೈದಿಹನು ||
ಕಲಿತೆಯೆಲ್ಲಿದನಾವಳೀಪರಿ |
ಯೊಲಿಸೆ ನಿನ್ನನು ಬೋಧಿಸಿದಳಿಂ |
ತುಲಿಯಬಹುದೇ ನೀಚವಾಕ್ಯವನೆನ್ನ ಸಂಮುಖದೆ ||೪೪||

ಪೆತ್ತ ಮಾತೆಯೊಳಿರ್ಪ ಮಮತೆಗೆ |
ಪತ್ತು ಪಾಲಧಿಕವಲೆ ನಿನ್ನೊಳ |
ಗುತ್ತಮೋತ್ತಮರಾಮಚಂದ್ರಂಗಿದನು ನೀನರಿದು ||
ಸತ್ಯವಂತನು ನಿಮ್ಮ ಬಾಲಕ |
ನತ್ಯಧಿಕಗುಣಶಾಲಿಯೆಂಬಾ |
ಚಿತ್ತ ಪಾಳಿಗೆತ್ತಲಡಗಿತೆ ಮೃತ್ಯುದೇವತೆಯೆ ||೪೫||

ಅರಿಯಬಾದೆಸು ಮುನ್ನ ನಿನ್ನನು |
ಕೊರಲಮುರಿಯುವ ಮಾರಿಯೆಂಬುದ |
ಸರಳಹೃದಯೆಯೆನುತ್ತೆ ನಂಬಿದುದಕ್ಕೆ ಫಲವಾಯ್ತು ||
ಮೆರೆವ ಕೇಕಯವಂಶದಿಂ ಬಂ |
ದುರುವ ರವಿಕುಲದಾಣ್ಮನನು ಸೇ |
ರ್ದೆರಡುಮನೆಗಳ ಹೆಸರನಳಿಸಿದೆ ಕಷ್ಟವನು ಬಗೆದೆ ||೪೬||

ತಿಲಕಮಿಲ್ಲದವದನವಿಂದುವ |
ಕಳೆಯಿನೆಸೆಯದ ಗಗನಮಾತ್ಮಜ |
ರುಲಿಯನರಿಯದ ಸದನ ರಾಮನ ಚೆಲುವಮೂರುತಿಯ ||
ಸುಳಿವಕಾಣದಯೋಧ್ಯೆಯಿದ್ದುಂ |
ನೆಲದೆ ಫಲವೇನಕಟ ಶೂನ್ಯವು |
ಲಲನೆ ಚಲವಿದನುಳಿದು ರಾಮನ ಸಲಹು ನೀನೆನಲು ||೪೭||

ರಾಯ ನಿನ್ನನು ಕಾಡುತೇನ |
ನ್ಯಾಯದಿಂದೀವರವ ನೆಳೆದೆನೆ |
ಕಾಯಸಾಕ್ಷ್ಯದೊಳಿದನು ನೀದವಳಲ್ಲ ಮನದೊಳಗೆ ||
ತೋಯಜಾಕ್ಷಿಯೆ ನಿನಗೆ ಮೆಚ್ಚಿದೆ |
ನೀಯುವೆನು ವರವೆರಡ ಬೇಡೆಂ |
ದಾಯುಧವ ಪಿಡಿಯುತ್ತೆ ನುಡಿಯೆಯು ಸುರರ ಸಾಕ್ಷ್ಯದೊಳು ||೪೮||

ಹೇಯಮಾಗಿಹ ಸುತನ ಮೇಲಣ |
ಮಾಯೆ ಬೀಸಿದ ಮೋಹಭರದಿಂ |
ನ್ಯಾಯಮೆಂಬುದ ಮರೆದು ನಿನ್ನನು ದೂರುವುದು ತರವೇ ||
ಗಾಯವಡೆದುದು ಕುಲವು ನಿನ್ನಿಂ |
ಮಾಯಿಸುವ ಮದ್ದಿಲ್ಲಲಾ ಹೋ |
ಗಾಯಿತಿನ್ನಿದಕೀಗ ಚಿಂತಿಸೆ ಫಲವದೇನಹುದು ||೪೯||

ಒಂದೆಪರಮಾನ್ನವನು ಸಮವಾ |
ಗಂದು ಭಾಗಿಸಿಯಿತ್ತು ಪುತ್ರರೊ |
ಳಿಂದು ಭೇದವನೆಸಗಲೆಣಿಸದೆ ಮೊದಲು ಚಿಂತಿಸದೆ ||
ಮಂದಮತಿಯಿಂ ಗೈದಮೋಸವ |
ತಂದದಾರೊಳು ಹೊರಿಸಲೆಳಸುವೆ |
ಚಂದಮಲ್ಲಿದು ರಮಣ ನಿನಗೀಪರಿಯ ಜಾರಿಕೆಯು ||೫೦||

ಪುಟ್ಟಿಸಿದಮಾತ್ರದೊಳು ಮಗನೊಳ |
ಗಿಟ್ಟಿರುವೆ ನೀನಿನಿತುಮಮತೆಯ |
ಹೊಟ್ಟೆಯಲಿ ನವಮಾಸವಾನುತೆ ಪೆತ್ತಸುತನೊಳಗೆ ||
ಎಷ್ಟುಮಮತೆಯೊ ಈಕೆಗೆಂಬುದ |
ಮುಟ್ಟಿಮನದೊಳಗರಿದು ನೋಡದೆ |
ಕೆಟ್ಟು ನುಡಿವರೆ ನನ್ನೊಳೇನಪರಾಧಮವನಿಪನೆ ||೫೧||

ರಾಮನಿಗೆ ಸಾಮ್ರಾಜ್ಯಪದವಂ |
ಪ್ರೇಮದಿಂದೀಗಿತ್ತು ಕೌಸ |
ಲ್ಯಾಮನವನನುಸರಿಸಿ ಸುಖದಿಂದಿರ್ದು ನೀಂ ಬದುಕು ||
ನೇಮವೀಯೆನಗಿನ್ನು ಕಾಂತನೆ |
ತಾಮಸವನಾಂ ಗೈಯದೀಗಳೆ |
ಆಮಹೋಗ್ರದ ವಿಷವ ಸೇವಿಸಿಯುಸುವ ನೀಗುವೆನು ||೫೨||

ಎಂದುನುಡಿದೊಡನೆದ್ದು ಮಡದಿಯ |
ನಂದು ಪಿಡಿದಾರಾಯನೆಂದನು |
ಸುಂದರಾಂಗಿಯೆ ನಿನ್ನ ಮಾತಿನೊಳಿಲ್ಲ ಕವಲುಗಳು ||
ಮುಂದನರಿಯದೆ ನುಡಿದು ನಾನೀ |
ದಂದುಗಕ್ಕೊಳಗಾದೆನೀಗಳು |
ವಂದಿಪೆನು ನಿನಗಕಟ ಕರುಣವ ಬೀರಿ ನೀನುಳುಹು ||೫೩||

ಮೆರೆಯುತಿರ್ಪಿಕ್ಷ್ವಾಕುಕುಲದೊಳು |
ನೆರೆ ಪರಂಪರೆಯಾಗಿ ಬಂದಿಹ |
ಪಿರಿಯ ಮಗನಿಗೆ ರಾಜ್ಯವೆಂಬಾ ಪದ್ಧತಿಯನುಳಿಯೆ ||
ಕಿರಿಯ ಹೆಂಡತಿಯೊಲುಮೆಗೋಸುಗ |
ಮರಸನೀಪರಿಗೈದನೆಂಬರು |
ಧರೆಯೊಳೆನಗಪಕೀರ್ತಿ ತಪ್ಪದು ಕಾಂತೆ ನೀನರಿಯೆ ||೫೪||

ಸವತಿಯಾತ್ಮಜನಿರವ ಸೈಸದೆ |
ಯುವತಿಯಟ್ಟಿದಳಮನು ಕಾಡಿಗೆ |
ಕವಡೆಗಿಂ ಕಡೆಯಾಗಿ ಕಾಣುತೆ ಮುಪ್ಪಿನಿನಿಯಸನು ||
ಬುವಿಯೊಳವತರಿಸಿರ್ಪ ಮಾರಿಯೆ |
ಇವಳು ಮಾನವಿಯಲ್ಲಮಿವಳಿಂ |
ಶಿವಶಿವಿಂತಾಯ್ತೇನಯೋಧ್ಯೆಯಿದೆಂಬುದೀಲೋಕ ||೫೫||

ತರಣಿಹಿಮಕರರಿರ್ಪವರೆಗಂ |
ಧರಣಿತಲದೊಳ್ ನಿನಗಮೆನಗಂ |
ದುರುಯಶವನೊಂದಿಸುವಕಾರ್ಯವನಿಂತು ಬಳಸುವರೆ ||
ಸುರರ ಸುದತಿಯರಿದನು ತಾಂ ಕಂ |
ಡಿರದೆ ಕೈಗಳ ಹೊಯ್ದು ನಗರೇ |
ಸರಸಿ ನೀನಿದನುಳಿದು ಬೇಡಿನ್ನಿತರವರಗಳನು ||೫೬||

ಕಂದರಾಮನನುಳಿದು ಹರಣವ |
ನೊಂದುನಿಮಿಷವು ಧರಿಸಲಾರೆನು |
ಕೊಂದಳೈ ನಿಜಪತಿಯನಿವಳೆಂಬೊಂದು ಪೊಸಪಳಿವು |
ಒಂದುವುದು ತಾಂ ನಿನ್ನುಮಂ ಒಳಿ |
ಕೊಂದಿ ವೈಧವ್ಯವನು ಜಾಳುವು |
ದಂದವಲ್ಲಿದು ರಮಣಿ ಬಿಡು ನಿನ್ನಲ್ಪಬುದ್ಧಿಯನು ||೫೭||

ಅರಸನೀಪರಿ ಬೆಸನಮೊಂದಿರೆ |
ಪಿರಿಯಸಚಿವನು ವರಸುಮಂತ್ರನು |
ಹೊರಗೆ ಸಮಯವನೀಕ್ಷಿಸುತ್ತಿಹನೆಂಬಸಂಗತಿಯ ||
ಅರಿಪೆ ಚೇಟಿಯು ಕರೆದುತಹುದೆನ |
ಲಿರದೆ ಬಂದನು ಕಂಡನವನಿಪ |
ನಿರವನುರೆ ಬೆಸಗೊಂಡನಿದಕೆ ನಿಮಿತ್ತಮೇನೆನುತೆ ||೫೮||

ಪೇಳು ಮಂತ್ರಿಯೆ ಮೊದಲು ನೀಂ ಬಂ |
ದೂಳಿಗವ ಬಳಿಕಾನೊರೆವೆನಿ |
ನ್ಮಾಳಿದನ ಚರಿತವನೆನುತ್ತಾತ್ಕೈಕೆ ನಿರವಿಸಲು ||
ತಾಳಿ ದುಗುಡವನರಿದನೀಕೇ
ಡಾಳಿಯಿಂ ಭೂಮಿಪನ ಬಗೆ ತಾಂ |
ಕೋಳುಹೋಗಿಹುದೆನ್ನುತೊರೆದನು ಬಂದಸಂಗತಿಯ ||೫೯||

ತಾಯೆ ಬಿನ್ನಹ ಬಂದು ನೆರದಿದೆ |
ರಾಯಸಭೆ ಮೇಣ್ಸಕಲವರ್ಣದ |
ನಾಯಕರು ವರ ಸಚಿವರಾಪ್ತನಿಯೋಗಿಜನದೊಡನೆ ||
ಕಾಯಜೋಪಮರಾಮಚಂದ್ರನು |
ಚಾಯೆಯಂತಿಹ ಸೀತೆಯೊಡನಾ |
ರಾಯವಾಗಿಲ ಬಳಿಯೊಳೆಸೆವನು ಭದ್ರಗಜಮಿಳಿದು ||೬೦||

ರಾಮನೆಂಬೀಮಾತು ಬೀಳ |
ಲ್ಕಾಮಹೀಶನ ಕರ್ಣಕಾಗಳೆ |
ರಾಮ ಜಗದಭಿರಾಮ ನಿರ್ಮಲನಾಮನೈದಿದನೆ ||
ಆಮನೋರಮನೇಕೆ ಬಂದಪ |
ನೀಮಹೋರಗಿಯವನ ಬಿಡುವಳೆ |
ಹಾ ಮಹಾಮತಿ ರಕ್ಷಿಸೈ ಯೆನುತರಸ ಮೈಮರೆದ ||೬೧||

ಒರೆಯಲೇನನು ಮಂತ್ರಿ ಭೂಪನ |
ಚರಿಯವನು ಕಣ್ಣಾರೆ ಕಂಡೆಯ |
ಹರಹರೇನಿದೊ ಕಾಣೆ ಮೂರ್ಛೆಗೆ ಮೂರನೆಯ ಬಾರಿ ||
ಅರಿಯದಿಂದಾನಹಹ ಪೂರ್ವದ |
ವರಗಳೆರಡನು ಬೇಡಿದುದರಿಂ |
ದರಸನೀಪರಿಯಾದನೆಂಬೆನೆ ವರಗಳಲ್ಪವಲಾ ||೬೨||

ಅರಿವೆನಿದರ ನಿಜಾಂಶವನು ನೀ |
ನಿರದೆ ಬೇಗನೆ ಪೋಗಿ ರಾಮನ |
ಕರೆದು ತಹುದೆನಲಾ ಸುಮಂತ್ರನು ತೆರಳುತಲ್ಲಿಂದೆ ||
ಧರಣಿ ತನ್ನಯ ಮಗಳ ಗಂಡನ |
ವರಿಪುದನುಚಿತಮೆಂದು ಭರತಗೆ |
ಕರವ ನೀಡುವ ತೆರನು ಕಾಣ್ಬುದೆನುತ್ತೆ ಚಿಂತಿಸಿದ ||೬೩||

ಬರುತ ಮೆಲ್ಲವ ವರವಸಿಷ್ಠಂ |
ಗೊರೆದನಾ ಬಳಿಕಿರ್ವರುಂ ಬೇ |
ಸರದಿನೈತಂದಿದಿರುಗೊಂಡರು ರಾಘವೇಶ್ವರನ ||
ಗುರುಸಚಿವರಾನನವನೀಕ್ಷಿಸಿ |
ಮೆರೆವದುಗುಡವ ಕಂಡು ರಾಘವ |
ನೊರೆಯಬೇಹುದು ಕಾರಣವನಿದಕೆನುತೆ ಬೆಸಗೊಳಲು ||೬೪||

ಧರಣಿಪಾಲಂಗಿರವು ಕೈಕೆಯ |
ಸುರುಚಿರದ ಮಂದಿರದೆ ನಿಮ್ಮನು |
ಕರೆದುತಹುದೆಂದರಸಿಯಾಣತಿ ಬಿಜಯಗೈವುದೆನೆ ||
ವಿರಸವಾಗಿದೆ ನಿಮ್ಮ ನುಡಿಯೆನೆ |
ಧರಣಿಪತಿಯಾಕುಲನು ಚಿಂತಿಸು |
ತಿರುವಸೀಗಳು ನಿನ್ನನೇ ಎಂದವರು ತಿಳುಹಿದರು ||೬೫||

ವಂದಿಮಾಗಧರುಲಿಪ ನಿಲ್ಲಿಸಿ |
ಚಂದದಾರತಿಗಳ ನಿರೋಧಿಸಿ |
ಹಿಂದೆ ಬರುತಿಹ ಜನವ ಗದರಿಸಿ ರಾಮನೈತಂದು ||
ತಂದೆಯಡಿಗಳಿಗೆರಗಿಯವನಿ |
ನಂದವನು ತಾಂ ಕಂಡು ಮರುಗುತೆ |
ಬಂದುದೀವ್ಯಥೆ ನಿನಗದೆಂತೆಲೆ ತಾತ ನುಡಿಯೆನಲು ||೬೬||

ಮಗನೆ ಬಂದ್ಯೆ ರಘುಕುಲಾಂಬರ |
ಗಗನಮಣಿ ಬಂದ್ಯೆ ಜಗನ್ನುತ |
ಸುಗುಣ ಬಂದ್ಯೆ ಬಂಟೆಯಾ ಬಾ ಕಂದ ಬಾರೆನುತೆ ||
ಉಗುವ ಕಣ್ಣೀರಿಂದೆ ಸುತನನು |
ತೆಗೆದು ಬಿಗಿಯಪ್ಪುತ್ತೆ ತನಗೀ |
ಬಗೆಯ ಸುಖ ಮುಂದಿನ್ನು ದೊರೆವುದಸಾಧ್ಯಮೆಂದಳಲಿ ||೬೭||

ಮರೆದು ದೇಹವನಿಳೆಯೊಳೊರಗಲು |
ಕೊರಗುತುಪಚರಿಸುತ್ತೆ ರಾಮನು |
ಕಿರಿಯಮಾತೆಯ ಚರಣಕೆರಗುತ್ತಿಂತು ಕೇಳಿದನು ||
ಕರುಣಿಸಿನ್ನೆಲೆ ತಾಯೆ ನೃಪಕೇ |
ನರಿಗೆ ತಾತಂಗೇನುಕಾರಣ |
ಪರಮದಾರುಣ ದುಃಖದಿಂದಾವರಿಸಿತೆಂಬುದನು ||೬೮||

ಕಂದ ನಿನಗಿದನೊರೆಯಲೆಂದಾ |
ನಿಂದು ಕರೆಸಿದೆನಯ್ಯ ಪೆರರೊಡ |
ನೆಂದೊಡೆನ್ನಂ ಸ್ವಾರ್ಥಪರೆಯೆಂದರಬೆ ದೂಷಿಪರು ||
ಇಂದಿರಂಗಿದಿರಾಂತ ದಾನವ |
ವೃಂದವನು ತರಿವಂದು ನಿಮ್ಮಯ |
ತಂದೆಗಾಪತ್ತಡಸೆ ಪರಿಹರಿಸಿದೆನು ಸುರರರಿಯೆ ||೬೯||

ಮೆಚ್ಚಿ ನನ್ನಯ ಸಾಹಸಕೆ ನೃಪ |
ನಚ್ಚರಿವಡುತ್ತಂದು ವಲ್ಲಭೆ |
ನಚ್ಚಿಕೆಯ ನುಡಿ ನಂಬು ವರಗಳನೆರಡನಿತ್ತಪೆನು ||
ಎಚ್ಚರದೆ ನೀನಿರ್ದು ಮನಕೆಂ |
ದಿಚ್ಛೆಯವುದೊ ಕೇಳಲದನಾ |
ನಚ್ಚಳಿಯದಂದದೊಳು ಸಲಿಸುವೆನೆಂದನವನಿಪನು ||೭೦||

ಸಲವು ಕಾಲದಿನಿದಿರುನೋಡುತೆ | 
ನಲವಿನಿಂದದನಿಂದು ಬೇಡಲು |
ಸಲಿಸಲಾರವೆ ನಿನ್ನ ಮೇಲಣ ಮೋಹದಿಂದದನು ||
ಹಲುಬುತೀಪರಿದುಃಖದಿಂ ಬಲು |
ಬಳಲುತಿರ್ದಪನೆನಲು ಜನನಿಯೆ |
ಸಲಿಪೆನದ ನೀಂ ಬೆಸಸಿಮೆಂದನು ರಾಮ ಕೈಮುಗಿದು ||೭೧||

ಎನುತೆ ನುಡಿದಾಮಗನ ಮಾತಿಗೆ |
ವನಿತೆಯೊಲಿದಳು ಶಿರವನಹುದೋ |
ತನಯ ನಿನ್ನನು ಪೆತ್ತ ಮಾತೆಯೆ ಧನ್ಯೆಯಿಳೆಯೊಳಗೆ ||
ಮನದಭೀಷ್ಟವನುಸಿರುವೆನು ಭವ |
ದನುಜ ಭರತಂಗಿತ್ತು ರಾಜ್ಯವ |
ವನದೆ ಹದಿನಾಲ್ಕಬ್ದ ಚರಿಪುದು ನೀನು ಜಡೆವೆರಸಿ ||೭೨||

ನೀತಿಯುತನಾಗಿರ್ದ ತನುಜನೊ |
ಳೀತಕೀಕಾಠಿನ್ಯಮೆನುತುಂ |
ಭೀತನಾಗದಿರಣುಗ ಪೇಳುವೆನಿದರ ಮರ್ಮವನು ||
ಪಾತಕಿನಿ ತಾನೆಂಬ ನಿಟ್ಟುರ |
ವಾತು ನನ್ನನು ಪೊರ್ದಲಂಜೆಂ |
ಖ್ಯಾತನಾಗಲು ನೀನು ಲೋಕದೊಳದುವೆ ಹಿತವೆನಗೆ ||೭೩||

ಕ್ರೂರರಾಕ್ಷಸರಿಳೆಯನೆಲ್ಲವ |
ಸೂರೆಗೈಯುತ್ತಿರುವರವರೊಳ |
ಪಾರಪೌರುಷಶಾಲಿಗಳು ದಕ್ಷಿಣದೆ ನೆಲೆಗೊಂಡು ||
ಸಾರಿ ಸುರಲೋಕವನು ನಿರ್ಜರ |
ನಾರಿಯರ ಸೆರೆವಿಡಿದು ಸುರರನು |
ಸೇರಗುಡದೆಯೆ ಸಕಲಸಂಪದಕೊಡೆಯರಾಗಿಹರು ||೭೪||

ಕಪಟಿಗಳನಿರದಿರಿಯಲೋಸುಗ |
ವಿಪಿನಚರರೊಳು ಸೇರಿ ನೀನಾ |
ತಪಸಿಯಂದದೊಳಿಹುದು ನಿನಗದು ಕಾರ್ಯಸಾಧನವು ||
ವಿಪುಲಮಂತ್ರಾಸ್ತ್ರಗಳನೆಲ್ಲವ |
ಗುಪಿತದಿಂ ನಿನಗಿತ್ತನಲ್ಲವೆ |
ನೃಪಋಷಿಯು ಕೌಶಿಕನದೇಕೆಂದರಿವೆ ನೀನದನು ||೭೫||

ಕೆಲವರಾಡುವರಣುಗ ನಿನ್ನನು |
ಜಲಜಭವಪಿತನೀತನೆನುತುಂ |
ನೆಲದೆ ನೀನೆಸಗಿರ್ಪ ಕೃತ್ಯಗಳಿದಕೆ ಸಾಕ್ಷಿಕಣಾ ||
ಹಲವುಬಗೆಯಿಂ ರಕ್ಕಸರ ಹು |
ಯ್ಯಲನು ಮುರಿಯುತೆ ಜಗವ ರಕ್ಷಿಸಿ |
ಕುಲಶಿರೋಮಣಿ ಜಸವನೊಂದೈ ಮೂರುಲೋಕದೊಳು ||೭೬||

ಪೊರೆದೆ ಕೌಶಿಕಮಖವ ತಾಟಕೆ |
ಯಿರಿದೆ ಮಿಥಿಲೆಗೆ ಸರಿದೆ ಶಂಕರ |
ಸುರುವಧನುವನು ಮುರಿದೆ ಶಿಲೆಗುಸಿರೆರೆದೆ ನೀನಿರದೆ ||
ಪರಶುರಾಮನ ದರ್ಪತರುವನು |
ತರಿದೆ ನಿನಗೇನರಿದೆ ವಿಜಯವು |
ತೆರಳು ನೀನೆಲೆ ತರಳ ಬೇಗದೊಳಿರಿ ನಿಶಾಚರರ ||೭೭||

ಭರತನೀರಾಜ್ಯವನು ನೀನೈ |
ತರುವಪರಿಯಂತರವು ಪೊರೆಯಲಿ |
ಮರಳಿ ನೀಂ ಬರಲೊಡನೆ ನಿನ್ನಯ ಚರಣಕರ್ಪಿಸಲಿ ||
ತರಣಿವಂಶದ ಕೀರ್ತಿಲತೆಗೀ |
ಗೆರೆದು ನಿನ್ನಯ ಶೌರ್ಯಜಲವನು |
ಸೊರಗುಗುಡದೆಯೆ ಪರ್ಬಿಸೆನ್ನುತೆ ಚದುರ ಬೀರಿದಳು ||೭೮||

ಮಾತೆ ನೀನಿದಕೇಕೆ ಚಿಂತಿಪು |
ದೀತರತಿಶಯಕಾರ್ಯಮಿದು ನಿಜ |
ತಾತನಾಡಿದ ಮಾತ ಪಾಲಿಸದಾತನೇಂ ಸುತನೇ ||
ಖ್ಯಾತರಘುವಂಶಜರು ಸತಿ ತನು |
ಜಾತರಿಳೆಯೆಂಬುರುವ ಮಾಯೆಗೆ |
ಸೋತು ಮನವನು ಧರ್ಮಸಂರಕ್ಷಣೆಯನುಳಿದಪರೆ ||೭೯||

ಜನನಿ ಜನಕನು ಸಕಲಕಂ ಮಿಗಿ |
ಲೆನುತೆ ನುಡಿವುದು ಪೊಸತೆ ಲೋಕದೆ |
ತನುವನಿದ ಪಡೆದಪರು ಲಾಲನೆಗೈದು ಪಾಲಿಪರು ||
ಕೊನೆಯ ಲಯವಂ ಕನಸಿನೊಳಗಂ |
ನೆನೆಯರವರೀಮೂರುಮಂ ತಾ |
ನೆಣಿಕೆಗೈಯದೆ ದೈವಮೆಸಗುವುದಲ್ತೆ ಪರಿಕಿಸಲು ||೮೦||

ಪೇಳಿಯಿಾಪರಿ ಪಿತನ ಚರಣಕೆ |
ಬೀಳುತೆಂದನು ಜನನಿ ನಲವಿಂ |
ಕೇಳುವೀವರಗಳನು ಕರುಣಿಸಿ ನಿನ್ನ ನುಡಿಗಳನು ||
ಕೋಳುಹೋಗದತೆರದೊಳುದ್ಧರಿ |
ಸೇಳು ಚಿತ್ತದ ದುಗುಡವನು ನೀಂ
ಬೀಳುಕೊಟ್ಟೆಂದೆನ್ನ ಕಳುಹೈ ಬೊಪ್ಪ ಕಾನನಕೆ ||೮೧||

ಚರಣವನು ಪಿಡಿದಿರ್ಪ ತನಯನ |
ಧರಣಿಪತಿ ನೋಡುತ್ತೆ ಮರುಗು |
ತ್ತಿರದೆ ಬಿಸುಸುಯ್ದುಕಟ ಮಗನೇ ಕಾಣೆ ನೀನಿದನು ||
ಕರುಣಮುಳಿದಿರ್ಪ್ಪೀಪಿಶಾಚಿಗೆ |
ವರಗಳಿತ್ತೆನು ನಿಜದೆ ನಾನಿ |
ನ್ನೊರೆಯಲಾರೆನು ಮುಂದಕೆಂದವನಿಪನು ಮೈಮರೆದ ||೮೨||

ಪರಿಪರಿಯೊಳುಪಚರಿಸಿ ಮೂರ್ಛೆಯ |
ಪರಿಹರಿಸಿ ನಿಜತಾತನಂಘ್ರಿಗೆ |
ಶಿರವ ಬಾಗಿಸಿ ಕೈಕೆಗಭಿನಮಿಸುತ್ತೆ ರಾಘವನು ||
ಅರಸನಾರೈಕೆಯನು ನಿಮಗಾ |
ದರದೆ ವಹಿಸಿದೆನಿಂದು ಜನನಿಯೆ |
ಮರೆಯಲಾಗದು ತನ್ನನೆನುತಲ್ಲಿಂದೆ ಹೊರವಡಲು ||೮೩||

ಪುರದೆ ಹಬ್ಬಿತು ವಾರ್ತೆ ಕೇಳಿದ |
ರರಸಿಯರು ಬಾಯ್ಬಿಡುತುಮೈದಿದ |
ರುರುತರದ ಶೋಕದೊಳು ಕೌಸಲ್ಯಾದಿದೇವಿಯರು ||
ಹರಿವ ನೆನೆದಳೆ ಮಗನೆ ಸವತಿಯು |
ಧರಣಿಪಾಲನ ಕಿವಿಯನುಲಿದಳೆ |
ಕೊರೆದಳೇ ಅವನಂತರಂಗವನೆನುತೆ ಕೌಸಲೆಯು ||೮೪||

ಭರದೊಳವ್ವುತೆ ಸುತನ ಭೂಪನ |
ತಿರುಗಿ ನೋಡಿದಳಿನಿತಕೋಸುಗ |
ಮುರುವ ಯಾಗವ ಗೈದು ಪಡೆದಿರೆ ನೀವು ನಂದನನ ||
ಧರಿಸಿತೆನ್ನೀಪೊಡೆಯು ಕಂದನ |
ಧರಿಸಲಾರವೆ ದೊಡ್ಡಿತರಮನೆ |
ಪಿರಿದು ಪುರವಿದು ಹರಹರಾ ನಿಷ್ಕರುಣರಾದಿರಲಾ ||೮೫||

ಕಂದನನು ಕಾಂತಾರಕಟ್ಟೀ |
ಬೆಂದೊಡಲ ನಾನೆಂತು ಹೊರೆವೆನ |
ಮಂದಭಾಗ್ಯಯನೇಕೆ ನೆಲನಿಡು ನುಂಗದಿರ್ದಪುದೊ ||
ಕುಂದಣದ ನಗುವೆನ್ನ ಕಂದನ |
ಸುಂದರಾಂಗದ ಕಾಂತಿ ವಿಪಿನದೊ |
ಳಿಂದು ಕಂದದೆ ಮಾಣದೇಗುವೆನೆಂದು ಹಲುಬಿದಳು ||೮೬||

ಏನ ನೆನೆದೆಯೊ ಮಗನೆ ನೀನೀ |
ಭೂಸವೇಶ್ವರಪದವಿಗೊಪ್ಪದೆ |
ಕಾನನದ ಕಡುಕಷ್ಟಕೆಳಸುವುದುಚಿತವೇ ನಿನಗೆ ||
ಮಾನು ಧೀವರನೆಸೆವಗಾಣವ |
ತಾನೆ ನುಂಗಿ ನರಳ್ವರೀತಿಯೊ |
ಳೀನರೇಂದ್ರನು ಪಾಪಿ ಕೈಕೆಯ ಮೇಲಣಾಸೆಯೊಳು ||೮೭||

ಜ್ಞಾನವಿಲ್ಲದೆ ನುಡಿದು ಹಲುಬಿದೊ |
ಡೇನು ಸತ್ಯಚ್ಯುತಿಯ ದೋಷವು |
ತಾನದಪ್ಪುದು ಮಾರಲಿಂದದನೆಂದು ಗರ್ಜಿಸುಳೆ ||
ನೀನು ತಳುವಲ್ಕಾಗದೇಳ್ಳೈ |
ಸೂನು ಸಿಂಹಾಸನವನೇರೈ |
ಸಾನುಮತವೀವಿಷಯದೊಳು ಜನವೆಂದಳಿಂದುಮುಖಿ ||೮೮||

ಅರಿಯೆ ನೀನೆಲೆ ಕಂದ ನಿಮ್ಮಯ |
ಕಿರಿಯ ಮಾತೆಯು ಮೊದಲೆ ನನ್ನನು |
ಸರಕುಗೈಯಳು ಮೇಣು ನೀನಿಂತೆನ್ನನಗಲಿದೊಡೆ ||
ನೆರವೆಇಲ್ಲದನಾಥೆಯೆನ್ನುತೆ |
ಪಿರಿದು ಕಷ್ಟವನೀವಳೆನಗಾ |
ಳಿರುವರ್ಕೈ ಹಿತರೆನಿಪರಾನಿನ್ನೆಂತು ಜೀವಿಪೆನು ||೮೯||

ಕೇಳಿದನು ನಿಜಮಾತೃವಾಕ್ಯವ |
ತಾಳಿದನು ದುಗುಡವನು ಮನದೊಳು |
ಮೇಲನರಿಯದೆ ನುಡಿದತಂದೆಯ ಭಾಷೆಯನು ನೆನೆದು ||
ಪಾಲಿಪೆವು ಸತ್ಯವನು ತಾವೆಂ |
ಬಾಳುಗಳ ಕುಲದೈವ ರಾಮನು |
ಲೋಲಲೋಚನೆಗೆರಗಿ ಬಿನ್ನೈಸಿದನು ಬಹುತಿಯೊಳು ||೯೦||

ತಾಯೆ ಬಿನ್ನಹವಿಂದು ನಿಮ್ಮಯ |
ರಾಯನಾಡಿದ ಸತ್ಯಭಾಷೆಗ |
ಪಾಯಬಾರದತೆರದೆ ರಕ್ಷಿಪರಾರು ನೀವುಳಿಯೆ ||
ಕಾಯವಸ್ಥಿರ ಸತ್ಯವೇ ಸ್ಥಿರ |
ಕಾಯವೆಂಬಾ ನಮ್ಮ ಕುಲಮತ |
ನೀಯಚರಿತವನರಿಯದವರೇನಕಟ ನೀವಿಂದು ||೯೧||

ಪತಿಪರಾಯಣೆ ಸತಿಯದೇಂ ನಿಜ |
ಪತಿಗೆ ಮಾರುತ್ತರವನೀಯುತೆ |
ಪತಿತೆಯೆನಿಸುತೆಯೇಳುಜನುಮದೆ ನರಕಕೂಪದೊಳು ||
ಅತಿಶಯದ ಯಾತನೆಯನನುಭವಿ |
ಸುತುರುದುರ್ಗತಿವಡೆವಳೇಳ್ವೆ ಅಭಿ |
ಮತವೆ ಸಾಧ್ವಿಯರೆನಿಪನಿಮಗಿದು ತಾಯೆ ಚಿತ್ತೈಸಿ ||೯೨||

ಕೇಳಿ ಲಕ್ಷ್ಮಣನಣ್ಣದೇವನ |
ಕಾಲವಾನಪ್ರಸ್ಥವಾರ್ತೆಯ |
ತಾಳಿ ರೌದ್ರಾವೇಷವನು ತಾನಲ್ಲಿಗೈತಂದು ||
ಬೀಳುಕೊಟ್ಟನೆ ನಿಮ್ಮನಡವಿಗೆ |
ಕಾಳರಕ್ಕಸಿಯೆನಿಪ ಕೈಕೆಗೆ |
ಜೋಲುಗೊಟ್ಟನೆ ಕಿವಿಯ ತಂದೆಯೆನುತ್ತೆ ಹಲುಮೊರೆದ ||೯೩||

ದೇವ ನಿಮಗಾವಿಪಿನವಾಸವೆ |
ಭಾವಿಸಲು ಭರತಂಗೆ ರಾಜ್ಯವೆ |
ಕೋವಿದರು ಸಮ್ಮತಿಯನಿತ್ತರೆ ನಮ್ಮ ಮಂತ್ರಿಗಳು ||
ಆವದೇಶದ ಧರ್ಮವಿದು ತಾ |
ನಾವನಿದನುಸಿರಿದನು ಶಿವಶಿವ |
ನೀವದೇತಕೆ ಮರುಳರಾದಿರಿ ಸಕಲವನು ತಿಳಿದು ||೯೪||

ಹಿರಿಯಮಗನಿಗೆ ರಾಜ್ಯವೆಂಬುದು |
ಧರೆಯಮೇಲಿದು ಸುಪ್ರಸಿದ್ಧವು |
ಮೆರೆವರಘುವಂಶದೊಳು ಕಿರಿಯಂಗೆಂಬುದಿದು ಚೋದ್ಯ ||
ಅರಸುಪಟ್ಟವ ನಿನಗೆ ಕಟ್ಟುವೆ |
ನರಸ ತಡವಿನ್ನೇತಕೇಳೈ |
ಹರಿವಿರಂಚಾದಿಗಳು ತಡೆದೊಡೆ ತೊಡೆವೆನವರುಗಳ ||೧೫||

ತಮ್ಮನಾಡಿದನುಡಿಯನದ ಕೇ |
ಳ್ದುಮ್ಮಳಿಸಿದನು ರಾಮನೇತಕೆ |
ಹಮ್ಮು ನೀನೀಗೆಂದನುಡಿಗಳು ಸರ್ವಸಮ್ಮತವು |
ಒಮ್ಮೆ ತಾತನ ವದನದಿಂ ಹೊರ |
ಹೊಮ್ಮಲೊರ್ನುಡಿ ವೇದವೆಂದದ |
ನೆಮ್ಮ ಸಲಿಸಲೆಬೇಕು ನಾಂ ಸತ್ಪುತ್ರರಾದುದಕೆ ||೧೬||

ಹರಣವುಳಿಸಿದಳೆಂಬ ಸಂತಸ |
ಕಿರದೆ ಬೆಲೆಯಾಗೆರಡುವರಗಳ |
ನರಸನಿತ್ತನು ಮಾತೆ ತಾನದನಿಂದು ಬೇಡಿದಳು ||
ಧರಣಿಯಧಿಕವೊ ನಮಗೆ ತಾತನ |
ಹರಣವಧಿಕವೊ ತಿಳಿದು ನೋಡೈ |
ಸರಿಯೆ ಲೋಕತ್ರಯವುವೊರ್ವಂಗಮಮ ತಾತಂಗೆ ||೧೭||

ಅನುಜ ಕೇಳಿದರಿಂದೆ ಜನಕನ |
ಘನವೆನಿಪವಾಗ್ದಾನವೆಮ್ಮದು |
ವಿನಯದಿಂದದನಾಂತು ಮುಂಡೆಯೊಳೀಗ ಕಾನನದೆ ||
ಮುನಿಯ ವೃತ್ತಿಯೊಳಾನು ವಸಿಪೆನು |
ಮನದ ದುಗುಡವನೀಗಿ ನೀನೀ |
ಜನನಿಯನು ಸಂತೈಸು ನನ್ನಯ ಕಾರ್ಯಕನುಮತಿಸು ||೧೮||

ಎಂದು ರಾಮನು ನುಡಿಯೆ ಲಕ್ಷ್ಮಣ |
ನೆಂದನಗ್ರಜ ನಿನ್ನನುಜ್ಞೆಯ |
ನೆಂದು ಮುಲ್ಲಂಘಿಸದೆನಗೆ ಬೇರೇನು ಮಾತಿಹುದು ||
ಎಂದು ಜನಿಸಿದೆನಂದುಮೊದಲಾ |
ಗಿಂದುವರೆಗಂ ನಿನ್ನನೆನ್ನಯ |
ತಂದೆಯೆನುತುಮೆ ಭಾವಿಸಿರ್ಪುದ ನರಿಯೆಯಾ ನೀನು ||೧೯||

ಪಿತನ ಸತ್ಯವ್ರತವ ಪೊರೆಯುಲು |
ಕುತುಕವಡುತಿಹ ನಿನ್ನ ಮನವನು |
ಪತಿತನೆನಿಸೆನೆ ತಿದ್ದಲಿಂದಾನುಜ್ಞಗಿಸಲಕಟಾ ||
ಮತಿಗೆ ತೋರಿಹುದೊಂದಭೀಷ್ಟವು |
ಹಿತದೆ ನೀನಿದ ಸಲಿಸಲಪ್ಪೊಡೆ |
ಜತೆಯೊಳಡವಿಗೆ ನನ್ನನುಯ್ವುದು ದೇವ ನೀಂ ಬಿಡದೆ ||೧೦೦||

ನಿನ್ನನೇ ನೆರೆನಂಬಿ ಸತತವು |
ನಿನ್ನ ಸೇವಾನಿರತನಾಗಿ |
ರ್ಪನ್ನ ವರ್ಜಿಸಿ ಪೋಗಲೆನಗಿನ್ನೇನು ಗತಿ ಮುಂದೆ ||
ಬೆನ್ನ ಕಾಪಿಂಗೆನ್ನ ನೇಮಿಸಿ |
ಯಣ್ಣ ನೀನರಮನೆಯೊಳಿರ್ಪಂ |
ತಿನ್ನು ಸುಖದಿಂ ಕಳೆಯ ಕಾಲವ ಘೋರಕಾನನದೆ ||೧೦೧||

ಹೊರೆಯಿದೇಕೆಂದೆನ್ನು ತೆನ್ನನು |
ತೊರೆದು ನೀನೈದಿದೊಡೆ ಪೂಜ್ಯನೆ |
ಹರಣವಿದನಾಕ್ಷಣವೆ ಬಿಡುವೆನು ಸತ್ಯವೆಂದೆನಲು |
ಪರಮಕರುಣಾರ್ಣವನು ಲಕ್ಷ್ಮಣ |
ನುರುವಭಕ್ತಿಗೆ ಮೆಚ್ಚಿ ವತ್ಸನೆ |
ತೆರಳಲನುವಾಗೆಂದನುಜ್ಞೆಯನಿತ್ತನತಿಮುದದೆ ||೧೦೨||

ಮೊದಲನೆಯ ಸಂಧಿ ಸಂಪೂರ್ಣಂ.

## ಎರಡನೆಯ ಸಂಧಿ

ಸೂಚನೆ|| ಪಿತನ ಭಾಷೆಯ ಪಾಲಿಸಲು ಭೂ |
ಸುತೆಯು ಮೇಣ್‌ಲಕ್ಷ್ಮಣನು ತನ್ನಯ |
ಜತೆಯೊಳೈತರೆ ರಾಮನಡವಿಗೆ ಮುದದೆ ಗಮಿಸಿದನು ||

---

ಸತಿಯರಗ್ರಣಿ ನೋಡುತಿರ್ದಳ್ |
ಕ್ಷಿತಿಜೆ ತನ್ನಯ ಹರಣದೊಡೆಯಂ |
ಗತಿವಿಷಾದದ ವಿಪಿನವಾಸಕ್ಲೇಶವೊದವಿದುದ ||
ಪತಿಯ ಬಳಿಗೈತಂದು ದುಃಖಿಸು |
ತತುಳವೈಭವದಾಶೆ ನೆಗ್ಗಿತು |
ಮತಿಯ ಕರುಣಿಸು ನಾಥ ನೀನೆನಗೆಂದಳಿಂದುಮುಖಿ ||೧||

ಅರಸಿ ವಿಧಿ ತಾಂ ಬರೆದ ಲಿಖಿತವ |
ನೊರೆಸಲಾರಿಂದಳವು ವಿಪಿನಾಂ |
ತರಕೆ ತೆರಳುವೆನಾನು ದುಃಖಿಸಬೇಡ ನೀನಿದಕೆ ||
ಬರುವೆನವಧಿಯು ಮುಗಿಯಲೊಡನೆಯೆ |
ತರುಣಿ ಭಕ್ತಿಯೊಳತ್ತೆಮಾವಂ |
ದಿರ ಪದಾಂಬುಜಯುಗವ ಸಂಸೇವಿಸುತೆ ನೀನಿಹುದು ||೨||

ಭರತನನು ಗೌರವಿಸು ಮೇಣವ |
ನರಸಿಯರ ಮನಮೆಚ್ಚೆ ನಡೆ ನೆರೆ |
ಗುರುಜನವನಾದರಿಸು ಸೇವಕತತಿಯ ಪೊರೆ ಹಿತದೆ ||
ಪರಮಮಂತ್ರವೆನುತ್ತೆ ನೀನಿದ |
ನರಿತು ನಡೆದೊಡೆ ಮುಂದೆ ಸೌಖ್ಯವು |
ದೊರೆದಪುದು ಮದಿರಾಕ್ಷಿ ನಿನಗಿನ್ನೆಂದನಾ ರಾಮ ||೩||

ಏನಿದೇನಿದು ಪತಿಯೆ ನೀನಿಂ |
ದೀನವೀನಾರ್ಥವನು ಪೇಳುವೆ |
ಮಾನಿನಿಗೆ ಪತಿಸೇವೆಯೇ ವ್ರತವಲ್ಲದಿನ್ನುಂಟೆ ||
ನೀನೆ ಮೊದಲಿದನೆನಗೆ ಬೋಧಿಸ |
ಮಾನನಿಧಿ ನೀನೀಗಳೀಪರಿ |
ಜಾಣತನದಿಂ ನುಡಿಯುತಿರ್ಪುದು ತಕ್ಕುದೇ ನಿನಗೆ ||೪||

ಮುನಿಜನಂಗಳು ಧರ್ಮಸೂಕ್ಷ್ಮವ |
ಜನಕಭೂಪನಮುಖದಿನರಿವರು |
ತನುಜೆಯಾತಂಗೆನಿಸಿಕೊಂಡಿದನರಿಯೆನೇ ನಾನು ||
ಇನಿಯ ನಾನಿನ್ನಿಲ್ಲಿ ತಳುವದೆ |
ಬನಕೆ ನಿನ್ನೊಡನೇಗಳೈತಹೆ |
ನನುಮತಿಯನೊಲಿದಿತ್ತು ರಕ್ಷಿಪುದೆನ್ನ ಮನದನ್ನ ||೫||

ತಂದೆತಾಯ್ಗಳು ಸೋದರರು ಸುತ |
ರೊಂದುವರು ತಾಂ ಗೈದಕರ್ಮ |
ಕ್ಕಂದವಾದಾ ಫಲವ ನಿಜಸತಿಗಾತ್ಮವಲ್ಲಭನು ||
ಬಂದುತಿಹ ಕರ್ಮಾನುಗುಣಸಂ |
ಬಂಧಫಲದೊಳಗರ್ಧಮೈತಹು |
ದೆಂದು ನುಡಿಯುವೆ ವೇದಶಾಸ್ತ್ರಪುರಾಣವಚನಗಳು ||೬||

ಪತಿಯೆ ನಿನಗರ್ಧಾಂಗಿಯಾಗಿಹ |
ಸತಿಯ ನೀನಿಲ್ಲುಳಿದು ಪೋಗಲು |
ಪಿತನ ಸತ್ಯದ ಪಾಲನೆಯು ತಾನೆಂತು ಫಲಿಸುವುದು ||
ಕ್ಷಿತಿಪನಾಣತಿ ನಿನಗೆ ಮಾತ್ರವೆ |
ಸತಿಯೆನಿಸಿದೆನಗರ್ಧಮಿಲ್ಲವೆ |
ಮತಿಯುತನೆ ನೀನಿದರ ಮರ್ಮವ ಮರೆಯುವುದು ತರವೆ ||೭||

ನಿನ್ನ ಬಳಿಯಿರಲದುವೆ ಸಗ್ಗವು |
ನಿನ್ನ ಬಳಿ ತಪ್ಪಿದೊಡೆ ನರಕವು |
ನಿನ್ನ ಸೇವೆಯೆ ನಿತ್ಯಕರ್ಮವು ದೇವಪೂಜೆಯದು ||
ನಿನ್ನ ನುಡಿಗಳೆ ವೇದವಾಕ್ಯವು
ನಿನ್ನ ದರ್ಶನವೀಶದರ್ಶನ
ನಿನ್ನನುಳಿದೀಯಖಿಲಲೋಕವು ಶೂನ್ಯಮಂದಿರವು ||೮||

ಧರಣಿಜೆಯ ನಿಜಭಾವಶುದ್ಧಿಗೆ
ಪರಮುಧಾವಿರ್ಕರಾಘವೇಶನ |
ವರಹೃದಯವಾನಂದವಾಂತುದು ಹೊರಗೆ ತೋರಿಸದೆ ||
ತರುಣಿಯರಿಗುಪವನವೆ ವಿಪಿನವು |
ತರಳೆ ನೀನಿದನೇಕೆ ಬಯಸುವೆ |
ಹುಲಿಗಜಾದಿಕದುಷ್ಟಜಂತುಗಳಿಂದೆ ನಿಬಿಡವದು ||೯||

ಕಲ್ಲುಮುಳ್ಳುಗಳಿಂದೆ ಕೂಡಿದ |
ಹಳ್ಳಕೊಳ್ಳಗಳುಳ್ಳನೆಲದೊಳು |
ಪಲ್ಲಟಿಸಿ ಪದಪಲ್ಲವಂಗಳು ಸೋಯವೇ ನಿನ್ನ ||
ಎಲ್ಲಿ ನೋಡಿದೊಡಲ್ಲಿ ಕತ್ತಲೆ |
ಖುಲ್ಲಮಿಗಗಳ ಪೆರ್ಚಿದಾರ್ಭಟ |
ವಲ್ಲಿ ಚರಿಸುವುದೆಮುಗಮುಸದಳ ಸುಲಭವೇ ನಿನಗೆ ||೧೦||

ಲಲನೆ ನೀಸದರಿಂದಮಿಲ್ಲಿಯೆ |
ಕೆಲವುಕಾಲವ ಕಳೆಯುತಿರ್ದೊಡೆ |
ಹಳುವದಿಂ ಮಗುಳ್ಳೈದಿ ನಿನ್ನಯ ಮನಕೆ ಸಂತಸವ |
ತಳುವದಾನಿತ್ತಪೆನು ಸುದತಿಯೆ |
ಕಳವಳವ ನೀಗುತ್ತೆ ಪಿತೃಪದ |
ಜಲಜಸೇವಾನಿರತೆಯಾಗಿಹುದೆಂದನಾರಾಮ ||೧೧||

ಶಾಂತವಾಗಲಿ ಪಾಪ ಶಿವಶಿವ |
ಕಾಂತ ನೀನೀಪರಿಯೊಳೆಂಬರೆ |
ಕಾಂತೆ ಬೆನ್ನಂಟಿರದೆ ಪತಿಯನು ಸಾಧ್ವಿಯೆಂತಹಳು ||
ಕಾಂತಿವಿರಹಿತಶಶಿಯವೊಲು ದೇ |
ಶಾಂತರಕೆ ನಿಜಪತಿಯ ಕಳುಹು |
ತ್ತಿಂತು ಶೋಭಿಪಳಕಟ ಕುಲವತಿ ಯುವತಿ ಜಗದೊಳಗೆ ||೧೨||

ಜನಕಭೂಪನ ವಿನುತಶಿಕ್ಷೆಯು |
ತನಗೆ ಕಾಂತನ ಪದಸರೋಜವ |
ನನುದಿನವು ಸೇವಿಪುದು ನೀನೆಂದದನು ತಪ್ಪಿಸಲು ||
ಮಾಳಕುಲಾಧಿಪ ನಿನ್ನ ಚರಣಕೆ |
ತನುವನಿದ ಬಲಿಯಾಗಿ ಸಲಿಸುವ |
ಘನಮನೋರಥವಲ್ಲದಿತರವನೆಳಸೆನಾ ನಿನ್ನು ||೧೩||

ವಲ್ಲಭನೆ ನಿನ್ನವಳನೀಕ್ಷಿಸಿ |
ಖುಲ್ಲಮಿಗಗಳು ಶಾಂತವಾಗವೆ |
ಮಲ್ಲಿಗೆಯವೊಲ್ಮೆಲ್ಲಿತೆನಿಸವೆ ಕಲ್ಲುಮುಳ್ಳುಗಳು ||
ಎಲ್ಲಿಯದು ಭಯ ನಿನ್ನ ಬಳಿಯಿರೆ |
ನಲ್ಲ ನೀನೀನಾಟಕವನೆ |
ನ್ನಲ್ಲಿ ತೋರ್ಪರೆ ಬಲ್ಲೆ ನಾನಿದನೆಂದಳಿಂದುಮುಖಿ ||೧೪

ಅರಸ ನಿನ್ನಯ ಬಗೆಯ ಭಾವವ |
ಪರಿಕಿಸಲು ಬೇಕೆನುತೆ ನಾನಿಂ |
ತೊರೆದೆನಲ್ಲದೆ ನಿನ್ನ ನುಳಿದೀಹರಣವಿರ್ದಪುದೇ ||
ಮೆರೆವಸೀತಾರಾಮನಾಮವು |
ಬರಿದೆ ಬಂದುದೆ ತನಗೆ ನಮ್ಮಯ |
ಪರಮಮೈತ್ರಿಯ ಫಲವದಲ್ಲ್ ಲೋಕಸಾಕ್ಷ್ಯದೊಳು ||೧೫||

ತೆರಳಲನುವಾಗೆನ್ನ ಜತೆಯುಲಿ |
ತರಳಲಕ್ಷ್ಮಣನೊಡನೆ ನಾವೀ |
ಗರಸನಾಣತಿವಡೆಯಬೇಕೆಂದೆನುತೆ ರಾಘವನು ||
ಮರಳಿ ತಂದೆಯ ಬಳಿಗೆ ನಡೆತಂ |
ದರಸಿಯೊಡನನುಜಾತಯುತನಾ |
ಗೆರಗಿ ನಮಗಿಂದಾಜ್ಞೆಯೀಯ್ಯೆ ಬೊಪ್ಪ ಕಾನನಕೆ ||೧೬||

ವರುಷಹದಿನಾಲ್ಕೆಂಬುದನು ನಾ |
ವರೆಗಳಿಗೆಗೆಣೆಯಾಗಿ ಭಾವಿಸಿ |
ಸರಸದಿಂ ಕಳೆಯುತ್ತೆ ಮತ್ತೆ ಭವತ್ಪದಾಬ್ಜವನು ||
ಪರಮಸಂಭ್ರಮದಿಂದೆ ಪೂಜಿಪ |
ಪರಿಯ ಕಾಣ್ಬೈ ತಾತ ನಿನ್ನಯ |
ಹರಿಕೆಯೊಂದಿರಲಾವುದಸದಳ ನಿನ್ನ ಮಕ್ಕಳಿಗೆ ||೧೭||

ವನಕೆ ತೆರಳಲು ತವಕಗೊಳುತಿಹ |
ತನಯನೊಡನಾಲಕ್ಷ್ಮಣನನಾ |
ವನಜಮುಖಿಸೀತೆಯನು ತಾಂ ಕಂಡರಸನೆದೆಯೊಡೆಯೆ ||
ಮನದೆ ಬೇಗುದಿಗೊಂಡು ಮರುಗುತೆ |
ಜನಕರಾಜನ ತನುಜೆಯುಂ ಕಾ |
ನನಕೆ ಪೋಪನೊಲಾಯ್ತೆ ಸ್ಮರಿಪೆನೆಂತು ನಾನಿದನು ||೧೮||

ಬರಿದೆ ನೀನಿಂದೆನ್ನ ನೇತಕೆ |
ಧರಿಸಿದಪೆ ಪಾಪಿಯನು ವಿಶ್ವಂ |
ಭರೆಯೆ ಬಿಸುಡೆನ್ನೆಂದು ಮೂರ್ಛೆಗೆ ಸಂದು ನೃಪನಂದು ||
ಮರೆದನಂಗೋಪಾಂಗವನು ಚೇ |
ತರಿಸುತೊಡನಿರದೆದ್ದು ಮಕ್ಕಳೆ |
ಪರಿಸಮಾಪ್ತಿಯದಾಯ್ತುಯೋಧ್ಯೆಯ ಸಿರಿಗೆ ತಾನಿಂದು ||೧೯||

ಒಬ್ಬನಲ್ಲದೆ ಮೂವರಾದಿರಿ |
ಹಬ್ಬವಾದುದು ಪಾಪೆಕೈಕೆಗೆ |
ಯುಬ್ಬಿ ನಲಿದಪಳಿನ್ನು ತನ್ನಯ ಬುದ್ಧಿಕುಶಲತೆಗೆ ||
ಕೊಬ್ಬಿ ಮೆರೆವಿವಳಂದಚಂದವೆ |
ಮಬ್ಬುಗವಿಸಿದಳೆನ್ನ ಬುದ್ಧಿಗ |
ಮುಬ್ಬಸವನೆನಗಿತ್ತಳೀಪರಿ ಪುತ್ರರಗಲಿಕೆಯ ||೨೦||

ಬುದ್ಧಿಶೂನ್ಯನು ಪಿತನು ರಾಜ್ಯದ |
ವೃದ್ಧಧರ್ಮಕ್ಕೆಡರನೊದವಿಸ |
ಲುದ್ಧರಿಸಲದನವನ ಕೊಲುವಾಸುತನು ನಿರ್ದೋಷಿ ||
ಬದ್ಧವಾದೀಕ್ಷತ್ರಧರ್ಮವ |
ಸದ್ದುವರೆ ಕಡಲೊಳಗೆ ರಾಮನೆ
ವಧ್ಯನಾಗಿರುವೆನ್ನ ತರಿದೀ ರಾಜ್ಯಕರಸೆನಿಸು ||೨೧||

ಸುತನೆ ನೀನಿದನೆಸಗಲೆನಗತಿ |
ಹಿತವು ಕೇಳೀಲೋಕಕಿದು ಸ |
ಮ್ಮತವು ಬೇಗದೊಳೆನ್ನ ನಿರಿಯೆಂದರಸನೊರೆಯುತಿರೆ ||
ಪಿತನೆ ತನಗೀಧರಣಿ ಮೇಣ್ಸತಿ |
ಹಿತರುಮೆಂಬರೊಳಾಶೆಯಿಲ್ಲವು |
ಸತತ ನಿನ್ನಯ ಸತ್ಯವುಳಿದೊಡೆ ಸಕಲಸಂಪದವು ||೨೨||

ಸಾವಿರಾರಬುದಂಗಳಿಂ ನಿಜ |
ಭಾವಶುದ್ಧಿಯೊಳಾಳ್ದ ನೆಲವನು |
ಕೋವಿದನೆ ನಿನಗನೃತವಾದಿಯೆನಿಪ್ಪಪೆಸರ್ಬದೆ ||
ನಾವು ಸತರಾಗುದಿಸಿ ಫಲವೇ |
ನಾವಘನವೀವಿಪಿನವಾಸವು |
ದೇವ ಕೃಪೆಯಿಂ ಬೀಳ್ಕೊಡೆಂದನು ರಾಮನೊಲವಿನಲಿ ||೨೩||

ಪರಮಸತ್ಯವ್ರತನೆ ರಾಮನೆ |
ತುರಿಪದಿಂದವಧಿಯನು ಮುಗಿಯಿಸಿ |
ಮರಳಿ ಬಂದೀಧರೆಯ ಭಾರವ ವಹಿಸು ನೀನೆಂದು ||
ಪರಸಿ ಮಗನನು ಬರಿಸಿ ಮಂತ್ರಿಯ |
ನರಸನೊರೆದನು ಸುತನ ಸಂಗಡ |
ತೆರಳಲೆಮ್ಮಯಸೇನೆ ಬೇಕಾದುಚಿತಗಳಕೂಡಿ ||೨೪||

ವನದೊಳಿರುತಿಹೆನೆಂಬಶಂಕೆಯು |
ಮನಕೆ ತೋರದತೆರದಿನಖಿಲವ |
ನನುಗೊಳಿಸು ಬೊಕ್ಕಸದ ಸರ್ವಸ್ವವನು ಕಳುಹೆನಲು ||
ವನಿತೆ ಕೇಳ್ದಳು ನುಡಿಯನುರದೊಳ |
ಗನಲನುರಿದಂತಾಗೆ ಕೈಕೆಯು |
ಜನಪನನು ದುರುದುರನೆ ನಿಟ್ಟಿಸಿ ಕೆರಳಿಯುಸಿರಿದಳು ||೨೫||

ಏನನಾಡಿದೆಯರಸ ನಿನಗಿದು |
ಮಾನವೇನೀಪರಿಯೊಳೆಂಬುದು |
ಕಾನನವನೂರಾಗಿ ಕಲ್ಪಿಸಿಯೂರಬರಿಗೈದು |
ಏನುಮಿಲ್ಲದಪಾಳುದೇಶಕೆ |
ಮಾನವಾಧಿಪನೆನಿಸಿ ಭರತನ |
ನೀನದೆಂತೈ ಸತ್ಯಸಂಧತ ಸಾಲಿನಲಿ ಮೆರೆವೆ ||೨೬||

ಸೇನೆ ಮೇಣೈಸಿರಿಗಳೆಂಬೀ |
ಪ್ರಾಣವಾಯುಗಳಿಲ್ಲದಿಹ ನಿ |
ತ್ರಾಣವೆನಿಪೀರಾಜ್ಯಬಿಂಬವದೇಕೆ ಭರತಂಗೆ ||
ವಾಣಲಾವರ ಸಂದಿತೆನಗಿ |
ನ್ನೇನು ಮಗನೊಡನಡವಿವುಗುವೆನು |
ನೀನು ರಾಮಂಗಿತ್ತು ಸಕಲವನೊಲವಿನಿಂ ಬಾಳು ||೨೭||

ಇಂತು ಕೋಪದೆ ನುಡಿವ ಮಾತೆಗೆ |
ಶಾಂತನಹ ರಾಘವನು ವಂದಿಸಿ |
ಚಿಂತೆ ಬೇಡಿದಕಿನ್ನು ಜನನಿಯೆ ಮನ್ನಿಪುದು ನೀನು ||
ಸಂತಸದೆ ನಾನೆನ್ನ ತಮ್ಮಗ |
ನಂತವಸ್ತುಗಳೊಡನೆ ಭೂಮಿಯ |
ನಂತು ಮೊದಲಲಿ ಬಿಟ್ಟು ಮತ್ತೆಯುಮೆಳಸುವೆನೆ ಮನದೆ ||೨೮||

ತಂದೆಯೆನ್ನೊಳಗಧಿಕಮಮತೆಯಿ |
ನೆಂದಮಾತ್ರದೆ ವೌನಿವೃತ್ತಿಯೊ |
ಳಿಂದು ಕಾಡೊಳು ಚರಿಪ ತನಗೀದುಂದು ಸಲ್ಲುವುದೆ ||
ಮಂದರಾದ್ರಿಯು ಜಲದೆ ತೇಲ್ದೊಡ |
ಮಿಂದುರವಿಗಳು ಧರಣಿಗಿಳಿದೊಡ |
ಮೆಂದಭಾಷೆಗೆ ತಪ್ಪಿ ನಡೆಯೆನು ತಾಯೆ ಕೇಳೆಂದ ||೨೯||

ಜನನಿಗಿತ್ತುತ್ತರವನೀಪರಿ |
ಜನಕನನು ನೋಡುತ್ತೆ ವಚಿಸಿದ |
ನನುಜಭರತಂಗಖಿಳರಾಜ್ಯವನಿತ್ತ ಬಳಿಕಿನ್ನು ||
ತನಗೆ ವೈಭವವೇಕೆ ಹೆರರಿಗೆ |
ತೆನೆಯ ಹಸುವನು ಕೊಟ್ಟು ಹಗ್ಗಕೆ |
ಮನದೆ ಜಿನುಗುವರಂತೆ ಕಾಣ್ಬುದು ನಮ್ಮ ನಡೆವಳಿಯು ||೩೦||

ಅರಸ ನಿನ್ನನು ಮುಪ್ಪಿನಲ್ಲುಪ |
ಚರಿಸದೀಪರಿ ಪೋಪೆನೆಂಬಾ |
ಕೊರತೆಯೊಂದೇ ಕೊರೆವುದಲ್ಲದೆ ಯೆಣಿಸೆನಿತರವನು ||
ಧರಿಸಿ ಮುನಿವೇಷವನು ವಿಪಿನದೆ |
ಚರಿಸಲೋಸುಗ ವಲ್ಕಲವ ನೀಂ |
ಪರಸುತಿತ್ತೊಡೆ ಸಾಕು ಸಕಲವು ಬಂದುದೆನಗಿಂದು ||೩೧||

ಕೇಳಿದೊಡನೆಯೆ ರಾಮನೆಂದುದ |
ಖೂಳಕೈಕೆಯು ಪೋಗಿ ತಂದದ |
ನೇಳು ರಾಘವ ಧರಿಸು ಕೊಳ್ಳೆಂದೆಸೆದಳಿದಿರಿನಲಿ ||
ತಾಳಿ ಮುದವನು ಕರವ ನೀಡಿ ಕೃ |
ಪಾಳುವಂಗೀಕರಿಸಿ ಯುಡುತಿರೆ |
ಕಾಳರಕ್ಕಸಿ ನೋಡಿ ಹಿಗ್ಗಿದಳಂದು ಮನದಂದು ||೩೨||

ಜನನಿ ಯೆನಗೊಂದಿಡಲುಬೇಕೆಂ |
ದನುನಯದೆ ಲಕ್ಷ್ಮಣನು ಯಾಚಿಸು |
ವನಿತರೊಳು ಮತ್ತೊಂದು ನಾರುಡೆ ಬಿದ್ದುದಿದಿರಿನಲಿ ||
ಘನಪರಾಕ್ರಮಿಯದನು ನಡುವಿಂ |
ಗನುಸರಿಸಿ ಬಿಗಿಯುತಿರಲಾ ಪಾ |
ಪಿನಿಯು ಬಿಸುಟಳದೊಂದನಾ ಶಶಿಮುಖಿಗೆ ಜಾನಕಿಗೆ ||೩೩||

ಬನದೆ ಬಲೆಯನು ಕಂಡ ಹರಿಣಿಯು |
ಮನದೆ ಬೆದರುತೆ ಬೆಚ್ಚುವಂದದೆ |
ಮನುಕುಲೇಶನ ರಾಣಿ ಕಂಡದ ಬೆದರಿಬೆಚ್ಚಿದಳು ||
ತನಗಮುಡುಗೊರೆಯಿತ್ತರತ್ತೆಯ |
ರೆನುತೆ ಕಂಬನಿಯುಗುವ ನೇತ್ರದಿ |
ನಿನಿಯನಾ ಮೊಗನೋಡುತಿರ್ದಳು ತಿಳಿಯದುಡಲದನು ||೩೪||

ಕಂಡುದೀವ್ಯತಿಕರವ ದಶರಥ |
ಮಂಡಲೇಶನ ಮಾನಿಸೀಜನ |
ದಿಂಡುದರಿವವರಿಲ್ಲಲಾ ಈ ಭಂಡಕೈಕೆಯಸು ||
ಗಂಡನಿಗೆ ಮದ್ಭೊತ್ತಿ ನವಿ್ಮಾ |
ಮಂಡೆತುಂಬಿದ ಬಳಗವಸು ತಾಂ |
ಕಂಡು ಸೈಸದೆ ಕಿಚ್ಚನಿಕ್ಕಿದಳಿಂದು ಪಾತಕಿಸಿ ||೧೫||

ಎಳೆಯ ಕರುವಿಗೆ ಹೊರೆಯ ಹೊರಿಸ |
ಲ್ಕೆಳೆಯಲಾರದೆ ನಡುಗುತಿರಲದ |
ನೆಳೆದು ಚಾವಟಿಯಿಂದೆ ಹೊಡೆಯುವಪರಿಯೊಳಿಂದಿವಳು ||
ಲಲಿತಗಾತ್ರಿಯ ಜನಕಪುತ್ರಿಯ |
ಹಳುವಕಟ್ಟುವುದಕಟ ಸಾಲದೆ |
ವಲುಕಲವನಿತ್ತಪಳು ಛೀ ತೆಗೆಯೆನುತೆ ಹಲುಬಿದುದು ||೧೬||

ಧೀರಗುಣಗಂಭೀರ ಸತ್ವಾ |
ಚಾರನಾದುದರಿಂದೆ ರಾಮನು |
ಸೈರಿಸಿದನಲೆ ಮಿಕ್ಕರಿಗಿದೇಂ ಸಾಧ್ಯವೇ ಜಗದೆ ||
ಭೀರುವಿನ ಬಳಿಗೈದಿ ನಂಬಿಸಿ |
ನಾರಸೀರೆಯನುಡಿಸಿದನು ಸುರ |
ನಾರಿಯರು ಕಂಬನಿಯೊಳಳ್ದರು ಬೈದು ಕೈಕೆಯನು ||೧೭||

ಕಮಲಸಂಭವಸುತ ವಸಿಷ್ಠನು |
ವಿಮಲಮೂರ್ತಿಯ ಲೋಕನಟನಾ |
ಕ್ರಮವನರಿತುಂ ಸೈಸದೆಂದನು ದುಷ್ಟಮಾನಿನಿಗೆ ||
ಭ್ರಮಿಸಿದರಸನ ವಚನದಿಂದಿದು |
ಸಮವು ಮುನಿಜನವೇಷ ರಘುಜಂ |
ಗಮವು ಕೋಮಲಗಾತ್ರಿಜನಕನಪುತ್ರಿಗೇಂಸಮವೆ ||೧೮||

ಒಪ್ಪಿದೊಡೆ ರಾಜಾಜ್ಞೆಯೊಂದಿದ |
ನೊಪ್ಪುವೆವೆ ನಿನ್ನೀ ದುರಾಕೃತ |
ಮಪ್ಪಕಾರ್ಯವನೆನುತೆ ಗದರಿಸಿ ತೆಗೆಸಿದನು ಮಡಿಯ ||
ತಪ್ಪನಿವರಾಡುವರೆ ಬಾಲಿಕೆ |
ಯೊಪ್ಪುವಾಭರಣಾದಿವಸ್ತುಗ |
ಳಿಪ್ಪುವೆಲ್ಲವ ಕಳಿಪು ಜತೆಯಲ್ಲೆಂದನಾನೃಪತಿ ||೧೯||

ಚಿತ್ತದಾಸರುಮಧಿಕಮಪ್ಪುದು ।
ಪೆತ್ತವರಿಗಿಲ್ಲಿರ್ದೊಡಾನೇನು ।
ತುತ್ತಮೋತ್ತಮರಾಮನಾಜ್ಞೆಯನೀವುದೆಮಗೆಂದು ॥
ಸುತ್ತಿ ಬಲವಂದೆರಗಿ ಜನಕರ ।
ಮತ್ತೆ ಮಲತಾಯಡಿಗೆ ವಂದಿಸಿ ।
ಹತ್ತಿರಿರ್ದರಿಗೆಂದನೀಪರಿ ಮುಗಿದು ಕರಯುಗವ ॥೪೦॥

ಚಿತ್ತವಿವುದೀನುಡಿಯನಖಿಲರು ।
ಸತ್ಯವಂತನು ಪತಿಯಮೂಲ್ಯದ ।
ವಿತ್ತವಿತ್ತೊಡೆ ಸತಿಗೆ ತಾನದನಾರಿಗಿತ್ತಪಳು ॥
ಪೆತ್ತಕುವರಂಗೀಯೆ ಚೋದ್ಯವೆ ।
ಉತ್ತಮಸ್ತ್ರೀಧರ್ಮವಲ್ಲವೆ ।
ಮತ್ತೆ ಮಧ್ಯಮವಾತೆಯನು ನೀವೆತ್ತಿಯಾಡದಿರಿ ॥೪೧॥

ಪೋಗಿ ಜರ್ಪೆನು ನಾನು ಕಾನನ ।
ಕೀಗ ನಿಮ್ಮನು ಬೇಡಿಕೊಳ್ವೆನು ।
ರಾಗವಿರಹಿತಚಿತ್ತ ಮೇಣತಿವೃದ್ಧ ಮತಾತ್ಮ ॥
ಈಗಲೆನ್ನೊಳಗಿರ್ಪನಿಮ್ಮನು ।
ರಾಗವನು ಸಲೆ ಬೀರುತವನನು ।
ಜಾಗರೂಕತೆಯಿಂದೆ ನೋಡುವುದೆಂದು ಯಾಚಿಸುತೆ ॥೪೨॥

ವಿರಸಮಾಗಿಹ ಮುಖದ ಕಾಂತಿಯ ।
ಧರಿಸಿದಜಿನದ ಚೀರದುಡುಗೆಯ ।
ಪರಮಪುರಷನು ತಮ್ಮನೊಡಗೂಡುತ್ತೆ ಸತಿವೆರಸು ॥
ಧರಣಿಪಾಲನ ಬಳಿಯನುಳಿದಂ ।
ದರಮನೆಯ ಪೊರಮಟ್ಟು ಬಾಹ್ಯದೆ ।
ಪುರನಿವಾಸಿಗಳೆಲ್ಲ ನೆರೆದಿಹ ತಾಣಕೈತಂದ । ॥೪೩॥

ನೆನೆದಳೇನನು ಕೈಕೆ ಮತ್ಸರ ।
ವನಿತು ವನಿತೆಗದೇಕೆ ದುಷ್ಕುಲ ।
ಜನಿತೆಯಹಳಿಂದೀಕೆ ಕೃತಜನಬೋಕೆ ನಿರ್ಭೀಕೆ ॥
ಜನಪನಿವಳನು ತಂದು ತನ್ನರ ।
ಮನೆಗೆ ವೈಶ್ವಾನರನ ಹುಗಿಸಿಯೆ ।
ತನುಭವರಿಗೀ ಹಾಡಗೈದನೆ ಎಂದುದಖಿಳಜನ ॥೪೪॥

ತಪ್ಪನೇನನು ಕಂಡು ಹಿರಿಯನೆ |
ನಿಪ್ಪರಾಮನನಡವಿಗಟ್ಟಿದ |
ನಿಪ್ಪನರದೀಕಾರ್ಯಕಂತೊಪ್ಪಿದರು ಮಂತ್ರಿಗಳು ||
ಕಪ್ಪವನು ನಾಂ-ತೆರುವುದಿಲ್ಲವೆ |
ಒಪ್ಪುಗೊಳಿಸದೆ ನಮ್ಮ ನೀಗಳ್ |
ಮುಪ್ಪಿನವರಾ ನಡೆವಳಿಯನಿವನೆಂತು ಮುರಿದಪನು ||೪೫||

ಜನಪನನೆ ಕೇಳುವೆವು ನಾವೀ |
ಗೆನುತೆ ಕೆಲವರು ಮತ್ತೆ ಕೆಲವರು |
ಸನುಮತವೆ ನೀವಿಂತು ಪೇಳ್ವುದು ರಾಯನಾಜ್ಞೆಯಿದು ||
ಜನಕನಲ್ಲವೆ ನಮಗೆ ಭೂಪತಿ |
ಯೆಣಿಸಬಹುದೇ ತಪ್ಪನವನೊಳು |
ಮನುವೆನಿಪ ನಮ್ಮಾದಿಪುರುಷನ ನೇಮವಿದು ಜಗಕೆ ||೪೬||

ಆದರಿನಿಂದೀರಾಯನಾಜ್ಞೆಯು
ಸದುಳವೀಯದಬಳಿಕ ನಮಗಿಹ |
ಹದನು ಬೇರೇನೀಯಯೋಧ್ಯೆಯನುಳಿವುದೇ ಮತವು ||
ಮುದವು ನಮಗಿದು ರಾಮಚಂದ್ರನ |
ಪದವ ಭಜಿಸುತೆ ಕಾಡೊಳಿರ್ಪುದು |
ಸದಮಲನ ಸಂಗಡವೆ ಪೋಗುವೆವೆಂದರವರಂದು ||೪೭||

ಪುರಜನರು ತಮತಮಗೆ ತೋರಿದ |
ಪರಿಯೊಳಾಡುತ್ತಿರಲು ರಾಮನು |
ಕರೆದು ಸನಿಹಕೆ ಸತ್ಯಸಂಧನು ತಂದೆ ನುಡಿಡುದನು ||
ಅರಿತು ಪುತ್ರನು ಗೈಯದಿರಲಾ |
ನರಕಭಾಜನವೆನಿಪನದರಿಂ |
ಧರಿಸಿ ಶಿರದೊಳಗದನು ಕಾನನಕಿಂದು ತೆರಳುವೆನು ||೪೮||

ಭರತನೆನ್ನಯ ತಮ್ಮನಾಳ್ವನು |
ಧರೆಯ ಸದ್ಗುಣನಿಲಯ ಸಾತ್ವಿಕ |
ರೆರೆಯ ಧಾರ್ಮಿಕನವನ ಸೇರಿಯೆ ಸುಖದೆ ನೀವಿಹುದು ||
ಭರದೊಳೀಯವಧಿಯನು ಮುಗಿಯಿಸಿ |
ಮರಳಿ ಬಂದೀನಿಮ್ಮ ಹೃದಯಕೆ |
ಹರುಷವಿತ್ತಪೆನೆನುತೆ ನಂಬಿಸಿ ಪುರದೊಳೈತಂದ ||೪೯||

ಮೆರೆವಯೋಧ್ಯೆಯ ರಾಜವೀಧಿಯು |
ತೆರಹುಗುಡದಂತಾಗೆ ಜನಗಳ |
ನೆರವಿ ಕೂಡಿತು ರಮಣಿಯರು ನೆಲೆಮಾಡದಗ್ರದಲಿ ||
ಪರಮಕರುಣಾಸಿಂಧು ಪೋಪೆಯ |
ಚರಣನತಜನಬಂಧು ಪೋಪೆಯ |
ದುರಿತಹರ ನೀನೆಮ್ಮನುಳಿದೊಡೆ ಪೊರೆವರಾರಿಹರು ||೫೦||

ಸಿರಿಗೆ ಸರಿಯಹ ಸೀತೆಯೊಡವೆರೆ |
ದರಸ ನೀನಿಲ್ಲಿಂದೆ ತೆರಳಲು |
ನರಕವೆನಿಸದೆ ಪೊಳಲು ತಾನಿದು ದೇವ ಚಿತ್ತೈಸು ||
ದುರುಳೆ ಕೈಕೆಯ ಮಚ್ಚರದ ನುಡಿ |
ಗರಸ ನೀನಿಂತೆಮ್ಮನುಳಿವುದು |
ಸರಿಯೆ ಸರ್ವೋತ್ತಮನೆ ಯೆನ್ನುತೆ ಚೀರ್ದು ಹಲುಬಿದುದು ||೫೧||

ಪುರಜನಂಗಳ ದೀನರವದಿಂ |
ಕರಗಿತಂತಃಕರಣಮಂತುಂ |
ಪೊರಗೆ ತೋರಿಸದದನು ನಡೆಯುತೆ ಪುರನ ಪೊರನುಡಲು ||
ಅರಸನಪ್ಪಣೆವಿಡಿದು ರಥವನು |
ವರಸುಮಂತ್ರನು ತರಲು ರಾಘವ |
ನರಸಿಯೊಡನನುಜಾತನೊಡನದನೇರಿ ತೆರಳಿದನು ||೫೨||

ಎರಡನೆಯ ಸಂಧಿ ಸಂಪೂರ್ಣಂ.

# ಮೂರನೆಯ ಸಂಧಿ.

ಸೂಚನೆ || ವರಸುಮಂತ್ರನು ವನದದೆಸೆಯಿಂ |
ತಿರುಗಿ ಪುರಕೈತಂದು ರಾಮನ |
ಪರಿಯ ಪೇಳಲು ಹರಣವುಳಿದನು ಕೂಡೆ ದಶರಥನು ||

ಇಂತು ಪೋಗುತೆ ಸರಯು ತಮಸೆಯು |
ಮಂತು ವೇದಾವತಿಯು ಮುಂತಾ |
ದಂತರದ ನದಿಗಳನು ದಾಂಟಿಯೆ ಮೂರನೆಯದಿನದೆ ||
ಚಿಂತೆಯೊಂದದೆ ಕಂದಮೂಲಾ |
ಸಂತಫಲಗಳನುಂಡು ಪಸಿವನು |
ಶಾಂತಭಾವವನಾಂತು ಕಳೆಯುತೆ ಮುಂದೆ ಪೋಗುತಿರೆ ||೧||

ಹರನ ಶಿರದಿಂದಿಳಿದು ಧರೆಯನು |
ಪರಮಪಾವನಗೈದು ಮುಳುಗಿದ |
ನರರ ಜನ್ಮಾಂತರದ ಪಾಪವನೆಲ್ಲ ತೊಳೆಯುತ್ತೆ ||
ವರಭಗೀರಥಸಾರ್ವಭೌಮನ |
ನಿರುಪಮಾನತಪಃಫಲಂಬೋಲ್ |
ಮೆರೆವಭಾಗೀರಥಿಯ ಕಂಡರು ರಾತ್ರಿಸಮಯದಲಿ ||೨||

ಅಂದಿನಿರುಳನು ಕಳೆದು ಭೂರುಹ |
ದೊಂದರಡಿಯಲಿ ಸೀತೆವೆರಸರ |
ವಿಂದನಯನನು ಮೂರನೆಯದಿನಮೊಳ್ಪು ಬೆಳಗಿಸಲಿ ||
ಚಂದದಿಂದಂ ಸ್ನಾನಸಂಧ್ಯಾ |
ವಂದನಂಗಳ ತೀರ್ಚಿ ಸಚಿವಂ |
ಗೆಂದನಂದು ಸುಮಿತ್ರನೇ ಪಿಂದಿರುಗು ನೀನಿನ್ನು ||೩||

ಅಳಲಿಗೆಡೆಯಾಗಿರ್ದ ತಂದೆಯ |
ನುಳಿದು ಬಂದೆವು ಸಂತವಿಪುದಕೆ |
ಬಳಿಯೊಳಾರಿನ್ನಿಹರು ಹಿತರಪ್ಪಾಪ್ತಮಂತ್ರಿಗಳು ||
ಕಳುಹಿ ಚರರನು ಬೇಗ ಕರೆಯಿಸಿ |
ನಲವಿನಿಂ ಭರತನನು ಭೂಮೀ |
ಲಲನೆಗರಸೆಂದೆನಿಸಿ ಮೊದಲಿನ ತೆರದೆ ನೀನಿಹುದು ||೪||

ತರಳಭರತಂ ಭ್ರಾತೃಸೌಹೃದ |
ನಿರತನಾದುದರಿಂದೆ ರಾಜ್ಯದ |
ಸಿರಿಯನೊಲ್ಲದೆ ಮಾತೆಯನು ದುಷ್ಟಾತ್ಮೆಯೆಂದೆನುತೆ ||
ಕೆರಳಿ ಕೋಪವನೆಸಗಲಾತಂ |
ಗೊರೆದು ಬುದ್ಧಿಯನಣ್ಣನಾಜ್ಞೆಯು |
ಧರಿಸಿ ಮಕುಟವನಿಳೆಯನಾಳೆಂದೆನುತೆ ಪೇಳುವುದು ||೫||

ಎನ್ನ ಮಾತೆಗೆ ಸಚ್ಚರಿತ್ರೆಗೆ |
ಬಿನ್ನವಿಸುವುದು ನಿನ್ನ ಕುವರನು |
ಮುನ್ನಿನಂದದೆ ಸುಖದೊಳಿರ್ಪನು ಬೇಗನೈದುವನು ||
ಸನ್ನುತಾತ್ಮನ ಭರತನನು ನೀ |
ನಿನ್ನ ನಿಜಸುತನಂತೆ ಕಾಣ್ಬುದು |
ಮನ್ನಿಪುದು ಬಿನ್ನಪವನಿಂತಿದನೆಂದು ಪೇಳುವುದು ||೬||

ರಾಮನೀಪರಿ ನುಡಿಯಲದನಾ |
ಸ್ವಾಮಿಭಕ್ತನು ಕೇಳ್ದು ನಿಮ್ಮಮ |
ನೀಮಹಾರಣ್ಯದಲಿ ಬಿಟ್ಟಕಟೆಂತು ಪೋದಪೆನು ||
ಕಾಮಿಪೆನು ನಾನೇನುಮಂ ನೀಂ |
ನೇಮವಿತ್ತೊಡೆ ಜತೆಯೊಳಿರ್ಪೆಂ |
ಪ್ರೇಮದಿಂದಿದ ಕರುಣಿಸೆಂದನು ಮಂತ್ರಿ ಕೈಮುಗಿದು ||೭||

ತಮ್ಮನೊಡನಿಹ ತನಗೆ ಕಾಡಿದು |
ರಮ್ಯಮಾಗಿಹ ಭವನದಂತಿದೆ |
ನೆಮ್ಮದಿಗೆ ಭಯವುಂಟೆ ನನಗಿನ್ನಿಲ್ಲಿ ನೀನರಿಯಾ ||
ಸಮ್ಮತವು ನನಗಿದುವೆ ನೀನಿಂ |
ದೆಮ್ಮ ತಾಯ್ತಂದೆಗಳನೋವು |
ತ್ತುಮ್ಮಳವ ಬಿಡಿಸಿದೊಡೆ ಸಾಕಿನ್ನೆಂದನಾ ರಾಮ ||೮||

ರಾಯಗುವರನ ಮಾತಿಗುತ್ತರ |
ವೀಯಲಾರದೆ ನಮಿಸಿ ಕೈಕೆಯು |
ಮಾಯೆಗಚ್ಚರಿವಡುತೆ ಸಚಿವನು ರಥದೆ ಮರಳಿದನು ||
ರಾಯರಾಮನ ಬರವ ಕೇಳ್ದಂ |
ದಾಯತಾತ್ಮನು ಮಿತ್ರಗುಹನೈ |
ದೀಯರಣ್ಯದ ರಾಜ್ಯಭಾರವ ವಹಿಸು ನೀನೆನಲು ||೯||

ಗುಹನೆ ನಿನಗೀಮಧುರವಚನವು |
ವಿಹಿತವೈಸಲೆ ಮುನಿಯವೃತ್ತಿಯ |
ವಹಿಸಿ ಬಂದಿಹ ತನಗೆ ನಿನ್ನೀಬಯಕೆ ಸಲ್ಲುವುದೆ ||
ಮಿಹಿರವಂಶದ ರಾಜಪುತ್ರನು |
ಮಹಿತಧರ್ಮಾಚರಣನೆನಿಸಿದ |
ನಹಹ ಮೆನುತೀಜಗವು ನಗಲಾಂ ಬದುಕಿ ಫಲವೇನು ||೧೦||

ಎಂದು ನುಡಿದೊಲವಿಂದೆ ವಟತರು |
ವಿಂದೆ ಹಾಲನು ತಂದು ಜಡೆಗಳ |
ನಂದು ವಿರಚಿಸಲಾ ಸಹೋದರನೊಡನೆ ರಘುವರನು ||
ಚಂದಿರಾನನೆ ಗಂಡಮೈದುನ |
ರಂದಿನಿರವನು ಕಂಡು ದುಃಖದೆ |
ನೊಂದು ಬೈದಳು ಶಪಿಸಿ ದುಷ್ಕೃತನಿಧಿಯ ಹತವಿಧಿಯ ||೧೧||

ಜನಕಚಕ್ರೇಶ್ವರನ ಭವನದೊ |
ಳನಿಮಿಷರ ಧಿಕ್ಕರಿಪತೇಜದೆ |
ಘನವಿವಾಹದೊಳೆಸೆದ ಸಿರಿವೈಸೊಬಗಿಗೀವಿಧಿಯೆ ||
ಇನಕುಲಾನ್ವಯಸಾರ್ವಭೌಮರ |
ವಿನುತಮಣಿಮುಕುಟಕ್ಕೆ ಸಲ್ವೀ |
ಘನಶಿರಕೆ ಜಟೆ ಹವಣೆ ಎಂದಳು ಹಲುಬಿ ಮೃಗನಯನೆ ||೧೨||

ಅರಸಿಯನು ಸಂತವಿಸಿ ರಾಮನು |
ಮೆರೆವಯೋಧ್ಯೆಯ ಕಡೆಯನೀಕ್ಷಿಸಿ |
ಕರವ ಮುಗಿದನು ತರಣಿವಂಶದ ಶೂರರೆಡೆವಿಡದೆ ||
ವರವ ಪಡೆದರು ನಿನ್ನ ಸೇವಿಸಿ |
ಪರಮಪಿತೃಋಣವೆನ್ನ ತಡೆದಿದೆ |
ಭರದೆ ತೀರಿಸಿಯದನು ಮರಳುವುದೆಂದನುಗ್ರಹಿಸು ||೧೩||

ಎನುತ ಯಾಚಿಸಿ ಗುಹನನೀಕ್ಷಿಸಿ |
ವಿನಯಶೀಲನೆ ಬೇಗ ನಾವೆಯ |
ನನುಗೊಳಿಸು ನೀನೆಂದು ನುಡಿಯಲು ತರಿಸಲದನವನು ||
ಜನಕಸುತೆಯೊಡನನುಜಸಹಿತನು |
ಮನುಕುಲೋದ್ಭವನೇರಿಯದನಾ |
ವನಪನನು ಬೀಳ್ಕೊಟ್ಟು ನಿರ್ಜರಗಂಗೆಯನು ದಾಂಟಿ ||೧೪||

ಮೆರೆವಯೋಧ್ಯೆಯ ರಾಜವೀಥಿಯು |
ತೆರಹುಗುಡದಂತಾಗೆ ಜನಗಳ |
ನೆರವಿ ಕೂಡಿತು ರಮಣಿಯರು ನೆಲೆಮಾಡದಗ್ರದಲಿ ||
ಪರಮಕರುಣಾಸಿಂಧು ಪೋಪೆಯ |
ಚರಣನತಜನಬಂಧು ಪೋಪೆಯ |
ದುರಿತಹರ ನೀನೆಮ್ಮನುಳಿದೊಡೆ ಪೊರೆವರಾರಿಹರು ||೫೦||

ಸಿರಿಗೆ ಸರಿಯಹ ಸೀತೆಯೊಡವೆರೆ |
ದರಸ ನೀನಿಲ್ಲಿಂದೆ ತೆರಳಲು |
ನರಕವೆನಿಸದೆ ಪೊಳಲು ತಾನಿದು ದೇವ ಚಿತ್ತೈಸು ||
ದುರುಳೆ ಕೈಕೆಯ ಮಚ್ಚರದ ನುಡಿ |
ಗರಸ ನೀನಿಂತೆಮ್ಮನುಳಿವುದು |
ಸರಿಯೆ ಸರ್ವೋತ್ತಮನೆ ಯೆನ್ನುತೆ ಚೀರ್ದು ಹಲುಬಿದುದು ||೫೧||

ಪುರಜನಂಗಳ ದೀನರವದಿಂ |
ಕರಗಿತಂತಃಕರಣಮಂತುಂ |
ಪೊರಗೆ ತೋರಿಸದದನು ನಡೆಯುತೆ ಪುರನ ಪೊರಮಡಲು ||
ಅರಸನಪ್ಪಣೆವಿಡಿದು ರಥವನು |
ವರಸುಮಂತ್ರನು ತರಲು ರಾಘವ |
ನರಸಿಯೊಡನನುಜಾತನೊಡನದನೇರಿ ತೆರಳಿದನು ||೫೨||

ಎರಡನೆಯ ಸಂಧಿ ಸಂಪೂರ್ಣಂ.

# ಮೂರನೆಯ ಸಂಧಿ.

ಸೂಚನೆ || ವರಸುಮಂತ್ರನು ವನದದೆಸೆಯಿಂ |
ತಿರುಗಿ ಪುರಕೈತಂದು ರಾಮನ |
ಪರಿಯ ಪೇಳಲು ಹರಣವುಳಿದನು ಕೂಡೆ ದಶರಥನು ||

ಇಂತು ಪೋಗುತೆ ಸರಯು ತಮಸೆಯು |
ಮಂತು ವೇದಾವತಿಯು ಮುಂತಾ |
ದಂತರದ ನದಿಗಳನು ದಾಂಟಿಯೆ ಮೂರನೆಯದಿನದೆ ||
ಚಿಂತೆಯೊಂದದೆ ಕಂದಮೂಲಾ |
ನಂತಫಲಗಳನುಂಡು ಪಸಿವನು |
ಶಾಂತಭಾವವನಾಂತು ಕಳೆಯುತೆ ಮುಂದೆ ಪೋಗುತಿರೆ ||೧||

ಹರನ ಶಿರದಿಂದಿಳಿದು ಧರೆಯನು |
ಪರಮಪಾವನಗೈದು ಮುಳುಗಿದ |
ನರರ ಜನ್ಮಾಂತರದ ಪಾಪವನೆಲ್ಲ ತೊಳೆಯುತ್ತೆ ||
ವರಭಗೀರಥಸಾರ್ವಭೌಮನ |
ನಿರುಪಮಾನತಪಃಫಲಂಬೋಲ್ |
ಮೆರೆವಭಾಗೀರಥಿಯ ಕಂಡರು ರಾತ್ರಿಸಮಯದಲಿ ||೨||

ಅಂದಿನಿರುಳನು ಕಳೆದು ಭೂರುಹ |
ದೊಂದರಡಿಯಲಿ ಸೀತೆವೆರಸರ |
ವಿಂದನಯನನು ಮೂರನೆಯದಿನಮೆಳ್ಪುಬೆಳಗಿಸಲಿ ||
ಚಂದದಿಂದಂ ಸ್ನಾನಸಂಧ್ಯಾ |
ವಂದನಂಗಳ ತೀರ್ಚಿ ಸಚಿವಂ |
ಗೆಂದನಂದು ಸುಮಿತ್ರನೇ ಪಿಂದಿರುಗು ನೀನಿನ್ನು ||೩||

ಅಳಲಿಗೆಡೆಯಾಗಿರ್ದ ತಂದೆಯ |
ನುಳಿದು ಬಂದೆವು ಸಂತವಿಪುದಕೆ |
ಬಳಿಯೊಳಾರಿನ್ನಿಹರು ಹಿತರಪ್ಪಾಪ್ತಮಂತ್ರಿಗಳು ||
ಕಳುಹಿ ಚರರನು ಬೇಗ ಕರೆಯಿಸಿ |
ನಲವಿನಿಂ ಭರತನನು ಭೂಮೀ |
ಲಲನೆಗರಸೆಂದೆನಿಸಿ ಮೊದಲಿನ ತೆರದೆ ನೀನಿಹುದು ||೪||

ತರಳಭರತಂ ಭ್ರಾತೃಸೌಹೃದ |
ನಿರತನಾದುದರಿಂದೆ ರಾಜ್ಯದ |
ಸಿರಿಯಸೊಲ್ಲದೆ ಮಾತೆಯನು ದುಷ್ಟಾತ್ಮೆಯೆಂದೆನುತೆ ||
ಕೆರಳಿ ಕೋಪವನೆಸಗಲಾತಂ |
ಗೊರೆದು ಬುದ್ಧಿಯನಣ್ಣನಾಜ್ಞೆಯು |
ಧರಿಸಿ ಮಕುಟವನಿಳೆಯನಾಳೆಂದೆನುತೆ ಪೇಳುವುದು ||೫||

ಎನ್ನ ಮಾತೆಗೆ ಸಚ್ಚರಿತ್ರೆಗೆ |
ಬಿನ್ನವಿಸುವುದು ನಿನ್ನ ಕುವರನು |
ಮುನ್ನಿನಂದದೆ ಸುಖದೊಳಿರ್ಪನು ಬೇಗನೈದುವನು ||
ಸನ್ನುತಾತ್ಮನ ಭರತನನು ನೀ |
ನಿನ್ನ ನಿಜಸುತನಂತೆ ಕಾಣ್ಬುದು |
ಮನ್ನಿಪುದು ಬಿನ್ನಪವನಿಂತಿದನೆಂದು ಪೇಳುವುದು ||೬||

ರಾಮನೀಪರಿ ನುಡಿಯಲದನಾ |
ಸ್ವಾಮಿಭಕ್ತನು ಕೇಳ್ದು ಸಿಮ್ಮುಮ |
ನೀಮಹಾರಣ್ಯದಲಿ ಬಿಟ್ಟಕಟೆಂತು ಪೋದಪೆನು ||
ಕಾಮಿಸೆನು ನಾನೇನುಮಂ ನೀಂ |
ನೇಮವಿತ್ತೊಡೆ ಜತೆಯೊಳಿರ್ಪೆಂ |
ಪ್ರೇಮದಿಂದಿದ ಕರುಣಿಸೆಂದನು ಮಂತ್ರಿ ಕೈಮುಗಿದು ||೭||

ತಮ್ಮನೊಡನಿಹ ತನಗೆ ಕಾಡಿದು |
ರಮ್ಯಮಾಗಿಹ ಭವನದಂತಿದೆ |
ನೆಮ್ಮದಿಗೆ ಭಯವುಂಟೆ ನನಗಿನ್ನಿಲ್ಲಿ ನೀನರಿಯಾ ||
ಸಮ್ಮತವು ನನಗಿದುವೆ ನೀನಿಂ |
ದೆಮ್ಮ ತಾಯ್ತಂದೆಗಳನೋವು |
ತ್ತುಮ್ಮಳವ ಬಿಡಿಸಿದೊಡೆ ಸಾಕಿನ್ನೆಂದನಾರಾಮ ||೮||

ರಾಯಗುವರನ ಮಾತಿಗುತ್ತರ |
ವೀಯಲಾರದೆ ನಮಿಸಿ ಕೈಕೆಯ |
ಮಾಯೆಗಚ್ಚರಿವಡುತೆ ಸಚಿವನು ರಥದೆ ಮರಳಿದನು ||
ರಾಯರಾಮನ ಬರವ ಕೇಳ್ದಂ |
ದಾಯತಾತ್ಮನು ಮಿತ್ರಗುಹನೈ |
ತೀಯರಣ್ಯದ ರಾಜ್ಯಭಾರವ ವಹಿಸು ನೀನೆನಲು ||೯||

ಗುಹನೆ ನಿನಗೀಮಧುರವಚನವು |
ವಿಹಿತವೈಸಲೆ ಮುನಿಯವೃತ್ತಿಯ |
ವಹಿಸಿ ಬಂದಿಹ ತನಗೆ ನಿನ್ನೀಬಯಕೆ ಸಲ್ಲುವುದೆ ||
ಮಿಹಿರವಂಶದ ರಾಜಪುತ್ರನು |
ಮಹಿತಧರ್ಮಾಚರಣನೆನಿಸಿದ |
ನಹಹ ಮೆನುತೀಜಗವು ನಗಲಾಂ ಬದುಕಿ ಫಲವೇನು ||೧೦||

ಎಂದು ನುಡಿದೊಲವಿಂದೆ ವಟತರು |
ವಿಂದೆ ಹಾಲನು ತಂದು ಜಡೆಗಳ |
ನಂದು ವಿರಚಿಸಲಾ ಸಹೋದರನೊಡನೆ ರಘುವರನು ||
ಚಂದಿರಾಸನೆ ಗಂಡಮೈದುನ |
ರಂದಿನಿರವನು ಕಂಡು ದುಃಖದೆ |
ನೊಂದು ಬೈದಳು ಶಪಿಸಿ ದುಷ್ಕೃತನಿಧಿಯ ಹತವಿಧಿಯ ||೧೧||

ಜನಕಚಕ್ರೇಶ್ವರನ ಭವನದೊ |
ಳನಿಮಿಷರ ಧಿಕ್ಕರಿಪತೇಜದೆ |
ಘನವಿವಾಹದೊಳೆಸೆದ ಸಿರಿನೈಸೊಬಗಿಗೀವಿಧಿಯೆ ||
ಇನಕುಲಾನ್ವಯಸಾರ್ವಭೌಮರ |
ವಿನುತಮಣಿಮುಕುಟಕ್ಕೆ ಸಲ್ವೀ |
ಘನಶಿರಕೆ ಜಟೆ ಹವಣೆ ಎಂದಳು ಹಲುಬಿ ಮೃಗನಯನೆ ||೧೨||

ಅರಸಿಯನು ಸಂತವಿಸಿ ರಾಮನು |
ಮೆರೆವಯೋಧ್ಯೆಯ ಕಡೆಯನೀಕ್ಷಿಸಿ |
ಕರವ ಮುಗಿದನು ತರಣಿವಂಶದ ಶೂರರೆಡೆವಿಡದೆ ||
ವರವ ಪಡೆದರು ನಿನ್ನ ಸೇವಿಸಿ |
ಪರಮಪಿತೃಋಣವೆನ್ನ ತಡೆದಿದೆ |
ಭರದೆ ತೀರಿಸಿಯದನು ಮರಳುವುದೆಂದನುಗ್ರಹಿಸು ||೧೩||

ಎನುತೆ ಯಾಚಿಸಿ ಗುಹನನೀಕ್ಷಿಸಿ |
ವಿನಯಶೀಲನೆ ಬೇಗ ನಾವೆಯ |
ನನುಗೊಳಿಸು ನೀನೆಂದು ನುಡಿಯಲು ತರಿಸಲದನವನು ||
ಜನಕಸುತೆಯೊಡನನುಜಸಹಿತನು |
ಮನುಕುಲೋದ್ಭವನೇರಿಯದನಾ |
ವನಪನನು ಬೀಳ್ಕೊಟ್ಟು ನಿರ್ಜರಗಂಗೆಯನು ದಾಂಟು ||೧೪||

ತೆರಳಿಯಲ್ಲಿಂ ಮುಂದೆ ನಡೆಯಲು |
ಚರಿಸಲಸದಳಮೆನಿಪಬಟ್ಟೆಯೊ |
ಳುರುವಕಲ್ಮುಳ್ಳಿಡಿದಘೋರಾರಣ್ಯಮಧ್ಯದಲಿ |
ಧರಣಿಜೆಯ ಚರಣಗಳು ಕುಂದಿದು |
ಏರದೆ ನೊಂದುವು ಹಜ್ಜೆಹಜ್ಜೆಗೆ |
ತಿರುಗಿ ಪತಿಯನು ನೋಡಿ ನಡೆದಳು ಗದಗದಿಸಿಯಳುತೆ ||೧೫||

ನೋಡಿದನು ರಾಘವನು ಸುದತಿಯ |
ಪಾಡನಿವಳಕಟೆಂದಳಲ್ವಳು |
ಕಾಡಿನಾಟವು ಸದರವಲ್ಲವು ಕಷ್ಟವೆಂದೆನಲು ||
ಕೂಡೆ ನೀನಿರಲೇನು ಭಯವೆಂ |
ದಾಡಿ ನನ್ನನೆ ನಂಬಿ ಬಂದಳು |
ಮಾಡಲೇನನು ಮುಂದೆ ನಾನೆಂದಳಲಿದನು ಮರುಗಿ ||೧೬||

ಸೈರಿಸಿದನೆಲೆದೇವಿ ವಿಧಿಯನು |
ಮೀರಲಾರಿಂದಳವು ಪೂರ್ವದೊ |
ಳಾರಸೀಪರಿಯಳಲಿಸಿದೆವೋ ಒದವಿತಿಂದೆಮಗೆ ||
ತೋರುತಿದೆ ನೋಡಲ್ಲಿ ಸರಸಿಯು |
ಸಾರಿ ನಾಂ ಜಲವೀಂಟಿ ದಣಿವನು |
ನೀರೆ ಕಳೆವೆವು ಬಾರೆನುತೆ ಕರವಿತ್ತು ನಡೆಸಿದನು ||೧೭||

ಸರಸಿಯಿರ್ಪೆಡೆಗೈದಿ ನೀರಿಂ |
ಕರಪದಂಗಳ ತೊಳೆದು ತಾಂ ಬಳಿ |
ಕಿರದೆ ತಡಿಯೊಳ್ಜಾನಕಿಯ ಕುಳ್ಳಿರಿಸಿ ಸೋದರರು ||
ಹರಿಣಗಳ ಬೆಂಬತ್ತಿ ಸಾರ್ದತಿ |
ಭರದೆ ಬೇಂಟೆಯನಾಡಿ ಮಾಂಸದೆ |
ಪರಿಹರಿಸಿದರು ಪಸಿವನೈದಿಯದೊಂದುಮರದೆಡೆಯ ||೧೮||

ಬಳಿಕ ಗಂಗಾಯಮುನೆಯರು ಸಂ |
ಗಳಿಸಿದಮಳಕ್ಷೇತ್ರಕೈತಂ |
ದೊಲಿದು ಭಾರದ್ವಾಜರಾತಿಥ್ಯವನು ಕೈಕೊಂಡು ||
ಕಳೆದು ರಾತ್ರಿಯನಲ್ಲಿ ಮರುದಿನ |
ತಳುವದಪರಿಂ ಚಿತ್ರಕೂಟದ |
ನೆಲೆಯನರಿದಲ್ಲವರು ವಾಸಿಸಲಾಜ್ಞೆಯೊಂದಿದರು ||೧೯||

ತೆರಳುತಿರೆ ಗೋಚರಿಸಿತಿದಿರಲಿ |
ಹರಿಕರಿಪ್ರಮುಖೋಗ್ರಮೃಗಭೀ |
ಕರಮದೆನಿಪಾಚಿತ್ರಕೂಟಾಚಲದ ಕಾನನವು ||
ಮೆರೆವ ಶುಕಪಿಕಗರುಡಮೊದಲಹ |
ಪರಿಪರಿಯ ಪಕ್ಷಿಗಳನೊಳಕೊಂ |
ಡಿರದೆ ನಭವಂ ತುಡುಕುತಿಹ ತರುನಿಚಯದಿಂ ಕೂಡಿ ||೨೦||

ಅತ್ತ ರಥವನು ವರಸುಮಂತ್ರನು |
ಪತ್ತಿ ತಿರುಗಿದನೊಡನೆ ನಗರಿಗೆ |
ಚಿತ್ತದಲಿ ನೃಪಪುತ್ರರಗಲಿಕೆಯಿಂದೆ ದುಃಖಿಸುತೆ ||
ಹತ್ತಿರೈತರೆ ಕಂಡು ಪೌರರು |
ಮುತ್ತಿಕೊಂಡರು ರಥದ ಸುತ್ತಲು |
ಬೆತ್ತಲೆಯ ತೇರೇತಕೈದಿತು ರಘುಜನೆಲ್ಲೆನುತೆ ||೨೧||

ಪರಮಪುರುಷನದೆತ್ತ ಪೋದನು |
ಪುರಕೆ ಮರಳನೆ ನಮ್ಮ ಪೊರೆಯನೆ |
ಚರಣಸೇವೆಯ ಸುಖವು ದೊರೆಯದೆ ಮುಂದೆ ನಮಗವನ ||
ಅರುಹು ನೀನಿದನೆಂದು ಮೊರೆಯಿಡು |
ವರನು ಸಂತವಿಡುತ್ತೆ ಮುಂದಕೆ |
ತೆರಳಿಯರಮನೆವೊಕ್ಕನಾತನು ರಥವ ಹೊರಗಿರಿಸಿ ||೨೨||

ಬಂದಸಚಿವನ ನೋಡಿ ಭೂಪನು |
ನಂದನರನಾವೆಡೆಯೊಳುಳಿದೈ |
ಮಂದಭಾಗ್ಯಂಗೆನಗೆ ಬುದ್ಧಿಯನೇನನೊರೆದಿಹರು ||
ಇಂದು ನೀನವರೆಂದನುಡಿಗಳ |
ನೊಂದನಾದೊಡಮುಳಿಯದರಿಪುತೆ |
ದಂದುಗಂಬಡುತಿರ್ಪಮನವನು ಸಂತವಿರಿಸೆಂದ ||೨೩||

ರಾಯನಾಡಿದಮಾತಿಗುತ್ತರ |
ವೀಯಲಸದಳಮೆನಿಪದುಃಖದೆ |
ಜೀಯ ತವಸಂದನರು ಮಂದಾಕಿನಿಯ ನೆರೆದಾಂಟಿ ||
ಕಾಯಬಲಶರಯುತರು ನಾವಸ |
ಹಾಯವೃದ್ಧನು ಜನಕ ನಿನಗಂ |
ನ್ಯಾಯವಾತನ ಸೇವೆ ಪೋಗೆಂದೆನ್ನ ಕಳುಹಿದರು ||೨೪||

ಇಂತು ನುಡಿದಾಮಂತ್ರಿ ತೆರಳಿ ದು |
ರಂತಮಾದಳಲಾವರಿಸಿ ನೃಪ |
ನಂತರಂಗವ ಸುಡುತುಮಿರೆ ಕೌಸಲ್ಯೆಯನು ಕರೆದು ||
ಪಿಂತೆ ಮುನಿಪುತ್ರಂಗದೊರ್ವಂ |
ಗಂತಕನು ನಾನಾದೆನರಿಯದೆ |
ಚಿಂತೆಯೊಂದುತ್ತವನ ಪಿತನಂದೆನ್ನ ಶಪಿಸಿದನು ||೨೫||

ಅರಸ ನೀನಿಂದೆಮ್ಮ ಕುವರನ |
ಹರಣವಳಿಯಿಸಿಯಿನಿತುದುಃಖಕೆ |
ಗುರಿಯ ಮಾಡಿದೆ ನಮ್ಮನದರಿಂ ಪುತ್ರಶೋಕದಲಿ ||
ನರಳಿ ನೀನಳಿಯೆಂದು ಶಪಿಸಿದ |
ನರಿಯಲದು ಸಂಪ್ರಾಪ್ತಮಾಯ್ತಿಂ |
ದರಸಿ ನಾನಿನ್ನುಳಿಯಲಾರೆನು ಶಕ್ತಿ ಕುಂದುತಿದೆ ||೨೬||

ಇದೆಕೊ ಬುದ್ಧಿಭ್ರಮೆಯು ತಾನಿಂ |
ತಿದೆಕೊ ಪಾರುವುದೆದೆಯು ವಿಷಯಗ |
ಳಿದೆಕೊ ಶಬ್ದಸ್ಪರ್ಶಮುಖ್ಯಗಳೆನ್ನ ನಗಲುತಿವೆ ||
ಪದುಮನೇತ್ರನ ಚಾರುಗಾತ್ರನ |
ಮುದವ ಬೀರುವ ಮಗನ ರಾಮನ |
ಪದುಳದಿಂ ತಕ್ಕೈಸಿ ನಲಿವಾ ಪುಣ್ಯವಿನ್ನೆಲ್ಲಿ ||೨೭||

ಪೇಳುತೀಪರಿಯೊರಗಿ ಮಂಚದೆ |
ಬೀಳುಕೊಡೆ ಹರಣವನು ನರಪತಿ |
ಗೋಳುಗುಟ್ಟುತೆ ಕೌಸಲೆಯು ಮೊದಲಾದ ರಾಣಿಯರು ||
ಆಳಿದನೆ ತೊರೆದೀಗಳೆಮ್ಮನು |
ಪಾಳುಗೈದಿಂತಕಟ ಪೋಪುದೆ |
ಮೇಲೆ ರಕ್ಷಕರಾರು ನಮಗಿನ್ನೆಂದು ಹಲುಬಿದರು ||೨೮||

ಅರಸನನು ಪೋಯ್ತೆಂಬವಾರ್ತೆಯ |
ನರಿದು ಬಂದರು ಮಂತ್ರಿವರರಾ |
ತೆರನಕಂಡರು ಮರುಗಿ ಹಮ್ಮೈಸಿದರು ನೆನೆನೆನೆದು ||
ತೆರಳಿ ಪೋದರು ರಾಮಲಕ್ಷ್ಮಣ |
ರಿರದೆ ವನಚರರಾಗಿ ಕೇಕಯ |
ಪುರಿಯೊಳಿರುವನು ಭರತ ಸೋದರಸಹಿತ ತಾನೀಗ | ||೨೯||

ಹರಣವಳಿದೀವಾರ್ತೆ ಪುರದೊಳು |
ಹರಡದಂದದೆ ಬೇಗ ಭರತನ |
ಬರಿಸಿ ನಿಲಿಸಲುಬೇಕು ರಾಜ್ಯದೊಳೆನುತೆ ನಿಶ್ಚೈಸಿ ||
ತ್ವರಿತದಿಂದೋಲೆಯನು ಬರೆದನು |
ಚರರನಟ್ಟಿದೊಡವರು ಕೇಕಯ |
ಪುರವ ಸೇರ್ದೊಡನಿತ್ತರಾಲೇಖನವ ಭರತಂಗೆ ||೩೦||

ದೇವ ನಿನ್ನಯ ದರ್ಶನವನೆಮ |
ಗೀವುದೀಗಳೆ ರಾಜಕಾರ್ಯದ |
ಭಾವ ಕಿಡುವುದು ತಳುವಿದೊಡೆಯೆಂಬೊಕ್ಕಣೆಯನೋದಿ||
ಸಾವಕಾಶತೆಗೈಯದಲ್ಲಿಂ |
ಕೋವಿದನು ಶತ್ರುಘ್ನ ಸಹಿತನು |
ಮಾವನಾಣತಿಗೊಂಡಯೋಧ್ಯಾಪುರಕೆ ಮರಳಿದನು ||೩೧||

ಮೂರನೆಯ ಸಂಧಿ ಸಂಪೂರ್ಣಂ.

## ನಾಲ್ಕನೆಯ ಸಂಧಿ.

ಸೂಚನೆ || ಭರತನುರುತರಕೋಪದಲಿ ಧಿ |
ಕ್ಕರಿಸಿ ನಿಜಮಾತೆಯನು ರಾಮನ |
ಕರೆತರುವೆನೆಂದರಸುತರಿದನು ನೆಲೆಯನಗ್ರಜನಾ ||

---

ಬಂದುಪೊಕ್ಕರಮನೆಯ ತನ್ನಯ |
ತಂದೆಯಡಿಗಳಿಗೆರಗಲೆಂದಾ |
ನಂದಭಾವದೆ ಹುಡುಕಿ ಕಾಣದೆ ಭೂಮಿಪನ ಸುಳಿವ ||
ಸಂದೆಗಕ್ಕೆಡೆಗೊಟ್ಟು ಮನದೊಳ |
ಗಂದು ಮಾತೆಯ ನಿಳಯಕೈದಿಯ |
ಮಂದಭಕ್ತಿಯೊಳೆರಗಿಯೆನ್ನಯ ತಾತನೆಲ್ಲೆಂದು ||೧||

ಕೇಳುತಿಹ ತನಯನನು ಕೈವಿಡಿ |
ದೇಳು ನೀನೇಳೆಂದು ಮುದ್ದಿಸಿ |
ಪೇಳಲೇಸನು ಮಗನೆ ದೈವದೊಳಾರು ಸೆಣಸುವರು ||
ಕಾಲನೋಲಗಕೈದೆ ಪೋದನ |
ಕಾಲದಮೃತದ ವೃಷ್ಟಿ ನಿನ್ನಯ |
ಮೇಲೆ ಕರೆದುದು ಕಂದ ಪೆತ್ತೆನಗೊದವಿತಾನಂದ ||೨||

ಮಾತೆಯಾಡಿದ ನುಡಿಯನಾಲಿಸಿ |
ಭೂತಳದ ಮೇಲೊಡನೆ ಬೀಳುತ |
ಜಾತಶತ್ರುವೆ ತಾತ ಸುಜನವ್ರಾತಸಂಪ್ರೀತ ||
ಪಾತಕಿಯೆನುತ್ತೆನ್ನ ಕರೆಸದೆ |
ಮಾತನಾಡದೆ ಜಾರಿ ಪೋದೈ |
ಖ್ಯಾತರಘುಕುಲಜಾತ ದಶರಥ ನಾಥರಾರೆನಗೆ ||೩||

ಕಾಣದಾದೆನೆ ತಂದೆಯನು ತನ |
ಗೇನನೊರೆದನು ಮತಿಯ ತಾನವ |
ಸಾನಕಾಲದೆ ಬಳಿಯೊಳಿರ್ದುಪಚರಿಸದಾದೆನಲಾ ||
ಪ್ರಾಣವಳಿವಾಕಾಲದಲಿ ಮ |
ತ್ಸೂನುವೆಲ್ಲೆಂದೆನ್ನ ಕರೆದನೆ |
ಮಾನವರ್ಗಧಿದೇವನೆನಿಪಾ ನೃಪನದೆಂತಳಿದ ||೪||

ಆಮಹಾತ್ಮನ ಕಡೆಯಕಾಲದೆ |
ಕಾಮಿಸಿದವಸ್ತುಗಳನೊದವಿಸಿ |
ನೇಮದಿಂ ವಿಧಿವಿಹಿತಮುದಪರಕ್ರಿಯೆಗಳನು ಗೈದು ||
ಭೂಮಿಯಲಿ ಸತ್ಪುತ್ರರೆನಿಸಿದ |
ರಾಮಲಕ್ಷ್ಮಣರವರೆ ಧನ್ಯರು |
ನಾಮಮಾತ್ರಕ್ಕಣುಗನೆನಿಸಿದೆನಲ್ತೆ ನಾಂ ಜನಿಸಿ ||೫||

ಆದುದಾಯಿತು ತಾಯೆ ಮುಂದಿ |
ನ್ನಾದಯಾಳುವೆನಿಪ್ಪರಾಮನ |
ಪಾದವನು ಸೆರೆ ನಂಬುತವನೇ ತಂದೆಯೆಂದೆನುತೆ |
ವೇದಸಮವೆಂದವನನುಜ್ಞೆಯ |
ನಾದರದೆ ಕೈಕೊಂಡು ನಡೆವೆನು |
ಸೋದರನದೆಲ್ಲಿಹನು ಬೆಸಸೆನಗೆಂದು ಕೈಮುಗಿದ ||೬||

ನಂದನನ ನುಡಿಗೇಳ್ದು ಕೇಳಿಲೆ |
ಕಂದ ಭೂಪನ ಕೊನೆಯ ಮಾತಿದು |
ಸುಂದರರು ರಘುರಾಮಲಕ್ಷ್ಮಣರೆಂದು ಬರ್ಪರೊ ಹಾ ||
ಮುಂದೆ ಧನ್ಯರು ತಾವಲಾ ವನ |
ದಿಂದಮೈತಹ ಮಕ್ಕಳನು ಕ |
ಣ್ಣಿಂದೆ ಕಾಣ್ಬಾಜನರು ತನಗಾಪುಣ್ಯವೆಲ್ಲಿಯದು ||೭||

ಎನುತೆ ಕನವರಿಸುತ್ತೆ ತೊರೆದನು |
ಜನಪನಸುವನೆನಲ್ಕೆ ಮೊದಲೇ |
ಜನಕನಳಿವಿಂ ನೊಂದಮನಕದು ಸಿಡಿಲಿನಂತೆರಗೆ ||
ಜನನಿ ನುಡಿನುಡಿ ಯಣ್ಣದೇವನು |
ವನಕೆ ನಡೆದನೆ ಪುರದೊಳಿಲ್ಲವೆ |
ಮನುಕುಲೇಶನು ಪೋದಕಾರಣವೇನು ಬೆಸಸೆನಗೆ ||೮||

ಇಂತು ನುಡಿವಾಸುತನ ಮುದ್ದಿಸು |
ತಂತರಂಗದೆ ಹಿಗ್ಗುತಿವನಿಗೆ |
ಸಂತಸವ ಬೀರುವೆನು ತಾನೆಂದೆಣಿಸಿಯಾಸುದತಿ ||
ಚಿಂತೆಯೇತಕೆ ಮಗನೆ ನಿನಗೆ ಸ |
ಮಂತು ಘನಸಂಪದವನೊದವಿಸಿ |
ದಂತಕಳಚಿದನಂತನೆನಿಸಿದೆನಿಂದು ರಾಮನನು ||೯||

ಧರಣಿಪತಿ ಪಿಂತೊಮ್ಮೆ ವರಗಳ |
ನೆರಡನಿತ್ತನು ತನಗೆ ತಾನಿಂ |
ದಿರದೆಯತ್ನಿಸಿ ಪಡೆದೆನೊಂದಕೆ ನಿನಗೆ ರಾಜ್ಯವನು ||
ಎರಡನೆಯ ವರಕಿಂದು ರಾಮನು |
ಧರಿಸಿ ಮುನಿವೇಷವನು ವಿಪಿನದೆ |
ಚರಿಸಬೇಹುದೆನುತ್ತನುಜ್ಞೆಯ ಪಡೆದು ಕಳಿಪಿದೆನು ||೧೦||

ಒಡೆಯನಿಲ್ಲದ ವಸ್ತುಗಳವೋ |
ಲೊಡನೆ ಸೀತಾಲಕ್ಷ್ಮಣರು ದೆಸೆ |
ಗಿಡುತುಮವನನೆ ನೆಮ್ಮಿ ಪೋದರು ಬಾರರಿನ್ನವರು ||
ಗಡುಬವೋ ಪದಿನಾಲ್ಕುವರುಷವು |
ಕಡೆಯಕಾಣಿಸಿಯದನು ಮರಳೀ |
ಪೊಡವಿಯಾಳ್ವಾಬಯಕೆ ರಾಮಂಗಿನ್ನದೆಲ್ಲಿಯದು ||೧೧||

ಮಗನೆ ಚಕ್ರಾಧೀಶನಾಗುತೆ |
ವಿಗಡಬಲನೆನಿಸುತ್ತೆ ಪೆತ್ತೆನ |
ಗೊಗುಮಿಗೆಯಸಂತಸವನೀಯಲದೇಕೆ ತಡಗೈವೆ ||
ಬಗೆಬಗೆಯ ಭಂಡಾರವನು ನೀಂ |
ತೆಗೆಸಿ ಬಡವರ್ಗಿತ್ತು ತಣಿಸೈ |
ಸುಗುಣಿ ನೀನೇಳೆಂದು ಬೋಳೈಸಿದಳು ಪಲತೆರದೆ ||೧೨||

ಜನನಿ ತನಗತಿಹಿತವನೆಸಗುವೆ |
ನೆಸುತೆ ಮಾಡಿದ ಪಾಪಕೃತ್ಯವ |
ನೆನೆದು ಹಮ್ಮೈಸುತ್ತೆ ಬಿದ್ದನು ಬಿಗಿದಮೂರ್ಛೆಯಲಿ ||
ತನಯನನು ಶೈತ್ಯೋಪಚಾರದೆ |
ವನಿತೆ ಸಂತೈಸಲ್ಕೆ ಕಂಡದ |
ನಿನಕುಲಾಧಿಪಸೂನು ರೋಷಾವೇಶಮನನಾದ ||೧೩||

ಏನ ನೆನೆದೌ ಪಾಪೆ ರಘುಕುಲ |
ಹಾನಿ ನಿನ್ನಿಂದಾಯ್ತೆ ಶಿವಶಿವ |
ಮಾನವಾಧಿಪನಳಿದನುಳಿದನು ರಾಜ್ಯವನು ರಾಮ ||
ಮಾನಮೆಂಬುದನೊತ್ತಿ ದೂರಕೆ |
ಹೀನಕಾರ್ಯವ ಬಳಸಿ ನೀನಪ |
ಮಾನವೆಣಿಸದೆ ಯೇತಕೀ ಕಡುಕಷ್ಟಕಿಚ್ಛಿಸಿದೇ ||೧೪||

ಅಣ್ಣ ದೇವನೆ ನಿನ್ನನುಳಿದೊಡೆ |
ಚಿಣ್ಣಗೀಭರತಂಗೆ ಜೀವನ |
ವಿನ್ನು ಬೇರೆಲ್ಲಿಹುದು ಬರ್ಪನು ನಿನ್ನಬೆಂಬಿಡಿದು ||
ಕುನ್ನಿ ಯೀಕೆಯ ಮಾತಿಗತಿಸಂ |
ಪನ್ನ ನೀನಿದನುಳಿದು ನೆಲನನು |
ಬಣ್ಣಗಿಡುವುದೆ ಬನದೆ ಬಾಬಾರಿದುವೆ ತರವಲ್ಲ ||೧೫||

ದಿನಪತೇಜನೆ ಯೆನ್ನೊಳುಡುಗಲಿ |
ಘನವಲಾ ನಿನಗೊಲವು ಸತಿಯೊಳು |
ವನಜಮುಖಿಯಾ ಜಾನಕಿಯ ನೋವಿಂಗೆ ಮದುಗೆಯಲಾ ||
ಅನುಜಲಕ್ಷ್ಮಣ ದಣಿವನೆಂಬುದ |
ಮನಕೆ ತಾರದೆ ಚಲವಗೈವುದೆ
ಮನುಕುಲಾಂಬುಧಿಚಂದ್ರ ಬಾರೆನ್ನೊಡೆಯ ಬಾರೆಂದು ||೧೬||

ಪಲವುಬಗೆಯಿಂದಾಗಳಣ್ಣನ |
ಪಲಗುಣಂಗಳ ನೆನೆನೆನೆದು ಹಂ |
ಬಲಿಸುತಿರಲಿದನರಿದು ಬಂದಳು ದೇವಿ ಕೌಸಲ್ಯೆ ||
ಅಳಲಿದೇತಕೆ ಮಗನೆ ತನ್ನಯ |
ಚಲವ ದಕ್ಕಿಸಿಕೊಂಡಳಮ್ಮನು |
ನೆಲನಿದೆಲ್ಲವು ನಿಮ್ಮದೈಸಲೆ ಮರುಗಲೇಕಿನ್ನು ||೧೭||

ಬರಿಯಬಯಲಾಡಂಬರವನಿದ |
ಸೊರಸಿಕಳೆ ನಿನಗಿನ್ನು ಸಲ್ಲದು |
ಹಿರಿಯಮಗ ನೀನಲ್ತೆ ರಾಜ್ಯಕ್ಕೊಡೆಯರಿನ್ನಿಹರೆ ||
ಕಿರಿಯನಲ್ಲವೆ ರಾಮಭದ್ರನು |
ಹೊರಲುಬಲ್ಲನೆ ನೃಪಕಿರೀಟವ |
ನೊರೆಯೆನಸ್ನೃತವ ಕೇಕಯಾತ್ಮಜೆಯಿದಕೆ ಸಾಕ್ಷಿಣಿಯು ||೧೮||

ಆದುದಾಯಿತು ಮಗನೆ ಭರತನೆ |
ಹೋದಮಾರಿಯ ಮನೆಯ ಪುಗಿಪರೆ |
ಈದುರಾತ್ಮೆಯನೆನ್ನನಟ್ಟೈ ಮಗನ ಬಳಿಗಾಗಿ ||
ಕಾದುದೆನ್ನೀಯೊಡಲು ಸೈರಿಸೆ |
ನೈದಯಾನಿಧಿನೀನು ಕಂದನು |
ಹೋದಮಾರ್ಗವ ತೋರಿಸೆಂದಳಲಿದಳು ಶಶಿವದನೆ ||೧೯||

ಮೊದಲೆ ಜನಕನ ಮರಣಮದಕಿ |
ನ್ನೊದವಿತಣ್ಣನ ವಿಪಿನಗಮನವು |
ಸುದತಿಯಾನಿಷ್ಠುರದನುಡಿ ಮೇಣದಕೆ ಸಹಕಾರಿ ||
ವಿದಿತವಲ್ಲವೆ ಮೂರ್ಛೆ ಭರತಂ |
ಗದುವೆ ಚೋದ್ಯವೆ ಸುಜನರತಿವ್ಯದು |
ಹೃದಯರಲ್ಲವೆ ಸೈರಿಸುವರೆಂತಕಟ ಪರರೆಡರ ||೨೦||

ತಿಳಿಯೆ ಮೂರ್ಛೆಯು ಹಿರಿಯಮಾತೆಯ |
ಒಳಸಿ ವಂದಿಸಿ ತಾಯೆ ಸೈರಿಸು |
ಕುಲವಿನಾಶಕಕಾರ್ಯವಿದನಾನಕಟ ಗೈದಪೆನೆ ||
ಕುಲಶಿರೋಮಣಿರಾಮಚಂದ್ರಂ |
ಗುಲಿಯಬಾರದಕೇಡನೆಸಗುವ |
ರಿಳಿವರಲ್ಲದೆ ರೌರವಕೆ ಬೇರೊಂದುಗತಿಯಹುದೆ ||೨೧||

ಜನನಿ ನಾನೀಪಾಪಕಾರ್ಯವ |
ಕನಸಿನಲ್ಲಿಯುಮೆಣಿಸನಾದೊಡೆ |
ಜನಪದಶರಥನುದರದೊಳಗೆಂತಕಟ ಜನಿಸಿದೆನು ||
ಜನಕ ಬೇರಾರಾಮ ಬೇರೆಂ |
ದೆನಿಸಮುನಮೆನಗಿರ್ದೊಡೀಗಳೆ |
ಅನಲನೆನ್ನಸು ದಹಿಸಲ್ ನಿನ್ನಿದಿರೊಳತಿಜವದೆ ||೨೨||

ರಾಮನಿಲ್ಲದರಾಜ್ಯಮಿದು ಕು |
ಗ್ರಾಮದಂದದೆ ತೋರ್ಪುದದರಿಂ |
ಕ್ಷೇಮವೀಯೌ ಜನನಿ ನಾಸೀಗೈದಿ ಕಾನನಕೆ ||
ಆಮಹಾತ್ಮನ ಪಾದದರ್ಶನ |
ದಾ ಮಹಾಸುಖಮೊಂದಿ ಗುಣನಿ |
ಸ್ಸೀಮನಹ ರಘುರಾಮನನು ಕರೆತರುವೆನೀದಿನದೆ ||೨೩||

ಬಂದೊಡೊಡನೆಯೆ ಬಹೆನು ಬಾರದೊ |
ಡಂದು ನಿಲ್ಲುತ್ತವನ ಬಳಿಯೊಳೆ |
ಕಂದಮೂಲವ ಸವಿದು ವಲ್ಕಲಜಟೆಗಳನು ಧರಿಸಿ ||
ಕುಂದಿಸುವೆನೀತನುವ ಸುರನರ |
ವೃಂದಸಾಕ್ಷ್ಯದೊಳೆಂದು ಸಡಗರ |
ದಿಂದಮೈದುವಭರತನನು ತಡೆದೆಂದಳಿಂದುಮುಖಿ ||೨೪||

ಮಗನೆ ಮನ್ನಿಪುದೊಡಲ ಬೇಗೆಯಿ |
ನೊಗೆದನುಡಿಗಳ ರಾಮಲಕ್ಷ್ಮಣ |
ರಗಲಿದೀಬಲುವೃದ್ಧೆಗಾರೈ ಗತಿಯು ನೀನುಳಿಯೆ ||
ಬಗೆದು ತೈಲದ ಕೊಪ್ಪರಿಗೆಯಿಂ |
ತೆಗೆಸು ಪಿತನ ಕಳೇಬರವನದ |
ಪುಗಿಸಿ ಚಂದನಚಿತಿಯೊಳಗ್ನಿಯಿನ್ಳೈದೆ ಸಂಸ್ಕರಿಸು ||೨೫||

ಜನನಿಯೆಂದುದಕೊಪ್ಪಿ ಭರತನು |
ಮುನಿವಸಿಷ್ಠನನುಜ್ಞೆಯನು ತಾ |
ನನುಸರಿಸಿ ವೈದಿಕವಿಧಾನದೊಳೆಸಗಿ ಕರ್ಮವನು ||
ತಣಿಪಿ ವಿಪ್ರರ ನಕುಲವಹ ಭೋ
ಜನಸುದಾನಗಳಿಂದಮಣ್ಣನ |
ವ ನನಿವಾಸದ ಭೂರಿಚಿಂತೆಯೊಳಿದ್ದನಾಭರತ ||೨೬

ಅರಸನೈದಿದನಮರಲೋಕಕೆ |
ತೆರಳಿದನು ಬನದತ್ತ ರಾಮನು |
ಧರೆಯು ರಕ್ಷಕರಿಲ್ಲದಿದೆ ತಳುವಿದೊಡೆ ಸೊಗಡಹುದು ||
ಅರಸುಪಟ್ಟವನಾಂತು ಧರೆಯನು |
ಪೊರೆಯಲಸುವಾಗೆಂದು ಮಂತ್ರಿಗ |
ಳೊರೆಯಲದಕಾ ಭರತನೆಂದನು ತಂದು ಕಂಬನಿಯ ||೨೭||

ತಂದೆ ಯೆನ್ನನು ತೊರೆದು ಸಗ್ಗಕೆ |
ಸಂದ ಬಳಿಕೆನಗಾರೊ ಗತಿ ಪೂ |
ರ್ಣೇಂದುಸದೃಶನು ರಾಮನೇ ಶರಣೆಂದು ನಂಬಿರಲು ||
ಇಂದು ತನ್ನಯ ಮನದ ಬಯಕೆಗೆ |
ಬಂಧಕವನೀದುರುಳೆ ತಂದಳು |
ಮಂದಭಾಗ್ಯಂಗೆನಗದಾರಿನ್ನಿಹರು ಪಾಲಕರು ||೨೮||

ಬಾಲನಾಗಿಹ ತನಗೆ ಧರಣಿಯ |
ಪಾಲಿಸಲು ಭುಜಶಕ್ತಿ ಸಾಲದು |
ಮೇಲೆ ತನಗತಿಹಿತವದೀಕೆಯ ದುರ್ಮನೋರಥವ ||
ಪಾಳುಗೈಸುವುದದರಿನೆಲ್ಲರು |
ನಾಳೆ ಪಯಣವ ಬಳೆಸಿ ಪೂರ್ಣದ |
ಯಾಳುವಹ ರಘುರಾಮಗಿಂತಿದನರಿವುವುದೆ ಮತವು ||೨೯||

ಕಾನನವ ಬಿಡಿಸಿಂದಯೋಧ್ಯೆಗೆ |
ಜಾಣತನದಿಂದವನ ತಿರುಗಿಸೆ |
ಸೇನೆಯೊಡನೈದುವುದು ನೀವೆಂದೆನುತೆ ನುಡಿದೊಡನೆ ||
ದಾನವಾರಿಯ ದಿವ್ಯಮೂರ್ತಿಯ |
ಕಾಣುವಾ ಸಂಭ್ರಮಕೆ ವೈಗೊ |
ಟ್ವಾನರಾಧಿಪಸೂನು ಮಾತೆಯರೊಡನೆ ಹೊರವಂಟ ||೩೦||

ಬರುತೆ ಸರಯುವ ದಾಂಟಿ ಗುಹನಾ |
ದರಣೆಯನು ಪತಿಕರಿಸಿ ಜಟೆಯನು |
ಧರಿಸಿ ಮಾರ್ಗದೆ ಪರಿವಭಾಗೀರಥಿಯನುತ್ತರಿಸಿ ||
ಮೆರೆವಭಾರದ್ವಾಜರಾಶ್ರಮು |
ಕಿರದೆ ನಡೆತಂದೆರಗಲಾ ಮುನಿ |
ವರರು ಪಠಸಿ ವಿಶೇಷಸತ್ಕಾರವನು ಮಿಗೆ ರಚಿಸಿ ||೩೧||

ರಾಮಚಂದ್ರನು ನಮ್ಮ ವನದಲಿ |
ಕೋಮಲಾಂಗಿಯು ಜಾನಕಿಯುವೆರ |
ಸಾಮಹಾಬಲಲಕ್ಷ್ಮಣನ ಕೂಡಿಲ್ಲಿಗೈತಂದು ||
ಭೂಮಿಸುರರುಬ್ಬಟೆಯು ಮಿಗಿಲೆಂ |
ದಾಮನೋಹರಮಾಗಿ ರಂಜಿಪ |
ಕಾಮಿತದಫಲಪುಷ್ಪವೀಯುವ ಚಿತ್ರಕೂಟದಲಿ ||೩೨||

ತಿರಿದು ತಳಿರನು ಲಕ್ಷ್ಮಣನು ತಾಂ |
ವಿರಚಿಸಿದ ನವಪರ್ಣಶಾಲೆಯೊ |
ಳಿರುತಿಹನು ನೀನಲ್ಲಿಗೈದಿದೊಡವನ ಕಾಣ್ಬೆಯೆನೆ ||
ಹರುಷವಾನುತೆ ಮನದೆ ಮುನಿಪಂ |
ಗೆರಗಿ ಬೀಳ್ಕೊಂಡಾತನನು ಮುಂ |
ಬರಿಯುತಣ್ಣನ ನೋಳ್ಪ ಭರದಿಂ ತೆರಳಿದನು ಭರತ ||೩೩||

ಇತ್ತಲಿವನಿಂತೈದುತಿರೆ ಬಳಿ |
ಕತ್ತ ರಾಮನು ಜನಕಪುತ್ರಿಯ |
ಚಿತ್ತದಾಸರ ಕಳೆವೆನೆನ್ನುತೆ ಚರಿಸುತಲ್ಲಲ್ಲಿ ||
ಮತ್ತಕಾಶಿನಿ ನಿಟ್ಟಿಸೀಗಿರಿ |
ಯೊತ್ತಿನಲಿ ಮಂದಾಕಿನೀನದಿ |
ಸುತ್ತಿ ಪರಿಯುವಸೊಬಗು ಮಿಾರಿಹುದಲ್ತೆ ಸರಯುವನು ||೩೪||

ಇದರ ತೀರದ ವೃಕ್ಷಗಳೊಳಿಹ |
ವಿಧವಿಧದ ಸುಮತತಿಯ ನುದಿರಿಸು |
ತದರಕಂಪಿಂದೊಗೆವ ಮರುತನು ಸೊಂಪಬೀರುತ್ತೆ ||
ಸುದತಿ ಮಿಗೆ ಸಂತಸವ ತೋರುತೆ |
ಸದಯಭಾವದೆ ಚರಿಸುತಿರ್ದಪ |
ನೊದವಲಹುದೇ ಬಯಸಲೀಬಗೆ ನಮಗೆ ನಗರಿಯಲಿ ||೩೫||

ಮೃಗಸಮೂಹಗಳುದಕಪಾನದಿ |
ನೊಗೆದ ತೃಷೆಯನು ಕಳೆಯುತಿರ್ಪುವು |
ಸುಗತಿರಾಜ್ಯವ ಸೂರೆಗೊಳುವಾಮುನಿಗಳಿದರೊಳಗೆ ||
ಬೊಗಸೆಯಲಿ ನೀರ್ಮೊಗೆದು ಮೇಲಿಹ |
ಗಗನಮಣಿಗರ್ಘ್ಯಗಳನೀಯುತೆ |
ಸೊಗಸಿನಿಂ ಸಲೆ ಮಿಾಯುವಂದವ ನೋಡು ನೀನರಸಿ ||೩೬||

ಇನಿಯಳೊಡನೀಪರಿಯೊಳಾಡು |
ತ್ತಿನಕುಲಾಂಬರದಿನಮಣಿಯು ತ |
ನ್ನನುಜನೊಡನೊಲವಿಂದವಾಶ್ರಮದಲ್ಲಿ ಕುಳಿತಿರಲು ||
ವನದ ಮಧ್ಯದೊಳಿರದೆ ಕೆಂದೂ |
ಳಿನನ ಮರೆಗೈದೇಳೆ ಕಂಡದ |
ರನುವದೇನದ ತಿಳಿದು ಬಂದೆನಗರುಹು ನೀನೆಂದು ||೩೭||

ಅಗ್ರಜನು ನುಡಿಯಲ್ಕೆ ಕೇಳ್ದು ಸ |
ಮಗ್ರಬಲಸೌಮಿತ್ರಿ ಭೂರುಹ |
ದಗ್ರಭಾಗವನೇರಿ ಬರುತಿಹಸೇನೆಯನು ನೋಡಿ ||
ವ್ಯಗ್ರಮಾನಸನಾಗಿ ನಮ್ಮನು |
ನಿಗ್ರಹಿಸಲೆಂದೆನುತೆ ಭರತನು |
ವಿಗ್ರಹಕ್ಕೆಳಸುತ್ತೆ ಬರುತಿಹಪರಿಯಿದೆಂದರಿದು ||೩೮||

ದೇವಿಯನು ಜೋಪನವಗೈದೆಲೆ |
ದೇವ ಬಿಲುದುಡುಕೇಳು ಭರತನ |
ಭಾವ ಬೆಟ್ಟಿತು ಸೇನೆಯೊಡವೆರಸಿದೆಕೊ ಬರುತಿಹನು ||
ನಾವು ಮೈಮರೆತಿದ್ದೆವಾದೊಡೆ |
ನೋವನೆಸಗದೆ ಬಿಡನು ತನಗಿ |
ನ್ನೀವುದಾಜ್ಞೆಯನವನನಟ್ಟುವೆ ಜವನ ಬಳಿಗೆನಲು ||೩೯||

ತಮ್ಮ ದುಡುಕದಿರಿತ್ತ ಬಾರೈ |
ನಮ್ಮ ಮಾತನು ಕೇಳು ಭರತನ |
ದೊಮ್ಮೆಯಾದೊಡಮೆಮ್ಮ ನೆಂದುಂ ಮೀರಿ ನಡೆದಿಹನೇ ||
ದುರ್ಮತಿಯೆ ದುರ್ನೀತಿಯೇಯೆಂ |
ದಮ್ಮನನು ಧಿಕ್ಕರಿಸಿ ನಮ್ಮನೆ |
ನೆಮ್ಮಿ ಬಂದಿಹನಲ್ಲದನ್ಯವ ಬಳಸುವನೆ ಮನದೆ ||೪೦||

ತಪ್ಪನೆಣಿಸುವತಮ್ಮನಲ್ಲವ |
ನೊಪ್ಪುವನೆ ದುಷ್ಕಾರ್ಯಲವವನು |
ಬೊಪ್ಪನಲ್ಲಿರಿಸಿರ್ಪ ಭಕ್ತಿಯನೆನ್ನೊಳಿರಿಸಿಹನು ||
ನಿಪ್ಪಸರದಲಿ ನಡೆದಕೀರ್ತಿಯ |
ನಪ್ಪಲಾಗದು ಲಕ್ಷ್ಮಣನೆ ನಿನ |
ಗಿಪ್ಪ ಪೌರುಷಕಕಟ ಸೋದರವಧೆಯೆ ತಾಂ ಫಲವೆ ||೪೧||

ತಂದೆಯಾಡಿದನುಡಿಯ ಪಾಲಿಸ |
ಲೆಂದು ಬಂದಿಹ ತನಗೆ ಭರತನ |
ಕೊಂದು ಗಳಿಸುವ ರಾಜ್ಯಮೇಕೇಗೈವೆನಾನದನು ||
ಕಂದಭರತನು ನೀನುಮಿಲ್ಲದೊ |
ಡಂದು ಸುರಪನ ಪದವದೇಕೆನ |
ಗಿಂದು ನೀವೇ ಸಕಲಸಂಪದವೆಂದನಾರಘುಜ ||೪೨||

ಕೇಳುತಿರ್ದನು ಲಕ್ಷ್ಮಣನು ಕ |
ಣ್ಣಾಲಿನೀರೇರಿದುವು ಶಿರವನು |
ಜೋಲುಗೊಟ್ಟು ಹಸಾದವೆಂದನು ಮುಗಿದು ಕರಯುಗವ ||
ಮೇಲುವಾದ್ಯದ ರವಣೆ ನಿಂದ |
ತ್ತಾಳಿನಬ್ಬರ ಕೊನೆಗೆ ಸಂದುದು |
ಪಾಳೆಯವು ಹೊರಬನಕೆ ಬಂದುದು ಕುಂದಿತಾರ್ಭಟವು ||೪೩||

ಸೇನೆಯಾಶ್ರಮದತ್ತ ಪೋದೊಡೆ |
ಮಾನವೇಶನು ತನ್ನಮನದೊಳ |
ಗೇನನೆಣಿಪನೊ ಎಂದು ದೂರದೊಳದನು ನಿಲ್ಲಿಸಿಯೆ |
ಜ್ಞಾನಿಗಳ ಸಮಜೋಳಿ ಭರತನ |
ನೂನಬಲಶತ್ರುಘ್ನನೊಡನೆ ನಿ |
ದಾನದಿಂ ಪದಚಾರಿಯಾಗೈದಿದನು ದರುಶನಕೆ ||೪೪||

ಇಂದು ತನ್ನನು ಮನ್ನಿಪನೊ ಮುದ |
ದಿಂದಮಿಲ್ಲದೆ ದುರ್ಜನನು ನೀ |
ನೆಂದು ದೂಷಿಸಿ ನೂಂಕಿ ಕಳೆವನೊ ಕಾಣೆನಾ ಹದನ ||
ಮಂದಮತಿ ನಿಜಜನನಿ ಬೇಗೆಯ |
ನಿಂದು ತಂದಿಕ್ಕಿದಳು ನಮ್ಮೊಳು |
ಹಿಂದುಮುಂದದು ತೋರದೇನುಮೆನುತ್ತೆ ನಡೆತರುತೆ ||೪೫||

ಅಂದು ಕಂಡನು ವಿವಿಧಪರ್ಣಗ |
ಳಿಂದೆ ರಚಿಸಿದಶಾಲೆಯೊಳು ನಲ |
ವಿಂದೆ ದರ್ಭಾಸನದೆ ಸೀತಾಲಕ್ಷ್ಮಣರವೆರಸಿ ||
ಅಂದಮಾದಾ ದೇಹಕಾಂತಿಯಿ |
ನಿಂದುವನು ಸಲೆ ಜರಿವ ವೈಖರಿ |
ಯಿಂದೆ ಮಂಡಿಸಿ ಮೆರೆವ ದೇವನ ಪರಮಪಾವನನ ||೪೬||

ಕಂಡಸವನಾಥೂರ್ಜಟಿಯವೋಲ್ |
ಮಂಡೆಯೊಳು ಜಡೆಗಳನು ಧರಿಸುತ |
ಖಂಡಕೃಷ್ಣಮೃಗಾಜಿನವನುರೆ ಪೊದೆದು ರಾಜಿಪನ ||
ಕಂಡಜನದಘಮಂಡಲವನುರೆ |
ದಿಂಡುದರಿವಾನಿರ್ಮಲಾಂಗನ |
ಚಂಡಭುಜಬಲರಾದಿದೇವನ ಕಂಡನಾಭರತ ||೪೭||

ನೋಡಿದೊಡನೆಯೆ ಶೋಕಜಲಧಿಯೊ |
ಳಾಡಿ ರೋದನಮಾಡಿ ಮಾತುಗ |
ಳಾಡಲರಿಯದೆ ಬಿಕ್ಕಿ ಚೇತನಗುಂದಿ ದನಿಯುಡುಗಿ ||
ಕೂಡಿ ಮಂತ್ರಿಗಳಿಂದಯೋಧ್ಯೆಯ ||
ನಾಡಿನಾಜನವೆಲ್ಲ ನಲಿಯಲು |
ಗಾಡಿಯಿಂ ವರಸಿಂಹಪೀಠದೊಳೆಸೆವಗೀವಿಧಿಯೆ ||೪೮||

ಸುರುಚಿರಾಂಬರಮುಡುತೆ ಮೌಳಿಯ |
ಪರಿಮಳದ ಪೂಸರದೊಳೊಪ್ಪುವ |
ದೊರೆಗೆ ಚರ್ಮಾಂಬರವು ಜತಿಗಳ ಜಡೆಯು ತಾಂ ಸೊಗಸೆ ||
ಅರಸನುರುದುರ್ದಶೆಯನೀಕ್ಷಿಪ |
ಭರತನೇಂ ಸಪ್ರಾಣನೇ ಬಿದಿ |
ಬರೆಹಮೀತೆರನಾಯ್ತೆ ಶಿವಶಿವಯೆನುತೆ ಹಲುಬಿದನು ||೪೯||

ಕೆಟ್ಟಪಾಪಿಯು ಮಿಹಿರವಂಶದೆ |
ಪುಟ್ಟಿ ನಿಜಪೂರ್ವಜಗೆ ಸಲ್ಲುವ |
ಸಟ್ಟಕಾಶಿಸಿಯಡವಿಗಟ್ಟಿದನೆಂಬುದೀಲೋಕ ||
ಮುಟ್ಟುಮೀರಿದ ಪಳಿವಿಗಂಗವ |
ಕೊಟ್ಟು ಜೀವಿಸಬೇಕೆ ತೆಗೆತೆಗೆ |
ಸುಟ್ಟು ಪೋಗದೆ ನಿಂದುದೇಕೀತನುವು ಭರತಂಗೆ ||೫೦||

ಎಂದು ರಾಮನ ಸನ್ನಿಧಿಗೆ ನಡೆ |
ತಂದು ಕರಗಳ ಮುಗಿದು ವಿನಯವ |
ನೊಂದಿಯಣ್ಣಾಯೆಂದು ನುಡಿಯುತ್ತೊಡನೆ ಹರವಸದೆ ||
ವಂದಿಪನ ತೆರದಿಂದೆ ಬಿಳ್ದಾ |
ಸುಂದರನ ಕರುಣಾಳು ತಬ್ಬುತೆ |
ಕಂದ ನಿನಗೇಕಿಂತು ಚಿಂತೆಯು ಬೇಡಬೇಡೆನುತೆ ||೫೧||

ತಂದುಕಂಬನಿಗಳನು ಬೇಗುದಿ |
ಯಿಂದಮೆಂದನು ಸೋದರನೆ ನಿಸ |
ಗಂದಮುಪ್ಪದೆ ಜಡೆಯು ಮೇಣೀವಲ್ಕಲವು ಸೊಗಸೆ ||
ಇಂದಯೋಧ್ಯೆಯನುಳಿದು ನೀನೈ |
ತಂದಕಾರಣವೇನು ಪೇಳೆಂ |
ದಂದುಕೈಗಳಿನೆತ್ತುತೊಲವಿಂ ಮಂಡೆಯನು ಸವರಿ ||೫೨||

ತಮ್ಮ ನೀನೇಕಿಂತುವರ್ತಿಪೆ |
ಯುಮ್ಮಹದೊಳೇನಿಹರೆ ಪೌರರು |
ನಮ್ಮವರು ಸುಕ್ಷೇಮಿಗಳೆ ಭೂಪತಿಯ ತೆರನೇನು ||
ಎಮ್ಮ ಹಂಬಲನುಳಿದು ಜನನಿಯ |
ರೊಮ್ಮನದೊಳೇನಿಹರೆ ಬರವಿದು |
ಸುವ್ಮನಲ್ಲವು ಮಾಜದುಸಿರೈ ತಮ್ಮ ನೀನೆಂದ ||೫೩||

ನಾಲ್ಕನೆಯ ಸಂಧಿ ಸಂಪೂರ್ಣಂ.

---

## ಐದನೆಯ ಸಂಧಿ

ಸೂಚನೆ || ಭರತಮುಖದಿಂ ದಶರಥಾವನಿ |
ವರನ ಮರಣವ ಕೇಳಿ ರಾಮನು |
ಮರುಗಿ ಹೊರಟನು ಚಿತ್ರಕೂಟದಿನೆಸಗಿ ಪೈತೃಕವ ||

ಏನನೆಂಬೆನು ದೇವ ನಿಮ್ಮನು |
ಕಾನನದ ಕಡೆಗಂದು ಬೀಳ್ಕೊ |
ಟ್ಟಾನರಾಧಿಪನಳಲಿ ಕಂಗೆಟ್ಟಸುವ ನೀಗಿದನು ||
ಜ್ಞಾನವಿರಹಿತೆಯಾದ ತನ್ನಯ |
ಮಾನಿನಿಗೆ ಮನಸೋತು ನಮ್ಮನು |
ಹೀನಭಾಗ್ಯರನೆಸಗಿ ತಾತನು ಸಗ್ಗಕಡರಿದನು ||೧||

ಪಾಪಕೃತ್ಯಕೆ ಹೇಸದೆಯೆ ತಾ |
ನೋಪನನು ಕೈಯಾರೆ ತೀರಿಸಿ |
ದೀಪಮಿಲ್ಲದವಾಳುಮನೆಯೆನಿಸುತ್ತಯೋಧ್ಯೆಯನು ||
ಚಾಪಲತೆಗೀಡಾಗಿ ನರಕದ |
ಕೂಪದೊಳಗೋಲಾಡಲೆಳಸಿದ |
ಪಾಪಿನಿಯಬಸಿರೊಳಗೆ ಪುಟ್ಟಲುಬಹುದೆ ನಾನಕಟ ||೨||

ಅಣ್ಣ ಮರಳ್ಳೆ ಪುರಕೆ ಗುಣಸಂ |
ಪನ್ನ ನಿನಗಿದು ಸರಿಯೆ ಭೃತ್ಯನ |
ನಿನ್ನ ಪಾಲಿಪರಾರು ತನಗೀಗೊಡೆಯರಾರಿಹರು ||
ಮನ್ನಿಪುದು ದುರ್ಮಾರ್ಗದರ್ಶಿನಿ |
ಕುನ್ನಿ ಜನನಿಯು ಗೈದತಪ್ಪನು |
ಸನ್ನುತಾಂಗನೆ ತನ್ನನೀಕ್ಷಿಸಿ ಮರೆವುದಿಂದದನು ||೩||

ಒಡೆಯನಿಲ್ಲದೆ ರಾಜ್ಯ ಸಲೆ ಕಂ |
ಗಿಡುತಿಹುದು ಸನ್ಮಂತ್ರಿವರ್ಯರು |
ದಡವ ಕಾಣದ ನಾವೆಯಂದದೊಳಿಹರು ಮಬ್ಬಡಸಿ ||
ಪಡೆಯು ನಾಯಕರಿಲ್ಲದೆಯೆ ಎದೆ |
ಗಿಡುತಿಹುದು ನೀನಿಲ್ಲದುದರಿಂ |
ಬಡವನಂದದೆ ಮೆರೆಯದಾ ಸಾಕೇತಪುರವರವು ||೪||

ಬಂದಿಹರು ಗುರುಸಚಿವಮುಖ್ಯರು |
ಬಂದಿಹರು ಮಾತೆಯರು ಸೇನಾ |
ವೃಂದವೀಕ್ಷಿಸುತಿಹುದು ಪದದರ್ಶನದ ಸಮಯವನು ||
ಇಂದು ಸಕಲವು ಸಿದ್ಧವಾಗಿಹು |
ದಿಂದಿರನು ನಾಕಾಧಿಪತ್ಯವ |
ನೊಂದುವಂತದೆ ವಹಿಸು ರಾಜ್ಯವನೆಂದನಾ ಭರತ ||೫||

ಭರತನಾಡಿದನುಡಿಯನಾಲಿಸಿ |
ಯೊರಗಿದನು ಮೂರ್ಛೆಯಲಿ ರಾಘವ |
ನರೆಗಳಿಗೆಯಲಿ ತಿಳಿವುಸಮನಿಸೆ ನೆನೆದು ಜನಕನನು ||
ಸುರರಿಗುಪಕೃತಿಗೈದುದನು ತಾಂ |
ಸ್ಮರಿಸಿ ಶಕ್ರನು ತನ್ನ ಗದ್ದುಗೆ |
ಗರುಹ ನೀನೆಂದಹಹ ನಿನ್ನನು ಕರೆಸಿದನೆ ಪಿತನೆ ||೬||

ವೃದ್ಧದಶೆಯಲಿ ನಾನಸಾಧ್ಯ |
ಶ್ರದ್ಧೆಯಿಂ ನಿಯಮಗಳನೆಸಗುತೆ |
ಮುದ್ದಿಸುತೆ ಬಳೆಯಿಸಿದಮಕ್ಕಳೊಳೊರ್ವದುರ್ಮತಿಯು ||
ಹೊದ್ದುತೆನ್ನನು ಸೇರಿರದೆ ತಾ |
ನೆದ್ದನೆಲ್ಲಿಯೊ ಸತಿಯ ಕೂಡಿ |
ನ್ನಿದ್ದುಫಲವೇನೆಂದು ಸರಿದೈ ಖ್ಯಾತ ಮತ್ಸಾತ ||೭||

ತಂದೆ ತನ್ನಯ ರಾಜ್ಯಭಾರವ |
ನಿಂದು ರಕ್ಷಿಪ ಶಕ್ತಿ ನಿನಗುಂ |
ಟೆಂದೆ ಭಾವಿಸಿ ಕಾರ್ಯಕಾರಣಗಳನು ಮನದೊಳಗೆ ||
ಅಂದು ಕಟ್ಟಳೆಗೈದು ವಿಪಿನವ |
ನೊಂದು ನೀನೆಂದೆನ್ನ ಕಳುಹಿಸಿ |
ಸಂದು ಪೋದನು ತಮ್ಮ ಮೀರುವುದೆಂತು ನಾವದನು ||೮||

ಅನುಜನೀನದರಿಂದೆ ಚಿಂತೆಗೆ |
ಮನವ ಮಾರದಿರೆಂದು ಬೋಧಿಸಿ |
ಜನನಿಯರ ಗುರುಮುಖ್ಯರೆಲ್ಲರ ಕರೆಯಿಸಾದರಿಸಿ ||
ಘನಮಹಿಮನಾದಿವಸವನು ಕಳೆ |
ದಿನನುದಯಕಿರದೆದ್ದು ಮರುದಿನ |
ಮುನಿವರರನೊಡಗೊಂಡು ಸೀತಾಲಕ್ಷ್ಮಣರ ಕೂಡಿ ||೯||

ಸೇರಿ ಮಂದಾಕಿನಿಯ ನಿರ್ಮಲ |
ವಾರಿಯಲಿ ಮುಳುಗುತ್ತೆ ಜನಕನೆ |
ಭೂರಿತೋಷವ ಪಡೆವುದೆಂದುದಕಾಂಜಲಿಯನಿತ್ತು ||
ಸಾರಿ ದಡವನು ಬಳಿಕ ವನದೊಳ |
ಗಾರಯಿದು ತಂದೆಲಚಿಹಣ್ಣನು |
ಸೇರಿಸುತ್ತಿಂಗುದಿಯ ಪಿಣ್ಯಾಕವನು ಜತೆಗದರಾ ||೧೦||

ಪಿಂಡಗಳ ರಚಿಸಿರಿಸಿ ಕರಗಳ |
ಮುಂಡೆಗೇರಿಸಿ ಬೊಪ್ಪನೀನಿದ |
ನುಂಡು ಸುಖಿಸೈ ಸ್ವರ್ಗಲೋಕದೊಳೆನ್ನುತರ್ಪಿಸಲು ||
ಚಂಡಕರಕುಲಮಣಿಯ ವಿಲಸದ |
ಖಂಡಭಕ್ತಿಗೆ ಮೆಚ್ಚಿ ಮುನಿಜನ |
ಪುಂಡರೀಕನು ವರವಸಿಷ್ಠನು ಮನದೊಳುಬ್ಬಿದನು ||೧೧||

ಜಲಧಿಮಧ್ಯದ ಸಕಲಧರಣೀ |
ತಳವನಾಳಿದವೂವ ನಿನಗಿಂ |
ದೆಲಚಿಯಾಫಲ ದಿವ್ಯಭೋಜ್ಯಪದಾರ್ಥವೆನಿಸಿದುದೆ ||
ಹಳುವದಲಿ ತನಗಿಹಪದಾರ್ಥವ |
ಸಲಿಸಿಹನು ಮತ್ಪತಿಯು ನೀನಿದ |
ನೊಲಿದು ಕೊಳ್ಳುದು ದೋಷವೆಣಿಸದೆ ತವಕುಮಾರನಲಿ ||೧೨||

ಎನುತೆ ಜಾನಕಿ ಪಿಂಡಕಭಿವಂ |
ದನೆಯ ಗೈಯಲು ಲಕ್ಷ್ಮಣನುಮೆಲೆ |
ಜನಕ ನೀನಿಂದೆಮ್ಮ ಹವಣನು ಕಂಡು ಕೇಳಿರುವೆ ||
ವನದೊಳೇನನು ತಿಂಬೆವದ ನಿನ |
ಗಿನಿತುವಿಾಗಳ್ ವಂಚಿಸದೆ ನಾಂ |
ವಿನಯದಿಂದಿತ್ತಿಹೆವು ಕೈಕೊಳ್ಳೆನುತೆ ನಮಿಸಿದನು ||೧೩||

ಇಂತುಪೈತೃಕಕರ್ಮವೆಸಗಿ ನಿ |
ರಂತರದ ಪರಲೋಕಸೌಖ್ಯಾ |
ದ್ಯಂತವನು ಪಿತೃಗಿತ್ತು ಪರ್ಣಾಗಾರಕೈತಂದು ||
ಚಿಂತೆಯಿಂದಿಹ ಭರತನನುಪಮ |
ದಂತರಂಗವ ತಿದ್ದಿ ರಾಮನು |
ಪಿಂತಣಂದದೆ ಪುರದೊಳಿಹುದೆಂದಿತ್ತನಾಜ್ಞೆಯನು ||೧೪||

ಅಣ್ಣನಾಣತಿ ವಿಾರ್ರಲಳವ |
ಲ್ಲಣ್ಣಬಾರದಕಿಚ್ಚು ತಾನಿದ |
ಕಿನ್ನದೇನನು ಗೈದು ನಿಯಮವ ಸಾಧಿಸುವೆನೆಂದು ||
ತನ್ನ ಮನಕಾಗರಿಕೆಯಾಗಲು |
ಬಿನ್ನವಿಸಿದನು ಲೋಕಮೆಚ್ಚುವ |
ಸನ್ನುತದ ಬಯಕೆಯನು ರಾಮುಂಗೆರಗುತಾಭರತ ||೧೫||

ದೇವ ವಿಶ್ವಾಮಿತ್ರರಾಶ್ರಮ |
ವಾವುದರದೆಸೆಯಿಂ ಪವಿತ್ರವೊ |
ಭಾವಿಸಲು ಶಿಲೆಯಾವಹಲ್ಯಾದೇವಿಗಾವುದು ತಾಂ ||
ಜೀವವಿತ್ತುರೆ ಜಸವ ಪಡೆದುದೊ |
ಪಾವನವದೆನಿಸಿರ್ಪ ನಿನ್ನೊಲ |
ವೀವ ಪದಪಾದುಕೆಯ ಕರುಣಿಸಿ ಕಾವುದಿಂದೆನ್ನ ||೧೬||

ಕರುಣಿಸೈಯಿದನಣ್ಣ ನೀನೈ |
ತರುಪಪರಿಯಂತರಮಯೋಧ್ಯಾ |
ಪುರವ ಹುಗದೆಯೆ ಬಳಿಯ ನಂದಿಗ್ರಾಮದಲ್ಲಿರುತೆ ||
ಮೆರೆವ ಸಿಂಹಾಸನದೊಳಿದನಾ |
ನಿರಿಸಿ ವಂದಿಸಿ ರಾಜ್ಯಭಾರವ |
ಜರುಗಿಸುವೆ ನೀನವಧಿಯಂ ಪೂರೈಸಿ ಮರಳುವುದು ||೧೭||

ವರುಷ ಪದಿನಾಲ್ಕೆಣಿಕೆಯಾದಾ |
ಮರುದಿನವೆ ನೀನೈದದಿರಲಾ |
ಸುರಿಪೆನೀದೇಹವನು ವೈಶ್ವಾನರನೊಳೆಂದೆನಲು ||
ಭರತನುರುತರಭಕ್ತಿ ಗಾರಘು |
ವರನು ಮೆಚ್ಚುತ್ತಾಗಳಿತ್ತನು |
ಮೆರೆವ ರತ್ನಾಂಬರದ ಹೊದಿಕೆಯ ವಿನುತಪಾದುಕೆಯ ||೧೮||

ಸಹಜ ನೀಂ ನುಡಿದಂತೆ ಬರ್ಪೆನು |
ವಹಿಸು ತತ್ಪರಿಯಂತಮಿಳೆಯನು |
ಮಿಹಿರವಂಶದ ಕೀರ್ತಿ ನಿನ್ನಿಂದುಳಿದುದಿಂದಿನಲಿ ||
ವಿಹಿತಮಾದಾ ತಂದೆಯಾಜ್ಞೆಯ |
ಕುಹಕಗೈಯದೆ ಸತ್ಯವೆನಿಸಿದೆ |
ಯಹಹ ನಿನ್ನೀಪರಿಯ ಚರಿಯವು ಬದುಕಿಸಿತು ಕುಲವ ||೧೯||

ಜಾನಕಿಯ ಮೇಣೆನ್ನ ಮೇಲಿಂ |
ದಾಣೆಯಿದೆ ನೀಂ ನಿನ್ನ ತಾಯನು |
ಹೀನವಚನಗಳಿಂದೆ ಕರೆಯದೆ ಕಾಣು ಬಕುತಿಯಲಿ ||
ಸಾನುರಾಗದಿನರಸ ತನ್ನಯ |
ಮಾನಿನಿಗೆ ವರವಿತ್ತುದಲ್ಲದ |
ನೂನಭಾಷೆಯನೊಂದ ಬೇರಿತ್ತಿಹನು ನೀನರಿಯೆ ||೨೦||

ಮೀನನೇತ್ರೆಯ ನಿನ್ನ ಪುತ್ರಿಯ
ರಾಣಿಯಾಗೆನಗಿತ್ತೆಯಾದೊಡೆ |
ನಾನು ರಾಜ್ಯವನೀವೆನಿವಳೊಳು ಜನಿಸಿದಾತಂಗೆ ||
ನೀನು ನಂಬುವುದೆಂದು ಕೇಕಯ |
ಮಾನವೇಶಂಗಿತ್ತು ಭಾಷೆಯ |
ನಾನಿರೋಧದೊಳಂದು ವರಿಸಿದನಿವಳ ಮತ್ಪಿತನು ||೨೧||

ಮರೆಯಬೇಡಿದನೆಂದು ತಮ್ಮಂ |
ಗೊರೆದು ಬುದ್ಧಿಯ ಜನನಿಯರ್ಕಳಿ |
ಗೆರಗಿಯುಳಿದರನೈದೆ ಮನ್ನಿಸಿಯೆಲ್ಲರನು ಕಳುಹಿ |
ಭರತನಾ ಪರಿವಾರದಿಂ ಬನ |
ಸಿರಿಗೆ ಜಡತನವಡಸೆ ತಾಂ ಕಂ |
ಡರಸನಿಳಿದನು ಚಿತ್ರಕೂಟಾಹ್ವಯದ ಪರ್ವತವ ||೨೨||

ವಿದಿತಘನಕರ್ಣಾಟರಾಜ್ಯದ |
ಪದಕೊಡೆಯನಹ ಕೃಷ್ಣಭೂಪನ |
ಪದದ ಸೇವಕನೆನಿಪ ಚಿಕಲಿಂಗಾಖ್ಯಪಾರ್ಥಿವನು ||
ಪದೆದಯೋಧ್ಯಾಕಾಂಡವೆಂಬುದ |
ನಿದನು ನುಡಿದನು ಭಾಮಿನೀಷ |
ಟ್ಪದಿಯೊಳಿದು ರಾಜಿಸುಗೆ ಸುಜನರ್ಗೊಲವನೊಡರಿಸುತೆ ||೨೩||

ಐದನೆಯ ಸಂಧಿ ಸಮಾಪ್ತಂ.

ಅಯೋಧ್ಯಾಕಾಂಡಂ ಸಂಪೂರ್ಣಂ.



# ಅರಣ್ಯಕಾಂಡ.

ಸೂಚನೆ || ತೆರಳುವೆಡೆಯೊಳಗರಿವಿರಾಧನ |
ತರಿದು ನೇಹದೊಳಾ ಜಟಾಯುವ |
ಬೆರೆದು ರಾಮನು ಪಂಚವಟಿಯನು ಸಾರ್ದನೊಲವಿನಲಿ ||

---

ತೆರಳಿದರು ವರಚಿತ್ರಕೂಟದ |
ಗಿರಿಯಿನಾ ರಾಘವರು ಜತೆಯಲಿ |
ಧರಣಿಜಾತೆಯುಮ್ಮೈದೆ ಮೆರೆವಾ ದಂಡಕಾವನಕೆ ||
ಪರಿಪರಿಯ ತರುಗುಲ್ಮಲತೆಗಳ |
ನೆರವಿಯಿಂ ನಾನಾವಿನೋದದೆ |
ಚರಿಸುತಿಹ ಮೃಗಪಕ್ಷಿನಿಕರದಿನೆಸೆದುದಾಬನವು ||೧||

ಅಂದು ಭಗವನ್ನಾಮಕೀರ್ತನ |
ದಿಂದೆ ಕಾಲವ ಕಳೆವ ಮುನಿಜನ |
ವೃಂದ ಕಂಡುದು ಬಂದುದಿವರಾರೆನುತೆ ಮುಸುಕಿದುದು ||
ಸುಂದರಾಂಗರ ನೋಡೆ ಬಾಹುಜ |
ರಂದದಿಂ ತೋರುವರು ಕೇಳುವೆ |
ವೆಂದು ಕೈಗಳ ಮುಗಿದು ನುಡಿಸಿದರಂದು ರಾಘವನ ||೨||

ರಾಯ ನೀನಾರಡವಿಪರಿಯಂ |
ತಾಯಸವು ನಿನಗೇಕೆ ತಾನೀ
ತೋಯಜಾಕ್ಷಿಯದಾರು ನಿನಗೀ ಸುಮುಖನೇನಹನು ||
ಆಯಿತಿಲ್ಲಿಗೆ ಬರವದೇಕಿದ |
ರಾಯತವ ನಮಗರುಹಬೇಕೆನು |
ತಾಯವಿಪ್ರೇಂದ್ರರು ನುಡಿಸಲೆಂದನು ರಾಮನನುನಯದೆ ||೩||

ಕೇಳಿರೈ ಋಷಿಗಳಿರ ನೃಪಜನ |
ಮೌಳಿ ದಶರಥನೆನ್ನ ಜನಕನು |
ತಾಳಿಹೆನು ನೇಮವನು ಪದಿನಾಲ್ಕಬ್ದವಡವಿಯಲಿ ||
ಕಾಲಕಳೆಯುವೆನೆಂದು ತನಗೀ |
ಲೋಲಲೋಚನೆಯರಸಿ ತಾನತಿ |
ಶೀಲವತಿಯೆನ್ನೊಡನೆ ಬಂದಳು ಯುವತಿ ವಿಮಲಮತಿ ||೪||

ರಾಮನೆಂದಪರೆನ್ನನೀತಂ ।
ಪ್ರೇಮಸೋದರ ಲಕ್ಷ್ಮಣನು ಮೇ ।
ಣ್ಯಾಮಿನಿಯನೀಕೆಯನು ಕರೆವರು ಸೀತೆಯೆಂದೆನುತೆ ।
ಈಮಹಾವನದೊಳು ತಪೋಜಪ ।
ಹೋಮಗಳನೆಸಗುತ್ತದೆಂದುಂ ।
ಕ್ಷೇಮದಿಂದಿಹಿರೇನು ಬೆಸಸುವುದೆಂದನಾ ನೃಪತಿ ||೫||

ಕ್ಷಮಿಸುವುದು ಸರ್ವಾಪರಾಧವ ।
ನಮಿಸುವೆವು ನಿನಗಿಂದು ರಾಘವ ।
ಕುಮತಿಗಳಿಗೆಮಗೆಲ್ಲಿ ಗೋಚರನೀಭವತ್ಪದವು ||
ಅಮಿತತೋಷಿಗಳಾದೆವೀದಿನ ।
ವಮತೆದೋರುತ್ತೆಮ್ಮ ಪುಣ್ಯಾ ।
ಶ್ರಮಕೆ ಬಿಜಯಂಗೈದು ಸತ್ಕಾರವನು ಕೊಳ್ಳುವುದು ||೬||

ಎನುತೆ ಕರೆದೊಯ್ದವರನೊಲವಿಂ ।
ಘನಮನೋಹರಪರ್ಣಮಂದಿರ ।
ಕನುವಿನಿಂದಘ್ಯಾದಿಸತ್ಕಾರಗಳನಂದೆಸಗಿ ||
ವನದೆ ದೊರೆವಾ ಕಂದಮೂಲವ ।
ವಿನಯದಿಂದಾಹಾರಮಾಗಿ ।
ತ್ತನುಪಮಾನನನುಪಚರಿಸಿದರು ಭಕ್ತಿಭಾವದೊಳು ||೭||

ಕಳೆದುರಾತ್ರಿಯನದನು ತಾಪಸ ।
ನಿಳಯದಲಿ ತಾವೆಳ್ದು ಮರುದಿನ ।
ಜಲಜಸಖನುದಯದಲಿ ಸಂಧ್ಯಾಕರ್ಮಗಳನೆಸಗಿ ||
ತಳುವದವರನುಮತಿಯ ಕೈಕೊಂ ।
ಡುಳಿಯದೈದುತ್ತಿರಲು ಮುಂಗಡೆ ।
ಯೊಳಗೆ ನಿಂತನು ಖಳವಿರಾಧನೆನಿಪ್ಪ ದಾನವನು ||೮||

ಎಳೆಯಖಿರ ನೀವಾರು ನಿಮಗೀ ।
ಲಲನೆಯೇನಹಳೆತ್ತ ಪೋಪಿರಿ ।
ಕಳೆದುದಲೆ ನಿಮ್ಮಾಯುವಿಂದಿಗೆ ನಿಲ್ವುದೆಂದೆನುತೆ ||
ಪಲುಮೊರೆಯುತೌಡೊತ್ತಿ ವೇಗದಿ ।
ನಿಳೆಯಣುಗಿಯೆಡೆಗೈದಿ ಪಿಡಿಯು ।
ತ್ತೆಲೆಗೆ ನಿನಗಾನೊಲಿದೆ ನಿಂದೆನ್ನಂಕವೇರೆನಲು ||೯||

ಕಂಡು ಲಕ್ಷ್ಮಣನಣ್ಣದೇವನ |
ಖಂಡವೈಭವಲಕ್ಷ್ಮಿಗಿಂತೀ |
ಭಂಡ ದೈತ್ಯಾಧಮನ ತೊಡೆ ತಾನಾಯ್ತು ಗತಿಯೆನುತೆ ||
ಕೆಂಡಮುಗುಳುತೆ ನೇತ್ರದಲಿ ಕೋ |
ದಂಡಕೇರಿಸಿ ಹೆದೆಯ ಬಾಣವ |
ಕೊಂಡು ಜೋಡಿಸುವನಿತರೊಳು ಮುಂಕೊಂಡು ಬಂದಿವರ ||೧೦||

ಪಿಡಿದು ಹೆಗಲೇರಿಸಿ ವಿರಾಧನು |
ಬಿಡುತೆ ತನ್ನನು ಮುಂದೆ ನಡೆಯುವ |
ಸಡಗರವ ಕಂಡಂಜಿ ಸೀತೆಯು ಬೆದರಿ ಕೂಗಿದಳು ||
ತಡವ ಗೈವುದೆ ರಮಣ ದುರುಳನ |
ಕಡಿದುಬಿಡು ನೀನಲ್ಲದಿರಲೆ |
ನ್ನೊಡೆಯ ತನ್ನನೆ ಕಡಿದು ಮುಂದಕೆ ತೆರಳು ನೀನೆಂದು ||೧೧||

ಲಲನೆ ಭಯದಿಂದುಲಿದ ನುಡಿ ತಾ |
ನಲಗಿನಂದದೊಳೆದೆಯನಿರಿಯ |
ಲ್ಕೆಲದೊಳಿಹ ಲಕ್ಷ್ಮಣನಿಗೆಚ್ಚರಿಸಿದನು ರಾಘವನು ||
ಸೆಳೆದು ಕಡುಗವನಿರ್ವರಂದಾ |
ಖಳನ ಭುಜಗಳನರಿದು ದುಮ್ಮಿ |
ಕ್ಕಿಳೆಗೆ ಶರಗಳನಿರದೆ ದಳೆದರು ದುರುಳನಂಗದಲಿ ||೧೨||

ಅಂದು ಭೂಮಿಯಮೇಲೆ ಬಿಳ್ದವ |
ನೆಂದನಾರ್ರೈ ನೀವು ಸರಲುಗ |
ಳಂದವಚ್ಚರಿ ಸಹಿಸಲಸದಳವಿದಲೆ ತನಗಿನ್ನು ||
ಸುಂದರಾಂಗನು ರಾಮನೆಂಬವ |
ನಿಂದು ನಿಮ್ಮೊಳಗಾವನೈಯರ |
ವಿಂದನಾಭನ ದಿವ್ಯಮೂರ್ತಿಯ ತೋರ್ಪುದೆನಗೆಂದ ||೧೩||

ಇಂತು ನುಡಿವ ವಿರಾಧನಿದಿರೊಳ |
ನಂತಮಹಿಮನು ನಿಂದು ಸಲೆ ನಿ |
ನ್ನಂತರಂಗವದೇನು ಪೇಳೆನ್ನಾನೆ ರಾಘವನು ||
ಚಿಂತೆಯುಳಿಯೆನಲೊಡನವನು ನಿ |
ಶ್ಚಿಂತನಾಗುತೆ ದಿವ್ಯತೇಜೋ |
ವಂತನಹ ಗಂಧರ್ವಪುರುಷನ ರೂಪಿನಿಂದೆಸೆದು ||೧೪||

ಕ್ಷಮಿಸುವುದು ಜಗದೀಶ ಬುದ್ಧಿ |
ಭ್ರಮಣೆಯಿಂ ನಾಂ ಗೈದ ತಪ್ಪನು |
ವಿಮಲಮತಿಯವಧರಿಸು ತನ್ನಯ ಪೂರ್ವಸಂಗತಿಯ ||
ಕಮಲಜನ ಬಳಿಗೆಂದು ರಂಭೆಯು |
ಗಮಿಸುತಿರಲೊಂದಿರುಳು ಮಾರ್ಗದೆ |
ಕುಮತಿಯಿಂ ನಾನವಳ ಕೆಣಕಲು ವಿಧಿಯು ಖತಿಗೊಂಡು ||೧೫||

ಎಲವೊ ಗಂಧರ್ವಕನೆ ತುಂಬುರು |
ಬಲುಹಿನಿಂ ನೀನಿವಳ ನಿಯಮುವ |
ನಳಿದಕಾರಣ ರಾಕ್ಷಸಾಧಮನಾಗೆನುತೆ ಶಪಿಸೆ ||
ಬಳಿಕ ನಾನತಿದೀನಭಾವದಿ |
ನೊಲಿಸೆ ನುಡಿದನು ಮುಂದೆ ಭಾಸ್ಕರ |
ಕುಲದೊಳುದಯಿಪ ಪುರುಷನಿಂ ನಿನಗಪ್ಪುದಭ್ಯುದಯ ||೧೬||

ಒಂದುಕಾಲದೆ ರಾಮಲಕ್ಷ್ಮಣ |
ರಿಂದುಮುಖಿಯಹ ಸೀತೆಯೊಡನೈ |
ತಂದು ನೀನಿಹ ದಂಡಕಾವನದಲ್ಲಿ ಚರಿಸುವರು ||
ಅಂದು ನೀನಾಲಲನೆಯನು ಬ |
ಲ್ಪಿಂದೆ ಪಿಡಿಯಲು ರಾಮನಾಗ್ರಹ |
ದಿಂದೆ ಬಾಣವನೆಚ್ಚೊಡೊಂದುವೆ ಮತ್ತೆ ನಿಜತನುವ ||೧೭||

ಇಂತು ಪೇಳ್ದ ಪಿತಾಮಹನ ನುಡಿ |
ಯಂತೆ ನಿನ್ನಿಂದಿಂದು ಬದುಕಿದೆ |
ನೆಂತು ನಿನ್ನ ಪಕೃತಿಯ ಮರೆವೆನಪಾರಗುಣನಿಲಯ ||
ಮುಂತೆ ನೀಂ ತೆರಳುತ್ತೆ ಕಾಣುವೆ |
ಶಾಂತರಹ ಶರಭಂಗಮುನಿಪರ |
ನಂತರಾತ್ಮಧ್ಯಾನಪರರವರಿಂದೆ ಲೇಸಹುದು ||೧೮||

ತೆರಳಿ ನೀವೆಂದೊರೆದು ಖಚರನು |
ಮರಳಲತ್ತಲು ದಾನವಕಳೇ |
ವರವನದನಿಳೆಯೊಳಗೆ ನಿಕ್ಷೇಪಿಸಿ ಬಳಿಕ್ಕವರು ||
ಸರಸಿಜಾಕ್ಷಿಯ ಬಳಿಯ ಸೇರ್ದು |
ತ್ತಿರಸಿಯಾಕೆಯ ಮನದ ಭೀತಿಯ |
ನಿರದೆ ಪಯಣವ ಬೆಳಸುತಾ ಶರಭಂಗನಾಶ್ರಮವ ||೧೯||

ಕಂಡು ಸಾರುವ ಸಮಯದೊಳಗಾ |
ಖಂಡಲನು ನಭದೊಳ್ವಿಮಾನದೆ |
ಮಂಡಿಸುತಾಶ್ರಮದೊಳಿಹ ಮುನಿಯೊಡನೆ ಭಾಷಿಸುತೆ ||
ಚಂಡಬಲರಿವರ್ಯೆದೆ ಕಾಣು |
ತ್ತಂಡಿಸುತೆ ಮನದಲ್ಲಿ ತಾಂ ಮರೆ |
ಗೊಂಡು ಜಾರಲು ನೋಡಿ ವಿಸ್ಮಯಗೊಳುತೆ ರಾಘವನು ||೨೦||

ಮುನಿಯ ಬಳಿಯನು ಸಾರಲಾತನು |
ಘನಮಹಿಮ ಪರಮೇಶ ಪಾವನ |
ಚಿನುಮಯನೆ ನಿನ್ನಂಘ್ರಿಕಮಲದ ಬರವ ಹಾರೈಸಿ |
ಇನಿತುದಿನ ಕಾದಿರ್ದೆನಿಂದೀ |
ಜನುಮ ಸಾರ್ಥಕವಾಯ್ತು ಬೊಮ್ಮನ |
ವಿನುತಲೋಕಕ್ಕತಿಥಿಯಾಗಿಹೆನಿಂದು ತಪದಿಂದೆ ||೨೧||

ಎನ್ನನೊಯ್ಯಲ್ಕಲ್ಲಿಗಾಸಂ |
ಪನ್ನನಿಂದ್ರನು ನಿಂದು ಗಗನದೊ |
ಳಿನ್ನು ತಡವೇಕೇರು ನೀನಿಂದೀವಿಮಾನವನು ||
ಎನ್ನು ತೊಲವಿಂ ಕರೆಯುತಿರ್ದನು |
ನಿನ್ನ ಬರವನು ಕಂಡು ತಳುವಿದೆ |
ನಿನ್ನಸುಜ್ಞೆಯನೀಯಬೇಕೆಂದೆನಲು ಮುನಿವರನು ||೨೨||

ಮುನಿಪ ನಿನ್ನ ತಪಃಪ್ರಭಾವ |
ಕ್ಕನುಗುಣದ ಫಲವೊಂದಿದ್ಯೆ ನಿಜ |
ಘನಮನೋರಥಸಿದ್ಧಿಯಾದುದು ನಿನಗೆ ಒಲುದಿನಕೆ ||
ವಿನುತ ಲೋಕಕ್ಕಿಂದು ಪಯಣವ |
ನನುಗೊಳಿಸು ನೀನೆಂದನುಜ್ಞೆಯ |
ನಿನಕುಲೋದ್ಭವನೀಯಲಾ ಯಮಿವರನು ಮುದವಡೆದು ||೨೩||

ದೇವಚಿತ್ತೈಸೇರಿನಾವೆಯ |
ನೀವು ಮಂದಾಕಿನಿಯದಾಂಟಿ ಸು |
ಪಾವನಾತ್ಮಸುತೀಕ್ಷ್ಣನಾಶ್ರಮಕ್ಕೈದಲಾಮುನಿಯು ||
ಠಾವಕರುಣಿಸಿ ನಿಮಗೆ ಬಹುಸಂ |
ಭಾವನೆಯನೆಸಗುವನು ತನಗಿ |
ನ್ನೀವುದಾಜ್ಞೆಯನೆನುತೆ ಬೆರೆದನು ಶ್ರೌತದಗ್ನಿಯಲಿ ||೨೪||

ಬಳಿಕಮಲ್ಲಿಯತಾಪಸರ್ಕಳು |
ಕೆಲರು ವೈಖಾನಸರು ಮತ್ತಂ |
ಕೆಲರು ಪೂರ್ವದ ವಾಲಖಿಲ್ಯರು ಕೆಲರೆಲೆಯುಣಿಗಳು ||
ಹಲವು ಬಗೆಯಾವ್ರತಿಗಳೆಲ್ಲರು |
ಬೆಳಗುವರೊ ದಿಕ್ತಟವನೆಂಬಂ |
ತಲಘುತೇಜೋನ್ವಿತರು ಬಂದರು ಬಳಿಗೆ ರಾಘವನ ||೨೫||

ಒಡೆಯನೆಂತಾವಜ್ರಿಯಮರ |
ಗೊಡೆಯನಹೆ ನೀನಂತು ಮನುಜ |
ಗಡವಿವೊಕ್ಕಿಹೆ ತಾತನಾಜ್ಞೆಯ ಪಾಲಿಸಲ್ಕಿಂದು ||
ಒಡಮುನಿಗಳಾದೆಮ್ಮ ಬಿನ್ನಪ |
ಕೆಡೆಯ ನೀಂ ಬಿಡದಿತ್ತು ಮನದಲಿ |
ದೃಢತರೋನ್ನತಕೀರ್ತಿವಡೆಯೈ ಮೂರುಲೋಕದಲಿ ||೨೬||

ತಂದೆ ತನ್ನಯ ಸುತರನೊಲಿದಾ |
ವಂದದಿಂ ಸಲಹುವನೊ ಆಪರಿ |
ಯಿಂದೆ ರಾಜನು ಜನವ ಸಲಹುವುದಾತ್ಮಧರ್ಮವಲಾ ||
ಇಂದು ನಿನ್ನಯ ಜನವೆನಿಪ್ಪೆವು |
ಗೊಂದಿರುವ ಕಷ್ಟವನು ಪರಿಹರಿ |
ಸೆಂದು ಬೇಡುವೆವದನು ಕರುಣಿಸಿ ಸಲಹು ಕರುಣಾಳು ||೨೭||

ಅರಸ ನಮ್ಮಯ ತಪಕೆ ರಕ್ಕಸ |
ರಿರದೆ ವಿಘ್ನವನೆಸಗಿ ನಮ್ಮನು |
ಮರುಕವಿಲ್ಲದೆ ಘಾತಿಸುತೆ ಬಲುಹಿಂಸೆಗೈದಪರು ||
ಮರೆಯಹೊಕ್ಕಿಹೆವಿಂದು ನಿನ್ನನು |
ಶರಣಜನಸಂರಕ್ಷಕನೆ ಖೂ |
ಳರನು ನಿಗ್ರಹಗೈದು ರಕ್ಷಿಪುದೆಮ್ಮನೆನಲವರು ||೨೮||

ಮರುಗಿದನು ಮನದಲ್ಲಿ ಋಷಿಗಳ |
ದರುಮಕೆಡರುಂಟಾಯ್ತು ಶಿವಶಿವ |
ದುರುಳರಕ್ಕಸರುಬ್ಬಟೆಯನಿವರೆಂತು ಸೈರಿಪರು ||
ಬರವಸವನಿತ್ತಿವರ ಭಯವನು |
ಹರಿಸಬೇಕೆಂದಾಗ ರಾಮನು |
ಭರದೆ ಹೆದೆಯನು ಧನುವಿಗೇರಿಸಿ ನುಡಿದನವರೊಡನೆ ||೨೯||

ಬೆದರದಿರಿ ಮುನಿಗಳಿರ ನಿಮ್ಮ |
ಭ್ಯುದಯಮುಂ ನಿಜಪಿತನಮೂಲ್ಯದ |
ವಿಧಿಯುಮೆನ್ನನು ವನಕೆ ತಂದುದು ಮೇಣ್ಪ್ರಯೋಜನವು ||
ಇದನು ಬಿಟ್ಟೆನಗಿಲ್ಲ ಪೆರತೊಂ |
ದದಕೆ ಬಂದವನಲ್ಲ ಭೀತಿಯ |
ನೆದೆಯೊಳಿನ್ನಿಡಸಲ್ಲ ನಂಬುವುದಿದನು ದಿಡವಾಗಿ ||೩೦||

ಇಂದು ಮೊದಲಾದುಷ್ಟರಾಕ್ಷಸ |
ವೃಂದವನು ನೆರೆಕಡಿದು ಮುನಿಜನ |
ಬಂಧುವೆನಿಪಾಪೆಸರನಾನುವೆನಿನ್ನು ತಪಗಳಿಗೆ ||
ಕುಂದುಬಾರದತೆರದೆ ನೀಂ ಸ್ವ |
ಚ್ಛಂದದಿಂದವುಗಳನು ಮಾಡುತೆ |
ಪಿಂದಣಂದದೆ ಸುಖದೊಳಿಹುದಿನ್ನೆಂದನಾ ರಾಮ ||೩೧||

ಇಂತು ಮುನಿಜನಕಭಯಮೊಡರಿಸಿ |
ಮುಂತೆ ನಡೆದು ಸುತೀಕ್ಷ್ಣಮುನಿಪನ |
ನಂತಸತ್ಕಾರಂಗಳಂ ಪಡೆದವನನುಜ್ಞೆಯಲಿ ||
ಚಿಂತೆಯಿಲ್ಲದೆ ರಾತ್ರಿಯನು ಬಲು |
ಸಂತಸದೊಳಾಶ್ರಮದೆ ಕಳೆದ |
ತ್ಯಂತವಿನಯದೆ ನಮಿಸಿ ಮುನಿಗಳ ಮಾರನೆಯದಿನದೆ ||೩೨||

ತೆರಳಲಾಜ್ಞೆಯನಾಂತು ಬಳಿಕ |
ಲ್ಲಿರದೆ ಸಿಂಗಾಡಿಯನು ಭುಜದಲಿ |
ಧರಿಸಿ ಮದಿಸಿದ ಗಜದವೊಲು ಮುಂಕೊಂಡು ನಡೆಯುತಿರೆ |
ತರಳೆ ನೋಡಿದಳಾತ್ಮವಲ್ಲಭ |
ನಿರವ ಮೆಲ್ಲನೆ ಸಾರ್ದು ಸನಿಹಕೆ |
ಸರಸಭಾವದೊಳರುಹಿದಳು ಮನದರ್ಥವನು ಸೀತೆ ||೩೩||

ಚಿತ್ತವಲ್ಲಭ ಲಾಲಿಪುದು ಸತಿ |
ಬಿತ್ತರಿಸುವೀನುಡಿಯನೊಲವಿಂ |
ದುತ್ತಮೋತ್ತಮಧರ್ಮಸಿಷ್ಠನು ನೀನು ಜಗವರಿಯೆ ||
ಮತ್ತಭಾವವದಿಲ್ಲ ಪರಸತಿ |
ಯತ್ತ ಬಯಕೆಯುಮಿಲ್ಲವಾದೊಡ |
ಮೊತ್ತಿಕೊಂಡಿಹುದೊಂದು ಪರಪೀಡನೆಯ ಕಲ್ಮಷವು ||೩೪||

ತಾತನಾಣತಿವಿಡಿದು ಮುನಿಗಳ |
ರೀತಿಯಲಿ ವನದಲ್ಲಿ ಚರಿಸುವ |
ನೀತನಂದದೆ ಶಸ್ತ್ರಧಾರಣಮೇಕೆ ನಿನಗಿಲ್ಲಿ ||
ಭೂತಹಿಂಸಾ ಕ್ಷತ್ರಧರ್ಮದ |
ನೀತಿ ಸಲುವುದು ರಾಜ್ಯದೊಳಗಿರ |
ಲೀತಪಶ್ಚರ್ಯೆಯೊಳು ಸಲುವುದೆ ಪೇಳು ಮತ್ಪತಿಯೆ ||೩೫||

ಎನ್ನ ಮನಕೀರೀತಿ ತೋರ್ಪುದು |
ಸನ್ನುತಾಂಗನೆ ನಿನ್ನ ಚಿತ್ತದೊ |
ಳಿನ್ನು ತೋರಿದಪರಿಯೊಳೆಸಗುವುದೆಂದು ಸತಿಯುಸಿರೆ ||
ತನ್ನ ಮನದೊಳು ಹಿಗ್ಗಿ ಗುಣಸಂ |
ಪನ್ನನಾ ರಾಘವನು ಸತಿಯರ |
ರನ್ನಕೆಂದನು ಲೋಕಕತಿಹಿತಮಪ್ಪವಾಕ್ಯವನು ||೩೬||

ವಲ್ಲಭೆಯೆ ನಿನಗೊರೆವೆನಿದಕೇ |
ಳೆಲ್ಲಿ ಪಾರ್ಥಿವನಾಳ್ವನಾ ನೆಲ |
ದಲ್ಲಿ ವೊರೆಯಿಡೆಜನವು ತಾನದನೊಲಿದು ರಕ್ಷಿಸಲು ||
ಬಿಲ್ಲುಕಣೆಗಳ ತಳೆದು ಲೋಕದೆ |
ಖುಲ್ಲರುಪಟಳವದನುತಗ್ಗಿಪು |
ದಲ್ಲದಿರ್ದೊಡೆ ನರಕಭಾಜನವಪ್ಪನಾ ನೃಪತಿ ||೩||

ಇಂದು ನಾ ವೀದಂಡಕಾವನ |
ಕೆಂದು ಒಂದೊಡೆ ಋಷಿಗಳೆಲ್ಲರು |
ಬಂದು ರಾಕ್ಷಸರಿಂದೆ ತಮ್ಮಯ ಯಾಗಗಳು ನೃಪನೆ ||
ಒಂದಿದುವು ದುರ್ದಶೆಯನವು ನಿ |
ನ್ನಿಂದಮುಳಿಯಲುಬೇಕು ದುಷ್ಟರ |
ಕೊಂದು ನಮ್ಮನು ರಕ್ಷಿಸೆನಲಾಂ ಕೊಟ್ಟೆನಭಯವನು ||೩೮||

ಕಂದಮೂಲಫಲಾದಿಗಳ ತಾಂ |
ತಿಂದು ಜಪನಿಯಮೋಪವಾಸಗ |
ಳಿಂದೆ ಕಾಯಕ್ಲೇಶವಾನುತೆ ಘೋರತಪಗಳನು ||
ಚಂದದಿಂದಾ ಚರಿಪಮುನಿಜನ |
ವೃಂದವನು ನೆರೆ ಬಾಧಿಸುತ್ತಿಹ |
ಹಂದೆರಕ್ಕಸಮಂದೆಯನು ಸರಲಿಂದೆ ಸವರುವೆನು ||೩೯||

ನೀರೆ ನಿನಗೆನ್ನಲ್ಲಿ ನೇಹಮು |
ಪಾರವೆಂಬುದು ನಿನ್ನ ನುಡಿಯಿಂ |
ತೋರುವುದು ಬೇರಿಲ್ಲ ನಡೆಯೆಂದಂದು ತೆರಳುತ್ತೆ ||
ಸಾರಿ ಋಷ್ಯಾಶ್ರಮಗಳನು ನಲ |
ವೇರಿ ಕಾಲವ ಕಳೆದು ಕೆಲವೆಡೆ |
ಮೂರುತಿಂಗಳು ಮತ್ತೆ ಕೆಲವೆಡೆಯಾರುತಿಂಗಳೆಸೆ ||೪೦||

ಇಂತು ನವವರ್ಷಗಳ ಕಳೆಯು |
ತ್ತಂತದಲಿ ಹತ್ತನೆಯವರ್ಷವ |
ಸಂತಮುನಿಸಂಸೇವ್ಯರೆನಿಸುವಗಸ್ತ್ಯಮುನಿವರರ |
ಪಿಂತಣದ್ಭುತಮಹಿಮೆಗಳನೆನೆ |
ದಂತರಂಗದೆ ಪೊಗಳಿ ತೇಜೋ |
ವಂತರಪ್ಪವರಾಶ್ರಮವ ಪೊಕ್ಕೆರಗಲವರಂದು ||೪೧||

ಕ್ಷೇಮವೇನ್ಯೆ ನಿನಗೆ ನಿನ್ನೀ |
ಪ್ರೇಮನಿಧಿ ಸೋದರನು ಕುಶಲಿಯೆ |
ಭಾಮಿನೀಮಣಿ ಸುಖದಿನಿಹಳೇ ಜಾನಕೀದೇವಿ ||
ರಾಮಭದ್ರನೆ ನಿನ್ನ ದರ್ಶನ |
ದಾ ಮಹಾಸುಖವೆನಗೆ ಲಭಿಸಿ |
ತ್ತೀಮಹಾಟವಿ ಪೂತಮಾದುದು ನಿನ್ನ ಬರವಿಂದೆ ||೪೨||

ಬರುವೆ ನೀಂ ನಿನಗೀಯಬೇಕೆಂ |
ದರಿಭಯಂಕರ ವಿಷ್ಣುಧನುವಿದ |
ನುರುಶರಂಗಳ ಬತ್ತದಿಹ ಬತ್ತಳಿಕೆಯೊಡನಿರದೆ |
ಮೆರೆಯುವೀಖಡ್ಗವು ಮನಿಂದಿನ |
ವರೆಗಮೋವಿದೆನಯ್ಯ ನೀಂ ಸ್ವೀ |
ಕರಿಪುದಿವಸೆಂದಿತ್ತು ಮಂತ್ರನ್ಯಾಸಪೂರ್ವಕದೆ ||೪೩||

ಧುರದೊಳಿದಿರಾದಸುರರಸುವನು |
ಹುರಿದು ಮುಕ್ಕುವುವಲ್ಲದಿಲ್ಲವು |
ಕೊರತೆಯಿವುಗಳೊಳಿವು ನಿಶಾಚರಕುಲವಿನಾಶಿಗಳು ||
ಹರಿಯು ಪೂರ್ವದೆ ರಕ್ಕಸರ ಸಂ |
ಹರಿಸಿದನು ತಾನೀಧನುವಿನಿಂ |
ಧರಿಸುತಿದ ನೀಂ ಸುಖವನೊಂದೆನುತಾಗ ಹರಸಿದನು ||೪೪||

ಮುನಿಪನಿತ್ತಾಥನುವು ಮೊದಲಾ |
ದನಿತುಮಂ ಸ್ವೀಕರಿಸಿ ರಾಮನು |
ತನಗೆ ವಾಸಕ್ಕೊಂದು ಠಾವನು ಬೆಸಸಿ ನೀವೆಸಲು ||
ಮನದೆ ತಾಂ ಕ್ಷಣಮಾತ್ರ ಜಾನಿಸಿ |
ಯನುವಹುದು ನಿನಗೀ ಸಮೀಪದ |
ಬನವು ನೀನಲ್ಲಿರ್ದೊಡಪ್ಪುದು ಸಕಲಸಂಪದವು ||೪೫||

ಅದನು ಕರೆವರು ಪಂಚವಟಿಯೆಂ |
ದದರೊಳೊಣಗವು ಪುಷ್ಪಫಲಗಳು |
ಸದಮಲವು ತತ್ಪುಣ್ಯದೇಶವು ಸೌಖ್ಯದಾಯಕವು ||
ಪದುಮನೇತ್ರನೆ ನಿನ್ನ ಹೃದಯದ |
ಹದನ ಬಲ್ಲೆನು ಠಾವು ನಿನಗದು |
ಮುದವನೀವುದು ಪರ್ಣಶಾಲೆಯ ರಚಿಸು ನೀನಲ್ಲಿ ||೪೬||

ಎಂದು ನುಡಿಯುವಗಸ್ತ್ಯಮುನಿಪಗೆ |
ವಂದನೆಯ ಗೈದವನನುಜ್ಞೆಯ |
ನೊಂದಿ ಸೀತಾಲಕ್ಷ್ಮಣರನೊಡಗೂಡಿ ರಾಘವನು ||
ಮುಂದೆ ಪೋಗುತೆ ಮಧ್ಯಮಾರ್ಗದೊ |
ಳೊಂದು ವಟವೃಕ್ಷದೊಳು ಮೇಘ |
ಸ್ಕಂಧದಂದದಿನಿರ್ದ ಗೃಧ್ರನ ಕಂಡು ಬೆಸಗೊಂಡ ||೪೭||

ಎಲವೊ ನೀನಾರಾವುದೈ ನಿಜ |
ಕುಲವು ಪೆಸರೇನೆನ್ನೊಳೊರೆಯೆನ |
ಲಲಘುಮತಿ ಕೇಳಾಂ ಜಟಾಯು ಭವತ್ಪಿತಗೆ ಸಖನು ||
ಕುಲವ ಪೇಳುವೊಡರುಣಪುತ್ರನು |
ಬಲಯುತನು ಸಂಪಾತಿಯೆಂಬವ |
ನಿಳೆಯೊಳಗ್ರಜನೆನಗೆ ನಿನಗಿನ್ನಾಂ ಸಹಾಯಕನು ||೪೮||

ನಿನ್ನ ಬಳಿಯೊಳಗಿಹೆನು ಗುಣಸಂ |
ಪನ್ನ ಲಕ್ಷ್ಮಣನೊಡನೆ ನೀನಿರ |
ದನ್ಯಕಾರ್ಯಕೆ ತೆರಳೆ ರಕ್ಷಿಸುತಿಹೆನು ಜಾನಕಿಯ ||
ಮನ್ನಿಪುದು ನೀನೆಂದ ಪಕ್ಷಿಯ |
ಮನ್ನಣೆಯಿನಾದರಿಸುತೆರಗು |
ತ್ತನ್ನನೇ ನೀನೆನಗೆ ಬಾಂಧವನೆಂದನಾ ರಾಮ ||೪೯||

ಪೇಳುತೀಪರಿ ಪಂಚವಟಿಯ ವಿ |
ಶಾಲಸುಕ್ಷೇತ್ರವನು ಸಾರ್ದನು |
ಕೂಲವಾದೀಯೆಡೆಯ ನೋಡ್ಯೆ ತಮ್ಮ ನಾವಿಲ್ಲಿ ||
ಕಾಲವನು ಕಳೆಯಲ್ಕೆ ತಳಿರಿನ |
ಶಾಲೆಯೊಂದನು ರಚಿಸು ನೀನೆನ |
ಲಾಲಯವ ಧಿಕ್ಕರಿಸುವಾಶ್ರಮವೊಂದನೆಸಗಿದನು ||೫೯

ನೋಡಿದನು ರಾಘವನು ಲಕ್ಷ್ಮಣ |
ಮಾಡಿದಾವರಪರ್ಣಶಾಲೆಯ |
ನಾಡಿಗಚ್ಚರಿ ತಮ್ಮ ನಿನ್ನಯ ಬುದ್ಧಿಕುಶಲತೆಯು ||
ನೀಡುವೊಡೆ ನಿನಗುಡುಗೊರೆಯನೀ |
ಕಾಡಿನೊಳು ದುರ್ಲಭವು ಪಡಿಯಿದು |
ಗಾಢತರದಾಲಿಂಗನವು ಕೊಳ್ಳೆನುತೆ ಬಿಗಿಯಪ್ಪಿ ||೫೦

ಲೋಲಲೋಚನೆಯೊಡನೆ ಮಿಂದು ವಿ |
ಶಾಲಗೋದಾವರಿಯೊಳಮ್ಮಲದು |
ಕೂಲಗಳ ಧರಿಸುತ್ತೆ ಸಂಧ್ಯಾದಿಗಳನಿರದೆಸಗಿ ||
ಮೇಲೆನಿಪ ಸುಮುಹೂರ್ತದಲಿ ಬಲ |
ಶಾಲಿ ಲಕ್ಷ್ಮಣನೊಡನೆ ನೂತನ |
ಶಾಲೆಯನು ಸಂಭ್ರಮದೆ ಪೊಕ್ಕನು ದಾನವಧ್ವಂಸಿ ||೫

ಮೊದಲನೆಯಸಂಧಿ ಸಂಪೂರ್ಣಂ.

# ಎರಡನೆಯ ಸಂಧಿ.

ಸೂಚನೆ|| ಭೋಗಬಾಸೆಯ ಶೂರ್ಪಣಖೆಯನು |
ಮೂಗನರಿದಟ್ಟಿದ ಲಕ್ಷ್ಮಣ |
ನಾಗ ರಾಮನ ಕೆಣಕಿಯಳಿದರು ಖರಮುಖಾಸುರರು ||

ನೂಕುತಿರ್ದರು ದಿವಸಗಳನ |
ವ್ಯಾಕುಲರು ತಾವಲ್ಲಿ ಮೂವರು |
ಮೇಕಮಾನಸರಾಗಿ ಮರೆದಾವಿಪಿನದಾಯಸವ |
ಸಾಕು ಸಾಕಾತಪದ ತಾಪವು |
ನೂಕದೆಮಗಿಂದೆಂಬ ಜನದವಿ |
ವೇಕಕುರೆ ಬೇಸತ್ತನೆನೆ ರವಿದಕ್ಷಿಣಕೆ ಸರಿದ ||೧||

ಸಂದು ಸಿಕ್ಕಿತು ತನಗದೆನ್ನುತೆ |
ಬಂದನಾ ಹೇಮಂತಭೂಷನು |
ಮಂದಿಯನು ಚಳಿಯೆಂಬ ಸಂಕಲೆಯಿಂದ ಬಂಧಿಸುತೆ ||
ಅಂದಗಿಡಿಸುವ ಮಂಜಿನಸ್ತ್ರಗ |
ಳಿಂದಮಿರಿಯಲು ಸಹಿಸಲಾರದೆ |
ನೊಂದು ಬಯಸಿತು ನಂದಿ ದಿನಮಣಿಗುತ್ತರಾಯಣವ ||೨||

ನೀರನೆಳಸದು ಜನವು ಪೂವಿನ |
ಹಾರವಾನದು ಮಿಾಯದಲೆ ಕಾ |
ಸಾರಗಳೊಳುರೆ ಕಾಯಲಿಚ್ಛೈಸಿದುದು ವಹ್ನಿಯನು ||
ವಾರಿಜಂಗಳ ದಳಗಳುದಿರಿದು |
ವಾರಿಪೋದುವು ರವಿಯ ಕಿರಣಗ |
ಳಾರಯಿಸಿದುವು ಸಕಲಜಂತುಗಳುಷ್ಣವಸ್ತುಗಳ ||೩||

ಈತೆರದಹಿಮಕಾಲದೊಳು ಭೂ |
ಜಾತೆಯುಂ ಲಕ್ಷ್ಮಣನುಮೊಡನಿರ |
ಲಾತಪೋಧನಯೋಗ್ಯವಾದುಟಜದೊಳು ರಾಘವನು ||
ಶೀತಭಯದಿಂ ಹರಿಣದಜಿನವ |
ನೋತು ಮೈಯಲ್ಲಾಂತು ಮೆರೆಯುತೆ |
ವೀತಿಹೋತ್ರನ ದಿವ್ಯತೇಜವನಿಳಿಕೆಗೈಯುತಿರೆ ||೪||

ಬಂದಳವರೆಡೆಗೆಂದು ರಾಕ್ಷಸ |
ವೃಂದವೈಭವಹಾನಿದಾಯಿಕೆ |
ಮಂದಮತಿಗಳಿಗಗ್ರನಾಯಿಕೆ ಕುಮುಖಿ ಶೂರ್ಪಣಖೆ ||
ನಿಂದು ನೋಡಿದಳಮಲರಾಘವ |
ನಂದಚಂದವ ಕಾಮಶರಹತಿ |
ಗಂದು ಮೈಗೊಟ್ಟೆರಗಿ ನುಡಿಸಿದಳಾ ದೃಢವ್ರತನ ||೫||

ಆರು ನೀನೆಲೆ ವೀರ ನಿನಗೀ |
ನಾರಿಯೇನಹಳಾತನಾವನ |
ಪಾರಪೌರುಷನಂತಿಹನು ನಿಮಗಿಲ್ಲಿ ಬರವೇನು ||
ಶೂರರಹ ರಕ್ಕಸರು ಚರಿಸುವ |
ಘೋರಕಾನನವೆಂಬುದರಿಯದೆ |
ಮೀರಿ ನಡೆವುದಕೇನುಕಾರಣವೆಂದಳಾದನುಜೆ ||೬||

ನೋಡಿದನು ರಾಘವನು ಮಿಗೆ ಮಾ |
ತಾಡಿದನು ಕೇಳಬಲೆ ಲೋಕದೆ |
ರೂಢಮಾಗಿಹ ಸೂರ್ಯವಂಶದ ದಶರಥಾಧಿಪನಾ ||
ಗಾಢಮೋಹದ ಪುತ್ರರಾವೀ |
ಗಾಡಿಕಾತಿ ಮದೀಯಸುದತಿಯು |
ಕಾಡಿಗಾಪಿತೃವಾಕ್ಯಪಾಲನೆಗಾಗಿ ಬರವಾಯ್ತು ||೭||

ಕರೆವರೆನ್ನನು ರಾಮನೆನ್ನುತೆ |
ಮೆರೆವಲಕ್ಷ್ಮಣನಾಮವೀತಗೆ |
ಕಿರಿಯನಿವನೆನ್ನಿಂದೆ ಸೀತಾಭಿಧೆಯು ತಾನಿವಳು ||
ಅರಿಯಲನುಪಮ ಜನಕಚಕ್ರೇ |
ಶ್ವರನ ಕುವರಿಯು ತನ್ನಭಾಗ್ಯದ |
ಸಿರಿಯು ನೀನಾರೇತಕೈದಿದೆ ಪೇಳು ನಿಶ್ಚಯವ ||೮||

ಸರಸಮಾದಾ ನುಡಿಯನಾಲಿಸಿ |
ಹರಿಸಗಡಲೊಳ್ಮುಳುಗುತಸುರಿಯು |
ಮೆರೆವಲಂಕಾಧೀಶರಾವಣನನುಜೆ ತಾನಹೆನು ||
ಧರೆಯೊಳೆನ್ನನು ಶೂರ್ಪಣಖೆಯೆಂ |
ದೊರೆವರೀಯಭಿಧಾನವನು ಕೇ |
ಳ್ವರಿಯೆವೆಂಬಾಜನವು ದುರ್ಲಭವಲ್ತೆ ಲೋಕದಲಿ ||೯||

ರಂಭೆಯೂರ್ವಶಿಯರ್ಕಳೆನ್ನ ನಿ |
ತಂಬಬಿಂಬಕೆ ಸಾಟಿಯೇ ಮೇ |
ಣಂಬುಜೋದ್ಭವನರಸಿ ಸರಸತಿ ತನಗೆ ಸರಿಯಹಳೇ ||
ಎಂಬೊಡತಿಶಯವಲ್ಲ ಕೇಳಲ |
ರಂಬನಾ ಸತಿಗಿತಿಯರೆನ್ನಿೀ |
ಕುಂಭಕುಚಕೇನೆಣೆಯೆ ತೆಗೆ ತನ್ನುಂಗುಟಕೆ ಸರಿಯೇ ||೧೦||

ಮಾರಿದೆನು ದೇಹವನಿದನು ನಿನ |
ಗಾರ ದರ್ಶನಫಲವೊ ಕಾಣೆನು |
ಸಾರವಹ ಸಂಸಾರವೊದವಿದುದಿಂದು ಪುಣ್ಯವಲಾ ||
ಧೀರರೆನಿಬರೊ ರಾಕ್ಷಸೇಂದ್ರರ |
ಪಾರಸಾಹಸದೋರಿ ಬೇಡಲ |
ದಾರುಮಂ ಲೆಕ್ಕಿಸದ ಚೆಲುವೆಯು ನಿನಗೆ ಸೋತೆನಲಾ ||೧೧||

ಬರುವಕಾಲದೆ ಪುಣ್ಯವಾರಿಗು |
ವೊರೆಯುದೈದುವುದೆಂಬ ನಾಳ್ನುಡಿ |
ಯರಿಯಲೀಗಳು ಸಫಲವಾದುದು ನಿನ್ನವಿಷಯದಲಿ ||
ಅರಸ ನೀನಿನ್ನೇಳು ಮನುಮತ |
ನೊರಸೊರಸು ಘನವಾಯ್ತು ತನ್ನನು |
ವರಿಸು ಬಾರೆಂದೆಸಲು ನಸುನಗುತೆಂದನಾ ರಾಮು ||೧೨||

ಸುರರ ಲೆಕ್ಕಿಸದಿರ್ಪ ದಾನವ |
ರರಸನಿಗೆ ಮಾನಾಪಹರಣವ |
ನಿರದೆ ಬಯಸುವುದಸುರಿ ಕೇಳ್ನಿನಗಿಂದು ತರವಲ್ಲ |
ಧರಣಿಯೊಳು ನೀಂ ಗೈದ ದೋಷವ |
ನೊರಗಿಪುದು ಜನವಾತನಲಿ ದನು |
ಜರಿಗಕೀರ್ತಿಯನೀವಮಾರ್ಗಕೆ ಮನವನೀಯದಿರು ||೧೩||

ಜಾಣೆ ಕೇಳಿಂದೆನ್ನ ನಿಯಮವ |
ಬಾಣವೊಂದೇವಾಣಿಯೊಂದೇ |
ಪ್ರಾಣಪದಕವ ಪೋಲ್ವ ಪತ್ನಿಯುವೊರ್ವಳೇ ತನಗೆ ||
ಮಾಣು ನಿನ್ನಭಿಲಾಷೆಯನು ಶಿವ |
ನಾಣೆ ನಾನಿದ ತಪ್ಪಿ ನಡೆಯೆನು |
ಕೇಣಗೊಳ್ಳದೆ ತೆರಳು ನೀನಿನ್ನೆಂದು ನೃಪನೊರೆದ ||೧೪||

ರೋಗಿ ಬಂದೊಡೆ ಬಳಿಗೆ ವೈದ್ಯನು |
ರೋಗವರಿತೌಷಧವ ಕರುಣಿಸಿ |
ನೀಗಿ ಬೇಗನೆ ಬೇಗೆಯೆಲ್ಲವನವನ ಪೋಷಿಸನೆ ||
ನಾಗವೇಣಿಯು ಬಂದು ಬೇಡಲು |
ರಾಗದಿಂದವಳಳಲ ನೀಗದೆ |
ಪೋಗು ನೀನೆಂದೊರೆವುದುಚಿತವೆ ನಿನಗೆಸಂಮತವೆ ||೧೫||

ಎನುತೆ ದುರುಳೆಯು ಹಲುಬುತಿರಲಾ |
ಮನುಕುಲೇಶನು ಕೇಳಿ ಸೀತೆಯ |
ಮನದ ಬೇಸರನೊರೆಸಬೇಕೆಂದಂದು ಮನದಂದು ||
ದನುಜೆ ತನಗೀಕಾರ್ಯ ಸಲುವುದೆ |
ಇನಿಯಳೆನಗಿಲ್ಲಿಹಳು ನೀನೆ |
ನ್ನನುಜನನು ವರಿಸಿಂದು ತಾನೇಕಾಂಗಿಯಾಗಿಹನು ||೧೬||

ಭೇದವೇನನುಜನೊಳು ನಿನಗದು |
ಸಾಧುವೆಂದೆನಲವಳು ಕಾಮನ |
ಬಾಧೆಗಾರದೆ ಪೋಗಿ ಯಾಚಿಸಲದಕೆ ಸೌಮಿತ್ರಿ ||
ಸಾಧುಮಾರ್ಗದೆ ಬೊಮ್ಮಚರಿಯುವ |
ಸಾಧಿಸುತ್ತಿಹೆನವಧಿ ಮುಗಿವಿನ |
ಮೊದುರಾಗತಮಾಗದೆನ್ನೊಳು ಸಾಗು ನೀನೆನಲು ||೧೭||

ಕೋಪವುಕ್ಕಿದುದೊಡನೆ ಮನ್ಮಥ |
ತಾಪ ಸುಕ್ಕಿದುದೆನ್ನ ನೀಪರಿ |
ಪಾಪಿಗಳು ಪರಿಹಾಸಗೆಯ್ವುವೊಲಾಯ್ತಲಾ ಎನುತೆ ||
ಓಪಳಿರ್ದಪಳೆಂಬಗರ್ವವೊ |
ಭಾಪುಭಾಪೆಲೊ ಹಂದೆರಾಮನೆ |
ಯಾಪಿನಾಕಿಯಕರೆದು ಬದುಕಿಸ ನಿನ್ನವಲ್ಲಭೆಯು ||೧೮||

ಅರುಚುತೀಪರಿ ಕುಪ್ಪಳಿಸಿ ಮುಂ |
ಬರಿದು ಸೀತೆಯ ಮೇಲೆ ರಭಸದಿ |
ನೆರಗಲೈತಹದುಷ್ಟೆಯನು ಕೈಯಿಂದಮುಡಗಟ್ಟಿ ||
ಅರಸ ಸೂಚಿಸಲೊಡನೆ ಲಕ್ಷ್ಮಣ |
ನಿರದೆ ಸರಲಿಂ ಮೂಗುಕಿವಿಗಳ |
ನರಿಯೆ ಹಾಹಾರವದೆ ಹಾಯ್ದಳು ಜವದೆ ಪಥವಿಡಿದು ||೧೯||

ಸದೆದು ಸುಜನರನಾ ಜನಸ್ಥಾ |
ನದಲಿ ಬಹುಬಲರೊಡನೆ ರಾಜಿಪ |
ಮದಮುಖರ ಖರದೂಷಣರ ತನ್ನನುಜರೆಡೆಗಿರದೆ ||
ಬೆದರುತೊದರುತೆ ಮುಖದೆ ಪರಿವಾ |
ರುಧಿರಮಂ ತಾನುಟ್ಟಸೀರೆಯೊ |
ಳದಿಮುತರುಚುತೆ ಬಂದು ಬಿದ್ದಳು ಕಾವುದೆಂದೆನುತೆ ||೨೦||

ನೋಡಿದನು ಖರನಾತ್ಮಸೋದರಿ |
ಗಾಡಬಾರದಭಂಗವೊದವಿತೆ |
ದಾಡೆಯಲುಗಿದನೀಚನಾವನು ಕಾಲಭೈರವನ ||
ಆಡು ವನಿತಾಮಣಿಯೆ ನಿನಗೀ |
ಕೇಡದಾರಿಂದಾಯ್ತು ಪಾಪಿಯ |
ಬಾಡನಾರೋಗಣೆಗೆ ಬಡಿಸುತೆ ನಿನ್ನ ತಣಿಸುವೆನು ||೨೧||

ಸುರರು ಯಕ್ಷರು ಕಿನ್ನರರು ನ |
ಮ್ಮೊರೆಗೆ ಬರ್ಪರೆ ಸಾಲರಾಹುಲು |
ನರರ ಮಾತಂತಿರಲಿ ಗಣನೆಯೊಳಿಲ್ಲ ನಮಗವರು ||
ಹರಿಹರಬ್ರಹ್ಮಾದಿಗಳು ನ |
ಮ್ಮರಮನೆಯ ಕಾದಿಹರು ಶಿವಶಿವ |
ಪಿರಿಯ ಸೋಜಿಗವಲ್ತೆ ನಿನ್ನಯ ವಿಕೃತರೂಪವಿದು ||೨೨||

ಎಂದು ನುಡಿವಾದನುಜಪತಿಯೊಡ |
ನೆಂದಳಿಂತಾ ಶೂರ್ಪಣಖಿ ಕೇ |
ಳ್ಬಂದಿಹರು ಬನಕಿಂದಯೋಧ್ಯಾಧಿಪನ ದಶರಥನ ||
ನಂದನರ್ಕಳು ರಾಮಲಕ್ಷ್ಮಣ |
ರೆಂದು ನಾಮವವರ್ಗೆ ರಾಮಂ |
ಗಿಂದುನಿಭಮುಖಿ ಸೀತೆಯೆಂಬಳು ಪತ್ನಿಯಾಗಿಹಳು ||೨೩||

ರೂಪಿನಲಿ ಮನುಮತನನದಟಿಸೊ |
ಳಾಪಿನಾಕಿಯ ಸೋಲಿಪರು ವರ |
ಚಾಪಹಸ್ತರು ಕೋಮಲಾಂಗರು ಮೇಣ್ ಸಹೋದರರು ||
ತಾಪಸರವೊಲ್ನಾರುಡೆಯನಾಂ |
ತಾ ಫಲಂಗಳ ಮೆಲುವರೆಂತುಂ |
ಚಾಪಲಕೆತಾ ವೆದೆಯನೀಯರು ಧೀರಮಾನಸರು ||೨೪||

ಆತಳೋದರಿ ಸೀತೆ ಭುವನ |
ಖ್ಯಾತೆ ಸುಗುಣೋಪೇತೆ ಸಜ್ಜನ |
ಗೀತೆ ದೋಷಾತೀತೆ ಸತ್ಕುಲಜಾತೆ ಸುವಿನೀತೆ ||
ಆತರುಣಿಯನು ನಿನಗೆ ತರಲೆಂ |
ದಾತುರದಿನಾನೈದಲೆನಗಾ |
ಪಾತಕಿಯು ಲಕ್ಷ್ಮಣನು ತತ್ಕ್ಷಣವೀವಿಲಕ್ಷಣವ ||೨೫||

ಗೈದನೆನುತಳುತಿರ್ಪ ತಂಗಿಯ |
ನಾದರಿಸಿ ಖರನಿರದೆ ಬಲವನು |
ಮೋದದಿಂ ಸಂವರಿಸಿ ಪೊಕ್ಕನು ಪಂಚವಟಿಯದನು ||
ಆದುದದ್ಭುತರಭಸ ಭೇರೀ |
ನಾದ ಕಿವುಡೇಳಿಸಿತು ಜಗವನು |
ಹೋದ ಕಿವಿಮೂಗುಗಳ ದನುಜೆಯು ಕಡೆಯ ದಂಡೆನುತೆ ||೨೬||

ಅರಿದು ರಾಮನು ಲಕ್ಷ್ಮಣನೆ ನೀಂ |
ಧರಣಿಜೆಯನೆಚ್ಚರದೆ ಕಾದಿರು |
ತರಿವೆನಾನೀದುರುಳರನು ಬಿಡದೆನುತೆ ಬಿಲುಗೊಂಡು ||
ಅರಿಗಳೇ ನೀವೆಮಗೆ ಕಾರಣ |
ವರಿಯಬಾರದು ತನಗೆ ತವಸಿಗ |
ೞರವನಾಂತೆವೆಮ್ಮೊಳಗೆ ವೈರವದೆಂತು ನಿಮಗಾಯ್ತು ||೨೭||

ದುರುಳೆಯೊರ್ವಳು ನಮ್ಮ ತರುಣಿಯ |
ನಿರಪರಾಧೆಯ ಭಕ್ಷಿಸುವೆನೆಂ |
ದೆರಗಲಬಲೆಯ ಕೊಲುವುದನುಚಿತವೆಂದು ನಾವರಿದು ||
ಅರಿದೆವೈ ಕಿವಿಮೂಗುಗಳ ನೀ |
ಧುರಕೆ ನೀವಿಂದೇತಕ್ಕೈದಿದಿ |
ರೊರೆವುದೆಮ್ಮಪರಾಧವೇನೆಂಬುದನು ನೀವೀಗ ||೨೮||

ದಂಡಕಾವನತಾಪಸರು ನಿ |
ಮ್ಮಂಡಲೆಯ ಸೈರಿಸದೆ ತನ್ನನು |
ಕಂಡು ಕೇಳಿದರಿತ್ತೆನಭಯವನಾನುಹಾಜನಕೆ ||
ಪುಂಡರಕ್ಕಸವಿಂಡ ಮತ್ತೋ |
ದಂಡಕಾಹುತಿಯಿನಾವೆನೆನ್ನುತೆ |
ಕಂಡು ನಿವಿಮ್ಮಾದಂಡಿಯನು ಹುರಿಗೊಳಿಸಿತಾವಚನ ||೨೯||

ಹೆಂಡಿರಾಸೆಯು ಮಕ್ಕಳಾಸೆಯು |
ಕಂಡುಕೇಳಿದರಾಸೆ ನಿಮಗಿರೆ |
ಖಂಡೆಯದ ಮೇಲಾಣೆಯಿಡುವುದು ಸಜ್ಜನರ್ಕಳನು ||
ಕಂಡೊಡೀದಿನಮೊದಲು ನಿಮ್ಮಯ |
ಮಂಡೆಗಳ ಭಾಗಿಸುತೆ ದೂರದೆ |
ಕೆಂಡವನು ಕಂಡಂತೆ ಜಾರುವೆವೆಂದು ನೀವೀಗ ||೩೦||

ಅಲ್ಲದಿರ್ದೊಡೆ ನಿಮ್ಮನೀಗಳೆ |
ಹುಲ್ಲುಮೆದೆಯನು ಕಿಚ್ಚು ಸುಡುವಂ |
ತಿಲ್ಲೆ ನಿರ್ನಾಮರನು ಗೆಯ್ದುಪೆಸೆನಲು ರಾಘವನು ||
ಕಲ್ಲಿನೊಳು ಮಳೆಗರೆದೊಡೇನದು |
ಮೆಲ್ಲಿತಹುದೇ ರಾಮವಾಕ್ಯದ |
ಬಲ್ಲವಿಕೆಯನು ಖುಲ್ಲರರಿವರೆ ಹಾಯ್ದರೊಗ್ಗಡಸಿ ||೩೧||

ದಾನವರು ಪದಿನಾಲ್ಕುಸಾಸಿರ |
ವಾನುವಾಬಗೆಯೆಂತು ರಾಮನು |
ತಾನದೊರ್ವನೆ ನಿಂತು ಕಲಕುವುದೆಂತು ಪಗೆಗಡಲ ||
ಏನಗೈದಪನೆಂತು ಸೆಣಸುವ |
ನೀನಿದಾನವ ಸೋಲ್ವೆವೆನ್ನು |
ತ್ತಾನಭೋಂಗಣದೊಳಗೆ ನೆರೆದರು ಶಕ್ರಮುಖಸುರರು ||೩೨||

ಧರೆಯ ಜನಕಿತ್ತಧಿಕಬಾಧೆಯ |
ಸುರರ ಸಂಕಟಗೊಳಿಸಿ ಧರ್ಮವ |
ಸರಕುಗೆಯ್ಯದೆ ಮೀರಿ ಸಲೆ ದುರ್ಮಾರ್ಗಪರರಾಗಿ ||
ನರಕಭೀತಿಯ ತೃಣಕೆ ಸಮವೆಂ |
ದರಿತು ನಡೆಯುವ ದುರುಳರಕ್ಕಸ |
ಗುರಿಗಳೇ ನಿಮ್ಮಾಯು ಪೂರ್ತಿಯನೊಂದಿತಿಂದಿನಲಿ ||೩೩||

ಎಂದು ಸರಳುಗಳಿಂದೆ ಸುಭಟರ |
ವೃಂದವೃಂದಂಗಳನು ಸದೆದಾ |
ಸ್ಯಂದನಂಗಳಕೂಡೆ ರಥಿಕರನಂದು ತರಿಯುತ್ತೆ ||
ಮುಂದೆ ಬಹ ಮದದಾನೆಗಳ ಬಲು |
ಸಂದಣಿಯನುರುಳಿಸುತುಮಶ್ವವ |
ದೊಂದುಮಿಲ್ಲೆನೆ ಸವರಿ ಹುಡಿಗುಟ್ಟಿದನು ರಾಘವನು ||೩೪||

ದಿಟ್ಟರವರೊಳ್ಕೆಲರು ಸಮರದ |
ಜಟ್ಟಿಗಳು ಮುಂದೈದಿ ರಾಮನ |
ಗಟ್ಟಿಸಿದರಾ ಪರಿಘತೋಮರಕುಂತಖಡ್ಗದಲಿ ||
ಪೆಟ್ಟು ತಾಗಿತು ರೋಷವೇರಿತು |
ಹುಟ್ಟುಗುಟ್ಟುವೆನಿವರನೆನ್ನುತೆ |
ತೊಟ್ಟು ಗಾಂಧರ್ವಾಸ್ತ್ರವನು ಬಿಡದೆಚ್ಚನಾ ಭೂಪ ||೩೫||

ಕಕ್ಕಿದರು ನೆತ್ತರನು ಕೆಲಬರು |
ಸೊಕ್ಕಿಮಲಗಿದರಂದನೇಕರು |
ಮಿಕ್ಕವರು ಜಕ್ಕಸವನಾಂತೋಡಿದರು ಕಳನುಳಿದು ||
ತಿಕ್ಕಿಮುಕ್ಕಿತು ಸರಳು ಸಕಲರ |
ನಕ್ಕಜವು ತಾನೆಂದು ದೂಷಣ |
ನುಕ್ಕಿ ಗಾರನು ಪೊಕ್ಕನಾಹವಕಂದು ಸಮತಳಿಸಿ ||೩೬||

ಸಿಡಿಲಿಗೆಣೆಯುಹ ಸರಳ ಪೂಡುತೆ |
ತಡೆದುಕೊಳ್ಳೆಂದೆಸೆಯಲದನಿ |
ಕ್ಕಡಿಯುಗೈಯುತೆ ರಾಮನಾತನ ಬಿಲ್ಲನೊಂದರಲಿ ||
ಕಡಿದು ನಾಲ್ಕಂಬಿನಲಿ ಕುದುರೆಗ |
ಳೊಡಲನಿರದೆಚ್ಚೊಂದುಶರದಲಿ |
ಕೆಡಹಿ ಸೂತನ ಮೂರುಬಾಣದೆ ದೂಷಣನನೆಚ್ಚ ||೩೭||

ಉರವಣಿಸಿ ಕೈಯೊಡನೆ ಖಳ ತಾ |
ನುರುಬಿದನು ತರುಬಿದನು ಪರಿಘದೊ |
ಳೆರಗಿದನು ಹಗೆಹರಿದುದೀದಿನವೆನುತೆ ಬೊಬ್ಬಿರಿದು |
ಸರಳ ಸುರಿದನು ರಾಮನೊಡನೆಯೆ |
ತರಿದನಾತನ ಭುಜಗಳೆರಡನು |
ಹರಣವೊಡಲನು ಬಿಡಲು ಬಿದ್ದನು ಗಿರಿವೊಲಾ ಖಳನು ||೩೮||

ಆಸಮಯದೊಳಗಂತರಿಕ್ಷದೆ |
ವಾಸವನು ಮೊದಲಾದ ಸುರರು |
ದ್ಭಾಸಿಸುಮುಗಳ ಚೆಲ್ಲಿದರು ರಾಘವರ ಸಿರಿಮುಡಿಗೆ ||
ಈಸುವನು ನೋಡಿದನು ಮನದಲಿ |
ಗಾಸಿಯಾಂತನು ತಮ್ಮನಳಿವಿಂ |
ಗೈಸಲೇ ಎನುತೆದ್ದು ಕೊಂಡನು ಧನುವನಾ ಖರನು ||೩೯||

ತಾಳುತಾಳ್ಯೆ ದೇವ ನಿನಗೀ |
ಹಾಲುಹಸುಳೆಯು ಸಮವೆ ತನಗಿಂ |
ದೂಳಿಗವ ಕುಡು ನಿನ್ನ ಸೇನಾನಾಥನಾನಲ್ತೆ ||
ಜಾಲಗೈಯದೆ ಕೊಲುವೆನೆನ್ನುತೆ |
ಶೂಲವೊಂದಂ ತ್ರಿಶಿರನಾರ್ದಿಡೆ |
ಕೋಲುಗಳಿನಿರದದನೆ ಖಂಡಿಸುತಾಕಕುತ್ಸ್ಥಜಸು ||೪೦||

ಒಡನೆ ಕವಲಂಬುಗಳ ಜೋಡಿಸಿ |
ಬಿಡದೆ ತಲೆಗಳ ಮೂರನಿಳುಹ |
ಲ್ಕಡರಿ ನಭದೊಳ್ಕಣಿದುಬಿದ್ದುವು ಖರನ ಸಮ್ಮುಖಕೆ ||
ಕೆಡೆದ ತಲೆಗಳ ಕಂಡು ಕೋಪದೆ |
ತಡೆಯದೆದ್ದನು ಕಾರ್ಮುಕವ ಜೇ |
ವೊಡೆದು ರಾಮನ ಮುಂದೆ ಸುಳಿದನಮರರಿಪು ರಥವ ||೪೧||

ಎಲೆಲೊ ರಾಘವ ನಿನ್ನ ಭುಜಬಲ |
ದಳವನರಿಯದೆ ನಮ್ಮ ಕೆಣಕಿದೆ |
ಕೆಲರ ಹುಲುರಕ್ಕಸರ ಕೊಂದಿಹ ಗರುವಗರಹೊಡೆದು ||
ಸಲೆ ಪರಾಕ್ರಮಿಯೆನುತೆ ಬೆರೆತಿಹೆ |
ನಿಲಿಸು ನಿನ್ನೀಕೊಬ್ಬನೀಗಳೆ |
ಕಳುಹುವೆನು ಯಮಪುರಕೆ ನಿಲ್ಲೆಂದೊದರಿದನು ಖರನು ||೪೨||

ಆದುದಾಯಿತು ನೀನಳಿಯೆ ತವ |
ಸೋದರಿಗೆ ಕಿವಿಮೂಗು ಬರ್ಪುವೆ |
ಈದುರಾಗ್ರಹವೇಕೆ ನಿನ್ನೊಡನಿರ್ದಭಟರೆಲ್ಲ ||
ಹೋದರಿದರಿಂದೆಂದು ಬಗೆಯುತೆ |
ಕಾದುವಾಸೆಯನುಳಿದು ಬದುಕುವ |
ಹಾದಿಯರಸೆಲೆಖರಸೆಯೆಂದನು ನಗುತೆ ದಾಶರಥಿ ||೪೩||

ಬರಿಯ ಖರನಲ್ಲಾನು ನಿನ್ನಯ |
ಹರಣಜಳವನು ಪೀರ್ವದಾರುಣ |
ಖರಕರನಲಾ ತಂಗಿಗೊದವಿದ ಮಾನಭಂಗವನು |
ಹರಿದು ಕಳೆವುದಸಾಧ್ಯವೇ ನಿ |
ನ್ನರಸಿಯಾ ಕಿವಿಮೂಗುಗಳನಾ |
ನರಿದು ನಿನ್ನನು ಕೊಲುವೆ ನೋಡೆಂಗೆಜ್ಜನಾ ಖಳನು ||೪೪||

ಎಚ್ಚ ಕಣೆಗಳ ರಾಮನಾಗಳೆ ।
ಕೊಚ್ಚಿದನು ಬಳಿಕವನ ರಥವನು ।
ಮುಚ್ಚಿದನು ಕೆಂಗರಿಯ ಪೊಸಮಸೆವೆತ್ತಬಾಣದಲಿ ||
ಕಿಚ್ಚನುಗುಳುವಶರಗಳಿಂ ಖರ ।
ನುಚ್ಚ್ರಲೊಡಲನು ನೊಂದು ದೇವನು ।
ನುಚ್ಚುನುರಿಯಾಗಿಸಿದನಾತನ ಕೀರನಾಕ್ಷಣದೆ ||೪೫||

ಲೇಸುಲೇಸೈ ರಾಮ ಕದನದ ।
ವಾಸಿ ನಿನಗಿನಿತೇಕೆ ನಿಲಿಸೈ ।
ಯೀಸುಪರಿಯಂತರವು ಕಾಣದೆ ಮೋಸವೋದೆನಲಾ ||
ಈಸಿಕೊಳ್ಳೆನ್ನೀಶರಂಗಳ ।
ಗಾಸಿಯೊಂದದೆ ನಿಂದೆಯಾದೊಡೆ ।
ಸಾಸಿ ನೀನೇ ಮೂರುಲೋಕದೊಳೆನುತೆ ತೇರುಳಿದು ||೪೬||

ಶರಗಳೋ ಕಡೆಗಾಲದಬುದಿಯ ।
ತೆರೆಗಳೋ ನಡುವಗಲ ದಿನಪನ ।
ಕರಗಳೋ ಎಂಬವೊಲು ಕರೆದನು ಶರವ ಸಾಸಿರವ ||
ಬರುವಬಾಣಂಗಳಿಗೆ ಭಾರಿಯ ।
ಸರಳನೆಸೆಯುತೆ ಕತ್ತರಿಸಿದನು ।
ಮರಳಿ ಮೊನೆಗಣೆಗಳನು ಬಿಟ್ಟನು ಬೇಗ ರಾಘವನು ||೪೭||

ಖರನ ಕರಧನು ಮುರಿದು ಬಿದ್ದುದು ।
ಬೆರಗನಾನುತಾತ್ಮಖಳಾಧಮ ।
ನುರುವಗದೆಯಿಂದಪ್ಪಳಿಸಿದನು ದೂಷಣಾಂತಕನ ||
ಕೆರಳಿ ಪಜ್ಜೆಯನೆಳೆದು ಪಿಂದಕೆ ।
ಭರದೊಳೈಂದ್ರಾಸ್ತ್ರದಲಿ ರಾಮನು ।
ಖರನ ಶೀರ್ಷವನಿಳುಹೆ ಪೊಗಳಿದರಭ್ರದಲಿ ಸುರರು ||೪೮||

ಅರಸಿ ಕಂಡಳು ತನ್ನ ರಮಣನ ।
ಧುರದ ಜಯವನು ಬಾಚಿ ತಬ್ಬಿದ ।
ಳರಸ ನೊಂದ್ಯೆ ಪಾಪಿದನುಜರ ಕೈಗಳಿಂದಕಟಾ ||
ಧರೆಯ ಸಾಮ್ರಾಜ್ಯವನು ನೀಗು ।
ತ್ತುರುತರದ ವನವಾಸಕಷ್ಟದೊ ।
ಳಿರುವ ನಿನಗೀದುರುಳರೊಂದೆಡೆ ಹಿಂಸಗೈವರಲಾ ||೪೯||

ಹರಿಯು ನೀಂ ನಿನಗೇಪರಿಯ ಬೇ |
ಸರಮುಮಿಲ್ಲವೆನುತ್ತೆ ಲೋಕದೊ |
ಳೊರೆವರಾ ಮಾತಿರಲಿ ನರನಾಗುದಯಿಸಿದ ಬಳಿಕ ||
ಮೆರೆವ ಮಾಂಸದ ಮಜ್ಜೆಯೆಲುವಿನ |
ಬೆರಕೆಯಿಂ ಬಿಗಿದಿರ್ಪ ತನುವಿದ |
ನಿರಿಯೆ ಸೋಯದೆ ಮುದವನಾಂಪುದೆ ಎಂದಳಾ ಸುದತಿ ||೫೦||

ಅರಸಿ ನಿನ್ನಾಲಿಂಗನದ ಸುಖ |
ದೊರೆತೊಡೆನಗಿರದಾವಗಂ ತಾಂ |
ಬರಲಿ ಬರ್ಪಾಕಷ್ಟವೆಲ್ಲವು ಕೊನೆಗೆ ಹಿತಕರವು ||
ಅರಿಗಳಾಯುಧವೆನ್ನ ಘಾತಿಸಿ |
ಕೊರಗಿಸುವುದೇ ನಿನ್ನ ಕೋಮಲ |
ಕರತಲಸ್ಪರ್ಶಾಮೃತಾಸೇಚನದ ಬಲವಿರಲು ||೫೧||

ರಾಮವಾಕ್ಯಾಮೃತದ ವೃಷ್ಟಿಗೆ |
ಕೋಮಲಾಂಗಿಯ ಬಗೆನವಿಲು ಸು |
ಪ್ರೇಮದಿಂ ನಲಿದಾಡೆ ಸಮಯವು ತಮಗಿದೆಂದೆನುತೆ ||
ವ್ಯೈಮರೆತ ಖರದೂಷಣಾದ್ಯರ |
ಕೈಮೆಯಡಗಿಸಿ ನಮ್ಮ ಸಲಹಿದ |
ಭೀಮವಿಕ್ರಮ ಜಯಜಯೆಂದುದು ಬಂದು ಮುನಿನಿಕರ ||೫೨||

ಸುರಪನನು ಶರಭಂಗಮುನಿಪನ |
ವರತಪೋವನಕಿಳಿಸಿ ಸಕಲರು |
ಬೆರಸಿ ಚಿಂತಿಸಿ ದುಷ್ಟನಿಗ್ರಹಕೋಸುಗವೆ ನಾವು ||
ಅರಸ ನಿನ್ನನು ತಂದೆವಿಲ್ಲಿಗೆ |
ದುರುಳರೀದಿನವಳಿದುಪೋದರು |
ಪರಮಪುರುಷನೆ ಸೈರಿಸುವುದೆನೆ ರಾಮ ಮನ್ನಿಸಿದ ||೫೩||

ಎರಡನೆಯಸಂಧಿ ಸಂಪೂರ್ಣಂ.

## ಮೂರನೆಯ ಸಂಧಿ.

ಸೂಚನೆ || ದಶಮುಖನಕಂಪನನ ಮುಖದಿಂ |
ದಸಮುಖರಮುಖರಳಿವನರಿದು |
ಬ್ಬಸದೆ ಮಾರೀಚನ ಸಹಾಯದಿನವನಿಜೆಯನೊಯ್ದ ||

---

ಖರನ ಮರಣವ ಕಂಡು ಲಂಕಾ |
ಪುರಿಗಕಂಪನನೆಂಬರಾಕ್ಷಸ |
ನಿರದೆ ಭರದಿಂದೋಡಿ ತಾಂ ರಾವಣನ ಬಳಿಸಾರ್ದು ||
ಖರನೆ ಮೊದಲಾದಖಿಳದನುಜರು |
ಧುರದೆ ಹತರಾದುದನು ಮೇಣ್ಬಂ |
ಧುರಜನಸ್ಥಾನದ ವಿನಾಶವನರುಹಿದನು ಬಳಿಕ ||೧||

ಕೇಳಿದೊಡನೆಯೆ ರೋಷವಹ್ನಿ |
ಜ್ವಾಲೆಯಂಗವ ಸುಡಲಕಾಲದೆ |
ಕಾಲನೆಂತಾರಾಕ್ಷಸೇಂದ್ರರ ಸೋಂಕಲೆಳಸಿದನು ||
ಕೋಳುಹೋದುದೆ ತನ್ನ ಪಾಳೆಯ |
ಪೇಳು ತನ್ನನು ಗಣಿಸದದನುರೆ |
ಪಾಳನೆಸಗಿದಖೂಳನಾವನು ಬೊಮ್ಮನೋ ಹರಿಯೋ ||೨||

ಎಂದು ಬೆಸಗೊಳುತಿರ್ಪ ದನುಜನ |
ಮುಂದುಗಡೆಯೊಳ್ಬಂದು ಬಿದ್ದಳು |
ಮಂದಿ ಬೆದರಲು ಮೂಕೊರತಿಯಾ ಕುಮತಿ ಕುಹಕಕೃತಿ ||
ಇಂದಿದೇನಿದು ಬಿದ್ದುದೆನ್ನುತೆ |
ಸಂದೆಗಂಬಡುತಾಗ ಕಂಡನು |
ಸಂದಕಿವಿಮೂಗಿನ ಲತಾಂಗಿಯ ತನ್ನ ತಂಗಿಯನು ||೩||

ಏನಿದೇನಿದು ತಂಗಿ ತಾನೀ |
ಹಾನಿಯಾರಿಂದಾಯ್ತು ನಿನಗೀ |
ಮಾನಭಂಗವನೆಸಗಿದಾತನು ಜೀವದಿಂದಿಹನೆ ||
ಆನಪುಂಸಕನಾವನೆಲ್ಲಿಹ |
ನೇನುಕಾರಣವೆಂಬುದೆಲ್ಲವ |
ನೀನು ಸನ್ನೊಡನುಸಿರು ಬೇಗದೊಳೆಂದು ಖಳ ನುಡಿದ ||೪||

ಅಣ್ಣ ನೀನಿದನೇಕೆ ಕೇಳುವೆ |
ತಣ್ಣಗಾದುದು ದನುಜರೈಸಿರಿ |
ನಿನ್ನವಂದಿಗರಿರಲು ರಾಕ್ಷಸಕುಲವು ವರ್ಧಿಪುದೆ ||
ತನ್ನ ದೇಶವೆನಿತ್ತು ಮೇಣು |
ತ್ವನ್ನವೇನಾದ್ಯಂತಜನಗಳೆ |
ಗುನ್ನತಸ್ಥಿತಿಯೊಪವನಲೇನೇಸಿಹುದು ಸಾಧನವು ||೫||

ಎಂಬಿವನು ತಾಂ ಬಗೆಗೆ ತಾರದೆ |
ದಂಭದಧಿಕಾರಿಗಳ ಮಾತನು |
ನಂಬುತವರಂತಿರ್ಪ ರಾಜನ ರಾಜ್ಯವುಳಿದಪುದೆ ||
ಕುಂಭಕುಚೆಯರಿಗೊಲಿದು ನೀನಲ |
ರಂಬನಾಟದೆ ಹೊತ್ತ ಕಳೆಯಲು |
ಚುಂಬಿಸಳೆ ನಿನ್ನಿಳೆಯನಪಜಯಲಕ್ಷ್ಮಿ ತಾನೊಲಿದು ||೬||

ಮೂಜಗವು ತಲ್ಲಣಿಸೆ ಸಕಲರ |
ನಾಜಿಯಲಿ ಗೆದ್ದುದಕೆ ಫಲವೇ |
ನಾ ಜನಸ್ಥಾನವಲೆ ವಿಜನಸ್ಥಾನವೆನಿಸಿದುದು ||
ವ್ಯಾಜವಿಲ್ಲದೆ ತರಳರಿರ್ವರು |
ರಾಜಸುತರದನಿಂತೆಸಗಿದರು |
ಸೋಜಿಗವು ನಿನಗರುಹದಿರ್ಪುದು ಬೇಹಿನವರಿದನು ||೭||

ಖರನ ಕೊಂದರು ದೂಷಣನ ಶಿರ |
ವರಿದರಾ ತ್ರಿಶಿರನ ಸಿರಂಗಳ |
ತರಿದರುಳದಾ ರಕ್ಕಸರ್ಕಳನೆಲ್ಲ ಸದೆಬಡಿದು ||
ಸುರರಿಪುಕ್ಷಯಕೃತಿಗೆ ವಿಘ್ನೇ |
ಶ್ವರನ ಪೂಜೆವೊಲೆನ್ನ ಭಂಗಿಸಿ |
ತರಳೆಯನು ಕೊಲಲಾಗದೆಂಬಾಧರ್ಮದಿಂದುಳುಹಿ ||೮||

ಬಿಟ್ಟರೆನ್ನೊರ್ವಳನು ನಾನೀ |
ಕೆಟ್ಟಕೇಡನದಾರಿಗೊರೆಯಲಿ |
ಹುಟ್ಟಿ ನಿನ್ನೊಡನೆನ್ನಮಾನವು ಬಟ್ಟಬಯಲಾಯ್ತು ||
ದಿಟ್ಟರೆನಿಪವರಟ್ಟಹಾಸವ |
ನಿಷ್ಟೆನುತೆ ನಿರ್ಣಯಿಸಲಸದಳ |
ನಿಟ್ಟಿಸಲ್ಕಿನಗಳಿವ ತರ್ಪರು ಕಟ್ಟಕಡೆಯೊಳಗೆ ||೯||

ನುಡಿಯ ಕೇಳ್ದೊಡನಿರದೆ ಕಿಡಿಗೊಂ |
ಡೆಡೆಯ ರಕ್ಕಸಗಡಣದೆದೆ ಗಡ |
ಗಡನೆ ನಡುಗಲ್ಕೆದ್ದು ಕಡುಗವ ಜಡಿದು ಜಳಿಪಿಸುತೆ ||
ನುಡಿನುಡಿ ಸಹೋದರಿಯೆ ಮೃತ್ಯುವಿ |
ನುಡಿಜೆರಗ ಜಾರಿಸಿದ ಕೊಬ್ಬಿನ |
ಕಡುಹುಕಾರರದಾರು ತೊಡೆವೆನು ಬಾಳದಕ್ಕರವ ||೧೦||

ಎಲೆಲೊ ನರಗುರಿಗಳಿರ ನೀವೆ |
ನ್ನಳವನರಿಯದೆ ಕೆಣಕಿ ಕೆಟ್ಟಿರಿ |
ಫಲವನುಣ್ಣಿರಿಮೆನ್ನುತಸುರಾಧಿಪನು ಲಟಕಟಿಸೆ ||
ಬಲುಭುಜನ ತಬ್ಬಿದಳು ತಡೆದಳು |
ಚಲದ ಪರಿಯಿದು ಸಾಗದವರೊಳು |
ನೆಲದ ಹುಲುನರರೆಂದು ಭಾವಿಸಬೇಡ ನೀನವರ ||೧೧||

ಕೇಳಿ ಬಲ್ಲೈ ನೀನಯೋಧ್ಯೆಯ |
ನಾಳುತಿರ್ದನ ದಶರಥೇಂದ್ರನ |
ಮೇಲೆನಿಪ ತನುಜಾತರೆಸೆವರು ರಾಮಲಕ್ಷ್ಮಣರು ||
ನೀಳವಾಗಿಹ ತೋಳು ಮೇಣ್ಸುವಿ |
ಶಾಲವಾಗಿಹ ಚಕ್ಷು ವಲ್ಕಲ |
ಚೇಲವಂಗಜರೂಪು ಶೋಭಾಕರವು ರಾಮಂಗೆ ||೧೨||

ಧನುವ ಧರಿಯಿಸಿ ಕರದೊಳಾವಗ |
ಮನಲಕೀಲವನುಗುಳ್ವ*ಬಾಣವ |
ನನುಗೊಳಿಸುತೆಚ್ಚರದೊಳಿರ್ಪನು ಶೂರ ರಘುವೀರ ||
ಅನಿಮಿಷರಿಗೀಕ್ಷಿಸುವೊಡರಿದಾ |
ಅನುಪಮನ ಕೈಚಳಕಮಿಷುಗಳ |
ನೆನಿತುವೇಗದೆ ತೆಗೆವುದುವನಿಸುವನೆಂಬುದಿದು ||೧೩||

ಏನನುಜ್ಞೆಯನೀವನಣ್ಣನು |
ತಾನದೆಳ್ಳನಿತುವನು ಮೀರದೆ |
ಮಾನಿ ಲಕ್ಷ್ಮಣನವನನೇ ನೆಳಲಂತೆ ಪೊದ್ದಿಹನು ||
ಮೀನಕೇತನನರಸಿಯನು ನುಸಿ |
ಗಾಣುವಾಕಡುರೂಪನೊಂದಿದ |
ಮಾನಿನೀಮಣಿಯೊರ್ವಳಿರ್ಪಳು ರಾಣಿ ರಾಮಂಗೆ ||೧೪||

ಇಂದುವನು ನಗುತಿಹುದು ವದನವು |
ಬಂದುಗೆಯನಾ ತುಟಿಯು ಪಳಿವುದು |
ಮಂದಗತಿಗಳುಕುತ್ತೆ ಮದಗಜಮುಡವಿಗೈದಿದುವು ||
ಸುಂದರಾಂಗಿಯ ನೇತ್ರಯುಗಮರ |
ವಿಂದವನು ಸೋಲಿಪುದು ಸಂಪಗೆ |
ಯಂದವನು ಕಡೆಗಣಿಸಿ ಮೆರೆವುದು ಲಲಿತವಹ ಮೂಗು ||೧೪||

ಜನಕಭೂಪನ ಸುತೆಯು ಸೀತೆಯು |
ಘನತರವೆನಿಪ್ಪಾಸ್ವಯಂವರ |
ದನುವನಾಲಿಸಿ ಪೋಗಿ ಮಿಥಿಲೆಗೆ ನೀನು ಪೂರ್ವದಲಿ ||
ಧನುವನೆತ್ತದೆ ಭಗ್ನಮಾನಸ |
ನೆನಿಸಿ ಹಿಂದಿರುಗಿದೆಗಡಾ ತ |
ದ್ವನಿತೆಯೇ ತಾನಾಗಿಯೆಮ್ಮೆಡೆಗಿಂದು ಬಂದಿಹಳು ||೧೬||

ನಿನ್ನ ರೂಪಿಂಗವಳ ಚೆಲುವನು |
ಮುನ್ನ ನಾನೊರೆಯಿಕ್ಕಿ ಸಮವೆಂ |
ದುನ್ನತೋತ್ಸವದಿಂದಮುವಳನು ಪಿಡಿಯಲನುವಾಗೆ ||
ಕುನ್ನಿ ಫಡ ಪೋಗೆಂದು ಲಕ್ಷ್ಮಣ |
ತನ್ನ ಸರಲಿಂದೆನ್ನ ನೀಪರಿ |
ಬನ್ನಬಡಿಸಿದನಣ್ಣ ನಿನ್ನಿಂದೆನಗೆ ಪರಿಭವವು ||೧೬||

ಆಸುರದ ಸಕಲಾಯುಧಂಗಳ |
ಸಾಸವಿವರೊಳ್ಳಡೆಯದೆಂತುಟು |
ವೇಸವನು ಮರೆಯಿಸುತೆ ಮುನಿಗಳ ತೆರದೆ ಬಂದಿಹರೊ ||
ಲೇಸರಿದು ನೀನಂತುಟವರನು |
ಮೋಸದಿಂದಮೆ ನಾಶಪಡಿಸುವ |
ದೇಸಿಯೊಂದಿಹುದದನು ತಿಳಿಪುವೆ ಕೇಳು ಕೃಪೆದಾಳು ||೧೮||

ತರುಣಿಯಾ ನಡೆನುಡಿಗಳಿಗೆ ರಘು |
ವರನು ಮೆಚ್ಚಿ ಹನವನ ಸುರುಚಿರ |
ತರಗುಣಂಗಳಿಗಾಕೆ ಸೋತಿಹಳಿರ್ವರೊಂದೆನಲು ||
ಮೆರೆಯುವೆಣೆವಕ್ಕಿಗಳೊ ತಾವೆನ |
ಲೆರಕಗೊಂಡಿಹರದರಿನವನಾ |
ಸರಸಿಜಾಕ್ಷಿಯ ಜತೆಯ ತಪ್ಪಲು ಕೊರಗಿ ಸತ್ತಪನು ||೧೯||

ಪೇಳುವೆನು ನಾನೊಂದುಪಾಯವ |
ಕೇಳು ಮಾರೀಚನನು ಮಾವನ |
ನೋಲಗಿಸಿಯೊಲಿಸುತ್ತೆ ಕಾರ್ಯವ ಸಾಧಿಪುದು ಮತವು ||
ತಾಳಿ ಹೊಮ್ಮಿಗವರಿಜನವನಾ |
ಬಾಲೆಯಿದಿರೊಳ್ಸುಳಿಯಲಾಕೆಯು |
ತಾಳುತಾಸೆಯಸದನು ಪಿಡಿಯೆಂದರಸನನು ಕಾಡೆ ||೨೦||

ಅಸಿಯಳಿಷ್ಟವ ಸಲಿಸಬೇಕೆಂ |
ದಸಮಶೂರನು ಪಿಡಿಯಲೈತರ |
ಲೆಸೆದು ಬಳಿಯಲಿ ಸಿಕ್ಕಿತೆನಲಸವಸದೆ ಲಂಘಿಸುತೆ ||
ಸಸಿನೆ ಮುಂದಕೆ ಪಾರುತಂತಂ |
ತಸದೃಶದ ಬೆಡಗಿಂದಮುರುಸಾ |
ಹಸದೊಳವನನು ಸೆಳೆದು ದೂರಕೆ ಸಾರ್ದು ತಾನಿರದೆ ||೨೧||

ತಮ್ಮಲಕ್ಷ್ಮಣ ಸೀತೆ ಹಾ ಎಂ |
ದುಮ್ಮಳಿಸುತಾರಾಮನಂದದೊ |
ಳೊಮ್ಮೆ ಕೂಗಲು ಕೇಳಿ ಲಕ್ಷ್ಮಣನಾಂತು ಕಳವಳವ ||
ಹಮ್ಮದಂಗೊಂಡೆದ್ದು ರಾಮನ |
ನೆಮ್ಮದಿಗೆ ಭಯಮೊದವಿತೆನ್ನುತೆ |
ಗಮ್ಮನಾದನಿವಿಡಿದು ತಾನಲ್ಲಿಂದೆ ತೆರಳುವನು ||೨೨||

ಕಡುಭರದೆ ನೀಂ ಯತಿಯ ವೇಷವ |
ಗಡಣಿಸುತ್ತಾಶ್ರಮವ ಪೊಕ್ಕಾ |
ಮಡದಿಯನು ಪಿಡಿತಪ್ಪ್ರದುಚಿತವಿದೆಂದು ಖಳೆ ನುಡಿಯೆ ||
ಒಡನೆ ತಂಗಿಯ ತಬ್ಬಿ ಮುದ್ದಿ |
ಟ್ಟಡಸಿದಾಪತ್ತಿನಲಿ ತನ್ನನು |
ಬಿಡದೆ ಸಲಹಿದೆ ತಾಯೆಯೆಂದೆನುತೆದ್ದನಸುರಪತಿ ||೨೩||

ಆಗಳಾಜ್ಞೆಯನಿತ್ತು ರಥವನು |
ಬೇಗ ತರಿಸುತ್ತಡರಿದನು ಲೇ |
ಸಾಗಿ ದುರ್ವೃತ್ತಿಯನು ದೂರೀಕರಿಸಿ ವಿಪಿನದಲಿ ||
ಯೋಗಮಾರ್ಗದೊಳಿರ್ದು ಲೌಕಿಕ |
ರಾಗಮೆಲ್ಲವ ನೀಗಿ ಶಿವಸಂ |
ಯೋಗಮಾನಸನಾದ ಮಾರೀಚನನು ತಾಂ ಸೇರಿ ||೨೪||

ರೋಗಮಡಸಿಹುದೆನಗೆ ನೀಂ ನೆರ |
ವಾಗಿ ತಕ್ಕುದೆನಿಪ್ಪಮದ್ದನು |
ಬೇಗನಿತ್ತೋವೆಂದು ದೈನ್ಯವ ಬೀರಿ ಯಾಚಿಸಲು ||
ಆಗಮೋದಿತತತ್ತ್ವಪರನೀ |
ನಾಗಿ ನನ್ನಿಂದಲ್ಪಮತಿಯಿಂ |
ದೀಗಳೇನನು ಪಡೆಯಲ್ಶೈದಿದೆಯೆಂದನಾದನುಜ ||೨೫||

ಪೇಳಲೇನನು ಮಾವ ರಕ್ಕಸ |
ರೇಳಿಗೆಗೆ ಕಡುಭಂಗವೊದವಿತು |
ಕೀಳುತರದಾ ಹುಲುನರರು ಬಲುಗೂಳಿಯಾದರಲಾ ||
ಕೇಳಿದೊಡೆ ನಮ್ಮವರ ವಿಧಿಯನು |
ಬಾಳಬಹುದೇ ಧರೆಯೊಳಗೆ ಬ |
ಲ್ಲಾಳತನ ತಾನೆತ್ತಲಡಗಿತೊ ದಾನವರ ಕುಲದ ||೨೬||

ಬಂದಿಹರು ಸಾಕೇತಪುರವರ |
ದಿಂದೆ ಭೂಪತಿದಶರಥೇಂದ್ರನ |
ನಂದನರುಗಡ ರಾಮುಲಕ್ಷ್ಮಣರೆಂಬ ಬಾಲಕರು ||
ಚಂದಿರಾನನೆ ಸೀತೆ ಜತೆಯಲಿ |
ಬಂದಿಹಳು ಗಡ ತರಳರವರೀ |
ಗೊಂದಿ ಮುನಿವೇಷವನು ಚರಿಪರುಗಡ ತಪೋವನದೆ ||೨೭||

ಅಲ್ಲಿಕಾವಲಿಗಿರಿಸಿದೆಮ್ಮಯ |
ಬಲ್ಲಿದರು ಪದಿನಾಲ್ಕುಸಾಸಿರ |
ಮಲ್ಲರೆನಿಸಿದ ಭಟರ ನಿಷ್ಕಾರಣದೆ ಸದೆಬಡೆದು ||
ಇಲ್ಲ ಸಮರಾಂಗಣದೆ ಸಮಭಟ |
ರೆಲ್ಲಿಯುಂ ಖರದೂಷಣರಿಗೆಂ |
ದೆಲ್ಲರಾಡುತ್ತಿರ್ದ ತನ್ನಯ ಸೋದರರ ಮುರಿದು ||೨೮||

ಲಲನೆಯರ ಸೌಭಾಗ್ಯಲಕ್ಷ್ಮಿಯ |
ಚಲುವಿನರಗಿಳಿ ಶೂರ್ಪಣಖೆಯನು |
ಕಲಹವಿಲ್ಲದೆ ಮೂಗುಕಿವಿಗಳನರಿದು ತಾಂ ಕಳುಹಿ ||
ನೆಲದೊಳೆನಗಾಸೂರ್ಯಚಂದ್ರರು |
ನೆಲಸಿರುವಪರಿಯಂತ ಕೊರತೆಯ |
ನಿಲಿಸಿದರು ಪಾಪಿಗಳು ತಮ್ಮಯ ಕೊಬ್ಬಿನುಬ್ಬಿನಲಿ ||೨೯

ಮಾವ ನಿನ್ನ ಸಹಾಯವಿರಲೀ |
ರಾವಣಂಗಿದಿರಾರು ಲೋಕದೊ |
ಳಾವಘನಪೌರುಷರು ಮಾನಿಸಪುಳುಗಳೆಂಬವರು ||
ಸಾವು ಸಮನಿಸದಂತೆ ಸೀತಾ |
ದೇವಿಯನು ಹಾರಿಸುವುಪಾಯವ |
ಭಾವಿಸುತೆ ಮನದೊಳಗೆ ನಿನ್ನಯ ಬಳಿಗೆ ಬಂದಿಹೆನು ||೩೦||

ಆಲಿಸೈ ಮುನ್ನಾ ಸ್ವಯಂವರ |
ಕಾಲದಲಿ ನೆರೆದಿರ್ದ ಪೃಥ್ವೀ |
ಪಾಲರಿದಿರೊಳು ಪೆದೆಯನೇರಿಸುವಾಗ ಬಿಲ್ಲುದಿಗೆ ||
ಲೋಲಲೋಚನೆಯಂದಚಂದದ |
ಮೇಲೆ ತನ್ನಯ ಮನವು ಮೋಹಿಸಿ |
ಕಾಲು ಜಾರಿದೊಡೆನ್ನನೀಕ್ಷಿಸಿ ನಕ್ಕಳೇಳಿಸುತೆ ||೩೧||

ಇಂದು ತಂಗಿಗೆ ಮಾನಭಂಗವು |
ಬಂದುದೀಕೆಯದೆಸೆಯಿನಲ್ಲದೆ |
ಸುಂದರಾಂಗಿಯನೊಂದಬೇಕೆಂಬಾಸೆ ತನಗಿಹುದು ||
ಒಂದು ಮೂರರದಿರಲಿ ಮಧ್ಯದ |
ಕುಂದಿನಿಂದೀ ನಮ್ಮ ಕುಲವೇ |
ಬೆಂದುದಿದಕಿಂದವಳನಪಹರಿಸುವುದೆ ಮುಯ್ಯಲ್ತೆ ||೩೨||

ಅಸುರಮುನಿ ಕೇಳಿದಕುಪಾಯವ |
ನುಸಿರುವೆನು ನೀನಲ್ಲದಿತರರಿ |
ಗಸದಳವಿದೆಂದರಿದು ಚಿಂತಿಸಿ ಬಂದೆನೊಲವಿನಲಿ ||
ಹುಸಿಯದಂದದೊಳೀಯಭೀಷ್ಟವ |
ನೆಸಗಿ ನನ್ನನು ಸಲಹು ನೀನೆಂ |
ದಸುರಪತಿ ಕುಲನಾಶಮಂತ್ರವನುಸುರಿದನು ಖಳಗೆ ||೩೩||

ಬೆಚ್ಚಿದನು ಮಾರೀಚನಂದಿನ |
ನಚ್ಚು ನೆನಪಿಗೆ ಬರಲು ರಾಮನ |
ಬಚ್ಚಣೆಯ ಬಾಣವದು ನಟ್ಟಂತಾಗೆ ಹೃದಯದಲಿ ||
ಸುಚ್ಚುಸೂರಾಯ್ತೆದೆಯು ಬಳಿಕಿರ |
ದೆಚ್ಚರೊಂದುತೆ ರಾಮನೆಂಬಾ |
ಕಿಚ್ಚು ಪರ್ಬುತೆ ದನುಜವಂಶವ ಸುಟ್ಟವೊಲು ಬಗೆದು ||೩೪||

ಬಂದನೇಸ್ಸೈ ದಾನವಾರಿಯು |
ತಂದನೇಸ್ಸೈ ಮರಣದೋಲೆಯ |
ಸಂದಿತೇಸ್ಸೈ ದನುಜರೈಸಿರಿಯೆಂಬ ಪೆರ್ಜೊಡರು ||
ಕಂದ ನಿನ್ನೀಬುದ್ಧಿಗಿಂದಿದ |
ತಂದು ಚಾಚಿದಳೇನು ಪಾಪಿನಿ |
ಮಂದಮತಿ ಚಲಗಾತಿ ಖಲರತಿಯಸತಿ ಮೂಕೊರತಿ ||೩೫||

ರೂಪವತಿ ತಾನೆನ್ನು ತವರೊಳು |
ಪಾಪಕೃತ್ಯಕ್ಕೆಳಸಲಿಂತು ವಿ |
ರೂಪವೆಸಗಿದರಿವಳಿಗಲ್ಲದೆ ಬೇರೆ ಕಾಣಿಸದು ||
ಚಾಪಲದೆ ಪುರುಷರೊಳು ಕಪಟಾ |
ಟೋಪವನು ನೆರೆ ತೋರ್ಪ ಪೆಣ್ಗಳಿ |
ಗೀಪರಿಯ ಮದ್ದರೆದೊಡಲ್ಲದೆ ಬುದ್ಧಿ ತಾಂ ಬಹುದೆ ||೩೬||

ರಾಮಲಕ್ಷ್ಮಣರಾರು ತಾನಾ |
ಭೂಮಿಸುತೆಯಾರೆಂಬುದನು ನೀಂ |
ಕಾಮವಶದಿಂ ಮನಕೆ ತಾರದೆ ಕೆಣಕಿ ಕೆಡಬೇಡ ||
ಈಮಹೀಭಾರವನು ತಗ್ಗಿಪ |
ನೇಮದಿಂದಿವರುದಯಿಸಿರ್ಪು |
ದ್ದಾಮಮಹಿಮರನಾದಿಪುರುಷಾನಂತಲಕ್ಷ್ಮಿಯರು ||೩೭||

ಖಲರ ಮಲಿನಾಚರಣೆಗಳು ಭೂ |
ತಲದೆ ವೃದ್ಧಿಯನೊಂದಲಾಗಳೆ |
ಕೆಲಕೆ ನೂಕುತೆ ಮತ್ತೆ ಸನ್ಮಾರ್ಗವನು ನಿಲಿಸಲ್ಕೆ ||
ಜಲಜನಾಭನು ಹಲವುವೇಳೆಯೊ |
ಳೊಲಿದು ಧರಣಿಯೊಳುದಿಸಿ ದುರುಳರ |
ಕೊಲುವನೆಂಬರಿವೆತ್ತಲಡಗಿತು ನಿನ್ನ ಚಿತ್ತದಲಿ ||೩೮||

ಮಗುವು ರಾಘವನೆಂದುಪೇಕ್ಷಿಸಿ |
ವಿಗಡವಿಶ್ವಾಮಿತ್ರನಾಶ್ರಮ |
ವುಗುತೆ ಪಿಂತೆ ಸುಬಾಹುವಾಸುಂ ಕಾಳೆಗವನೆಸಗೆ ||
ಬಗೆಯುತೆಮ್ಮನು ತೃಣದವೋಲ್ಕಿರು |
ನಗೆಯ ಪಸರಿಸುತಂಬೆರಡಸೆಡ |
ಲಗಲಿತಸು ತಮ್ಮಂಗೆ ಕೆಡೆದೆನು ನಾನು ಕಡಲೊಳಗೆ ||೩೯||

ಇರಲು ನಿಜರೂಪದೊಳು ರಾಘವ |
ಶಠಕೆ ತುತ್ತಹೆನೆಂಬ ಭಯದಿಂ |
ದುರುತಪಸ್ವಿಯ ಚರ್ಯೆಯಿಂದೀಬನದೆ ಜೀವಿಪೆನು ||
ಅರಿಯಲಾ ಖರದೂಷಣಾದ್ಯರು |
ಕಿರಿಯರೇ ಬಲದೊಳಗೆ ನೀನಿದ |
ನರಿದರಿದು ಮೇಲ್ವಾಯ್ವುದುಚಿತವೆ ತಾಟಕಾರಿಯೊಳು ||೪೦||

ಕಾಮಶರಕೀಡಾಗಿ ಸೀತಾ |
ಭಾಮಿನಿಯನುರೆ ಬಯಸಿ ಸುಜನ |
ಪ್ರೇಮವಿರಹಿತನಾಗಿ ಧರ್ಮವಿದೂರನೆಂದೆನಿಸೆ ||
ಭೂಮಿ ಹೇಸದೆ ಕೀರ್ತಿ ಮಾಸದೆ |
ನಾಮವಳಿಯದೆ ಮೃತ್ಯುವೆಳೆಯದೆ |
ರಾಮಬಾಣವು ನಿನ್ನ ಸದೆಯದೆ ಬಿಡುವುದೇ ಬರಿದೆ ||೪೧||

ಬೇಡಬೇಡಿಂತಹ ಕುಚೇಷ್ಟೆಯ |
ಮಾಡದಿರು ರಘುರಾಮನೊಡನಿಂ |
ತಾಡಿ ಕೆಟ್ಟರು ಮುನ್ನ ಹಲಬರು ದುರುಳತನದಿಂದೆ ||
ನೋಡುನೋಡುತೆ ಕೊಲುವ ಮಾರಿಯ |
ದಾಡೆಯಲುಗುವರುಂಟೆ ನಿನ್ನನು |
ಬೇಡಿಕೊಳ್ವೆನು ಮರಳು ಪುರಕೆಂದಸುರಮುನಿ ನುಡಿದ ||೪೨||

ರೋಗಿಗೌಷಧ ಸೇರದಂದದೆ |
ಭೋಗಿಗುರೆ ತಪ ರುಚಿಸದಂದದೆ |
ಯೋಗಿಗಾ ಸಂಸಾರ ಲೋಲತೆ ಸೊಗಸದಂದದಲಿ ||
ತಾಗಿದೊಡನೀಮಾತು ಕಿವಿಗಳಿ |
ಗಾಗ ರೋಷಜ್ವಾಲೆ ಕಿಡಿಯಿಡೆ |
ಬೇಗನೇಳುತೆ ಕಡುಗಗೊಂಡನು ಜಡಿದು ರಾವಣನು ||೪೩||

ಏನಿದೆಲವೋ ನಿನ್ನ ನುಡಿಗಳು |
ಭಾನುವಿದಿರೊಳು ತಿಮಿರವಿಹುದೇ |
ಶ್ಯೇನನಿದಿರೊಳು ಪಾರಿವಾಳವು ಸುಳಿದು ಜೀವಿಪುದೆ ||
ಜೇನುಹುಟ್ಟಿನೊಳೆರಗಿ ನೊಣವೆ |
ತ್ತಾನುಮುಳಿಯಲುಬಹುದೆ ತನಗಾ |
ಮಾನವರ ಪಡಿಗಟ್ಟಿ ನುಡಿವೆಯ ನಿಲಿಸು ನಾಲಗೆಯ ||೪೪||

ವೃದ್ಧನೆನ್ನುತೆ ನಿನ್ನ ಬಳಿಗಾಂ |
ಪೊದ್ದಿದುದಕಲೆ ನಾಲಗೆಯು ಮೊಳ |
ದುದ್ದ ಸಿಗುರಿತು ತನ್ನ ನಾರೆಂದರಿಯದೀಪರಿಯ ||
ಬುದ್ಧಿವಾದವ ಪೇಳುತಿಹೆ ನೀಂ |
ಕ್ರುದ್ಧಭಾವದೆ ನಿಂದೆನಾದೊಡೆ |
ಯುದ್ಧರಂಗದೆ ಕಾಲರುದ್ರನು ಸದ್ದುದೋರುವನೆ ||೪೫||

ಇರಲಿ ನಿನ್ನಯ ಹಲುಬು ತನ್ನಯ |
ಒರವಿಗುತ್ತರವೇನು ನೀನಾ |
ಹರಿಣರೂಪವನಾಂತು ಬರ್ಪೆಯೊ ಬಾರೆಯೋ ಪೇಳು ||
ಹರಣದಾಸೆಯದಿರ್ದೊಡೆನ್ನೊಡ |
ವೆರೆದು ಬರ್ಪುದು ತಪ್ಪಿದೊಡೆ ನಿ |
ನ್ನರಕೆ ಚಾಚುವೆ ಚಂದ್ರಹಾಸವನೆಂದು ಗರ್ಜಿಸಿದ ||೪೬||

ಕೇಳಿದೊಡನೆಯೆ ಭಯಪಯೋಧಿಯೊ |
ಳಾಳಿದನು ಮೈಬೆಮರಿತಾಕ್ಷಣ |
ಖೂಳನಿವನೊರೆದಂತೆ ನಡೆಸದೆ ಮಾಣನೆಂದೆನುತೆ ||
ಕಾಲವೊದವಿತು ತನಗವಿಾಕೇ |
ಡಾಳಿಯಿಂದಸು ತೊಲಗದಿರದು ಕೃ |
ಪಾಳುರಾಘವನಸ್ತ್ರಕಿದ ಬಲಿಯಾಗಲರ್ಪಿಪೆನು ||೪೭||

ದೂರಕೆಳೆದೊಯ್ಯುತ್ತುಮವನನು |
ಮೀರಿ ದಣಿಸಿದೊಡಿರದೆ ಕೋಪಿಸಿ |
ಕ್ರೂರಲಗಿನಿಂದೆನ್ನ ಸಂಹರಿಸುವನು ರಾಘವನು |
ಧಾರಿಣಿಯೊಳೀಸ್ಯೆಪು ಮತ್ತಿ |
ನ್ನಾರಿಗಾದೊಡಮುಂಟೆ ಮುಕ್ತಿಯ |
ಸಾರಿ ಸೇರುವೆನ್ನಿನ್ನ ನಾನೇ ಧನ್ಯನಹೆನೆಂದ ||೪೮||

ಅಳುಕಲೇಕಿನ್ನಿದಕೆನುತೆ ಮನ |
ದೊಳಗೆ ನಿರ್ಧರಿಸುತ್ತೆ ದನುಜನು |
ವಿಳಯರುದ್ರನ ತೆರದೆ ನಿಂದಿಹ ರಾವಣನ ನೋಡಿ ||
ಎಲವೊಪಾಪಿಯೆ ನನ್ನ ನುಡಿಗಳು |
ಫಲಿಸದಾದುವು ನಿನ್ನ ಚಿತ್ತದ |
ಚಲವಬಿಡೆ ನೀನಾದುದಾಗಲಿ ಬರ್ಪೆನೆಂದೊರೆದು ||೪೯||

ತೆರಳುವಾ ಮಾರೀಚನನು ಖಳ |
ರರಸನಾಗಳೆ ಕರೆದು ತನಗಿ |
ನ್ನರಿಯ ಗೆಲುವುದು ಸುಲಭವಾದುದು ಮಾವ ರಥವೇರು ||
ತರುಣಿಯನು ಕರೆತಂದು ಸಗ್ಗದ |
ಪರಮಸುಖವೊಂದೆಂದು ನಲವಿಂ |
ಪರಸಿನನ್ನೊಡನಿಂದು ಬಾರೈ ರಾಮನಾಶ್ರಮಕೆ ||೫೦||

ಒರೆದು ತಾ ನಿಂತಡರಿ ರಥವನು |
ಸುರವಿರೋಧಿಯು ಮನದಭೀಷ್ಟವ |
ಭರದೆ ಪಡೆದಪೆನೆಂದು ನಲಿದವನೊಡನೆ ಪೊರಮಟ್ಟು ||
ಪರಿಪರಿಯೊಳೊಪ್ಪುತಿಹ ಪಟ್ಟಣ |
ಗಿರಿವನಂಗಳ ದುರ್ಗನದಿಗಳ |
ನಿರದೆ ಕಳೆಯುತೆ ದಂಡಕಾ ವನಮಧ್ಯದೇಶವನು ||೫೧||

ಸೇರಿ ಕದಳೀವನದ ಮಧ್ಯದೆ |
ತೋರುತಿರ್ಪಾಶ್ರಮವನೊಂದನು |
ದೂರದಿಂದಮೆ ಕಾಣುತಿದು ಪೊಸತಾಗಿ ತೋರುತಿದೆ ||
ತೇರನಿಲ್ಲಿಯೆ ನಿಲ್ಲಿಸೆಂದಾ |
ಸಾರಥಿಗೆ ತಾಂ ಸೂಚಿಸಿಳಿದನು |
ನಾರುಮುಡಿಯನು ಧರಿಸಿ ಮಾವನೊಳೆಂದನಸುರೇಂದ್ರ ||೫೨||

ಮಾವ ಕೇಳೀಯಾಶ್ರಮವು ಪರಿ |
ಭಾವಿಸಲು ರಾಮನದು ನೀನೀ |
ಠಾವಿನಲಿ ನಿನ್ನಖಿಲಸಾಮರ್ಥ್ಯವನು ತೋರಿಸುತೆ ||
ವೇವಿಗೆಳಸಿದ ಹೊಮ್ಮಿಗವೊ ಎಂ |
ಬಾವಿಧದೆ ಮೋಹವನೆ ಪುಟ್ಟಿಸಿ |
ಭೂವಲಯಕದ್ಭುತವ ತೋರುತ್ತೊಲಿಸು ಜಾನಕಿಯ ||೫೩||

ಬಳಿಕ ಮಿಕ್ಕಿನ ಕಾರ್ಯವೆಲ್ಲವು |
ಸುಲಭವಾಗಿಯೆ ಸಿದ್ಧಿಸುವುದೈ |
ಬಲುಹಿನಿಂ ಕರವೆಳೆಯೆ ಕಾಯವು ತಾನೆ ಬಪ್ಪುದಲಾ ||
ಪಲವುಬಗೆಯನು ಮನಕೆ ತಾರದೆ |
ಚೆಲುವರೂಪವನು ಬೇಗ ತಾಳೆಂ |
ಬುಲಿವು ಹಿಂಚಿತು ಮುಂಚಿತಂತಹ ಪುಲ್ಲೆಯುಪವನಕೆ ||೫೪||

ಸುಳಿದುದದು ತಾನಿತ್ತಲತ್ತಲು |
ಮೆಲೆವನೆಯ ಸರಿಸದಲಿ ತೋರುತೆ |
ಕೆಲಕೆ ಸಾರುತೆ ಬಳಿಕ ಮಗುಳ್ಪೈದುತ್ತೆ ನಿಲ್ಲುತ್ತೆ ||
ಹಲವುಬಣ್ಣದೊಳ್ಪೈದೆ ರಂಜಿಸು |
ತಲುಗದಕ್ಷಿಗಳಿಂದೆ ನೋಡುತೆ |
ಸಲಿಯುಃ ತೊಪ್ಪುವ ಸೊಬಗ ಬೀರಿತು ಕನಕಮೃಗವಂದು ||೨೫||

ವ ಣಿಯುತಣಿಯುತ್ತರಸಿ ಪುಷ್ಪವ |
ಮನಕೆ ಬಂದುದ ತಿರಿದು ಮಡಿಲೊಳು |
ಜನಕನಾತ್ಮಜೆ ತುಂಬಿಯೆಲೆವನೆಯಿದಿರಿನುಪವನದೆ ||
ಮಿಸುಗುತಿಹಕಾಂಚನಮಯಾಂಗದ |
ಘನಮನೋಹರವಾದ ರೂಪಿಂ |
ದಸ್ಪಮಾನಮಿದೆನಿಪಮಿಗವನು ಕಂಡು ಮೋಹಿಸುತೆ ||೫೬||

ಏನಿದೆತ್ತಣಿನ್ಪೈದಿತೆರಳೆಯು |
ಕಾನನದ ಮೃಗಪೋತಕೀಪರಿ |
ಕಾನಕಾಂಗಮಿದಮಮ ಸೋಜಿಗಮಲ್ತೆ ಪರಿಕಿಸಲು ||
ಸಾನಿದನು ಪಡೆದಿಂದು ವಿಪಿನ |
ಗ್ಲಾನಿಯನು ಪರಿಹರಿಪೆನೆಂದಾ |
ಮಾನಿನೀಮಣಿ ಸಡಗರದೆ ಹೊದ್ದಿದಳು ವಲ್ಲಭನ ||೫೭||

ಮೆಲ್ಲನ್ಪೈತಂದಿದಿರೆ ನಿಂದಿಹ |
ವಲ್ಲಭೆಯನೀಕ್ಷಿಸುತೆ ರಾಮನು |
ಪಲ್ಲವಾಧರೆ ನಿನ್ನ ಬರವಿಂಗೇನು ಕಾರಣವು ||
ಇಲ್ಲದೇನುಂ ಬರಿದೆ ಬರ್ಪವ |
ಳಲ್ಲ ನಿನ್ನಯ ಮನದ ಬಯಕೆಯ |
ನಲ್ಲಳೇ ನೀಂ ನುಡಿಯೆ ಸಲಿಸುವೆನೆಂದನಾರಘುಜ ||೫೮||

ಇನಿಯನೊರೆದಿನಿವಾತನಾಲಿಸಿ |
ಘನಮನೋರಥವಾಂತೆನೆನ್ನುತೆ |
ವನಿತೆ ನುಡಿದಳು ಕಾಂತ ಕೇಳಿಂದೆಮ್ಮ ವನದೆಡೆಗೆ ||
ಕನಕಮಯಮೆನೆ ಮೆರೆವ ತನುವಿನ |
ವಿಸುತಹರಿಣವದೊಂದು ಬಂದಿಹು |
ಧೆನಗೆ ಮನದಭಿಲಾಷೆಯಿಹುದದನೊಂದಬೇಕೆಂದು ||೫೯||

ಎದ್ದು ಬಾ ತೋರುವೆನು ನಲ್ಲನೆ ।
ಮುದ್ದು ಮಿಗವನು ನಿನಗೆ ಮೆಲ್ಲನೆ ।
ಸದ್ದುದೋರದೆ ಬರ್ಪುದೆನ್ನೊಡನೆನುತೆ ಕೈವಿಡಿದು ॥
ಉದ್ದುರುಳ್ವನಿತರೊಳಗಾ ಮಿಗ ।
ಎದ್ದ ಠಾವನು ಸೇರಿ ಸೊಬಗಿಂ ।
ಕದ್ದು ನನ್ನಯ ಮನವನಚ್ಚರಿಗೊಳಿಪ ಮಿಗವಿದೆಕೊ ॥೬೦॥

ಸದಯ ನಿನ್ನನುರಾಗರಸಕಾ ।
ಸ್ಪದವು ನಾನಹುದಲ್ಲವೆಂಬುದ ।
ನಿದರಿನರಿಯಲುಬಹುದು ನೀನಿಂದಿರದೆ ಸಾಹಸದೆ ॥
ಚದುರತನವನು ತೋರಿ ಬಾಣದೆ ।
ನದೆದು ನೋಯಿಸದಂತೆ ನೀಂಪಿಡಿ ।
ದಿದನು ತಂದೆನಗೀಯೆ ಕಾಲವ ಕಳೆವೆನಿದರೊಡನೆ ॥೬೧॥

ಎಂದು ತನ್ನಯ ಮನದ ಕಾಂಕ್ಷೆಯ ।
ನಿಂದುಮುಖಿ ಬಿನ್ನೈಸಲಾ ರಘು ।
ನಂದನನು ಬಗೆ ತಣಿಯೆ ಮುದ್ದಿಸುತರಸಿ ಲಾಲಿಪುದು ॥
ಇಂದು ನಿನಗೀಬಣಗುಪುಲ್ಲೆಯ ।
ತಂದುಕುಡೆ ಮತ್ಪ್ರೇಮಸಿಂಧುವ ।
ನೊಂದಿದಳೆತೆಯು ಪೂರ್ಣಮಾಯಿತ್ತೆಂದು ಭಾವಿಪೆಯಾ ॥೬೨॥

ಸುಂದರಾಂಗಿಯೆ ನನಗೆ ನಿನ್ನೊಳ ।
ಗೆಂದುಮಿರ್ಪೊಲ್ಮೆಯನು ಪರಿಕಿಸೆ ।
ಬಂದೊಡಾಕಸ್ಮಿಕದೆ ನಿನಗೊಂದೆಡರು ನಾನೊಡನೆ ॥
ಮಂದರಾದ್ರಿಯನಾದೊಡಂ ಕೀ ।
ಳ್ತಂದು ಜಲಧಿಯ ನಡುವೆ ಸಾಹಸ ।
ದಿಂದೆ ಸೇತುವನಾದೊಡಂ ನೆರೆಕಟ್ಟಿ ಸಲಹುವೆನು ॥೬೩॥

ಆಗ ನೀಂ ಸಂತುಷ್ಟೆಯಾಗನು ।
ರಾಗದಾಳವದೆನ್ನೊಳಿಂತುಟಿ ।
ರಾಘವನೆ ನಾನರಿದುದಿಲ್ಲೆಂದೆನುತೆ ತಕ್ಕೈಸೆ ॥
ನಾಗವೇಣಿಯೆ ನನ್ನ ಜನುಮವ ।
ದಾಗ ಸಾಫಲ್ಯವನು ಪಡೆಯಲು ।
ಭೋಗಿಶಯನನ ಪದವಿಯಾಂತನ ತೆರದೆ ಸುಖಿಸುವೆನು ॥೬೪॥

ಇರ್ದೊಡಿಲ್ಲಿಯೆ ರಮಣಿ ನೀಂ ನಿಮಿ |
ಷಾರ್ಧದೊಳು ತಂದೀವೆನೆನ್ನುತೆ |
ಸಾರ್ದುಲಕ್ಷ್ಮಣನೆಡೆಯನೆಲ್ಲವನವನೊಳದನರಿಪಿ ||
ಪೊರ್ದಿತೆನಗೀವ್ಯಸನವಾದೊಡ |
ಮಿರ್ದು ಬಳಿಯೊಳು ಸೀತೆಯನು ಬಲು |
ಬರ್ದಿನಿಂ ಕಾದಿಹುದು ನೀನೆಂದೆಚ್ಚರಿಸಲವನು ||೭೫||

ಏನಿದಚ್ಚರಿಯಣ್ಣ ನೀನಿದು |
ಹೀನರಾಕ್ಷಸಮಾಯೆಯೆಂಬುದ |
ನೇನುಮರಿಯದನಂತೆ ಭ್ರಾಂತಿಯನೊಂದಿ ಗಮಿಸುವುದು ||
ಶ್ವಾನದೆಕ್ಕಲನೆರಳೆಯಂದವ |
ನಾನುತಾಮಾಯಾವಿದನುಜವಿ |
ತಾನವಾವಗಮಿಲ್ಲೆ ಚರಿಸುವುದೆಂದು ಕೇಳ್ದರಿಯ ||೭೬||

ಲೋಕದೊಳಗೀಪರಿಯಮೃಗವು ವಿ |
ಲೋಕಿಸುವೊಡಿಲ್ಲಾವದೆಸೆಯೊಳ |
ಮಾಕುಟೀರದ ಬಳಿಗೊಳಿಂದುದ್ಭವಿಸಿದಂತಿಹುದು ||
ಸೋಕಿ ಬೆರೆಯದೆ ಮಿಕ್ಕ ಮೃಗಗಳು |
ನೂಕಿ ಬೆದರುತೆ ಚದರಿಪೋಪುವು |
ಸಾಕು ಸಾಕಿದನರಿಯಬಾರದೆ ದೇವ ಕಣಡೆಂದು ||೭೭||

ತಮ್ಮ ನೀನಾಡಿದುದು ಸತ್ಯವು |
ಸಮ್ಮತವು ತನಗಾದೊಡಂ ಕೇ |
ಳೆಮ್ಮರಸಿ ಬಯಸಿದೊಡೆ ನಾನದಕೊಪ್ಪಿದೆನು ಬಳಿಕ ||
ಸುಮ್ಮನೇಕಳುಕುವುದು ನನಗೀ |
ಹೊಮ್ಮಿಗವು ನಿಜವಲ್ಲ ಖಳನೆಂ |
ದೊಮ್ಮೆ ತೋರ್ದೊಡೆ ಕಡಿದು ಬಿಸುಡುವೆನೇಕೆ ಸಂಶಯವು ||೭೮||

ಅರಸಿಯಿಹಳೆಡೆವಿಡದೆ ಕಾದಿರು |
ಬರುವೆನತಿಶೀಘ್ರದೊಳು ತಾನೆಂ |
ದರಸನಾಹರಿಣನನು ಬೆನ್ನಟ್ಟಲ್ಕೆ ಬಳಿಕಿರದೆ |
ತರತರದ ನಟನೆಗಳ ತೋರು |
ತ್ತರರೆ ಸಿಕ್ಕಿತು ಸಿಕ್ಕಿತೆನಿಸುತೆ |
ಭರದೆ ಮುಂದಕೆ ಚಿಮ್ಮಿ ನಿಲ್ಲುತೆ ನೋಡಿ ಪಿಂಗಡೆಗೆ ||೭೯||

ಬರುವನಿನ್ನೇಂ ಸರಿಸಕೆಂಬನಿ |
ತರೊಳು ಜಾರುತೆ ಮರಳಿ ನಿಲ್ಲುತೆ |
ಮರೆಯದೀಪರಿ ಬವಣಿಗೊಳಗಾಗಿಸುತೆ ರಾಘವನ ||
ಪರಿಪರಿಯ ಬಳಲಿಕೆಯನೀಯು |
ತ್ತಿರದೆ ವನದಿಂ ವನಕೆ ಸಾರುತೆ |
ಭರದಿನೊಯ್ದುದು ನೃಪನ ದೂರದೊಳುಳಿದುದಾಶ್ರಮವು ||೭೦||

ಜಲಜಸಖನಪರಾಬ್ಧಿಗಿಳಿವನು |
ಹಲವುಪಾಯಗಳೆಲ್ಲ ತೀರ್ದುವು |
ಹುಲುಮಿಗವು ಕೈಸೇರದಾಯಸವಾಂತುದೆನ್ನೊಡಲು ||
ತಿಳಿಯಲಿದು ಸಾಮಾನ್ಯಮಾಗಿರ |
ದೆಲೆವನೆಯು ಬಹುದೂರಮಾಯಿ |
ತ್ತುಲಿದನಾಗಳೆ ತಮ್ಮ ತಾನಿದು ಕಪಟಮೃಗವೆಂದು ||೭೧||

ಹಿರಿಯಮಕ್ಕಳು ಪುಷ್ಟಕಾಯರು |
ಕಿರಿಯವರು ಮೇಧಾವಿಗಳೆನು |
ತ್ತೊರೆವನಾಳ್ನುಡಿ ಸತ್ಯಮಾದುದು ನಮ್ಮ ವಿಷಯದಲಿ ||
ಅರಿಯದಿಂದೈತಂದಬಳಿಕಿ |
ನ್ನಿರುವುದೇನೀಖೂಳಮಿಗವನು |
ತರಿದು ಚರ್ಮವ ನೊಯ್ದು ತನ್ನಯ ರಮಣಿಗಿತ್ತಪೆನು ||೭೨||

ಎನುತೆ ಧನುವಿಂಗಾಗ ಬಾಣವ |
ನನುಗೊಳಿಸುತಿಸಲಾಗ ಹರಿಣನು |
ದನುಜರೂಪದೆ ಲಕ್ಷ್ಮಣನೆ ಹಾ ಸೀತೆ ಹಾ ಎನುತೆ ||
ವನಮದೆಲ್ಲವು ಮೊಳಗುವಂದದೊ |
ಳಿನಕುಲೇಶನ ಕೊರಲ ದನಿಯನೆ |
ಅನುಕರಿಸಿ ಮಿಗೆ ಕೂಗುತಸುವನು ಬಿಟ್ಟುದಾಕ್ಷಣವೆ ||೭೩||

ದುಗುಡವಾಂತನು ರಾಮನಾಗಳು |
ವಿಗಡರಕ್ಕಸಮಾಯೆ ಬಲ್ಲಿತು |
ಪುಗದೆ ಬಿಡದೀನುಡಿಯು ಸೀತಾಲಕ್ಷ್ಮಣರ ಕಿವಿಗೆ ||
ಬಗೆಬಗೆಯ ಬಗೆಗಳನು ಕಲ್ಪಿಸಿ |
ಹಗರಣವನೇಂತಹರೊ ಕಾಣೆನು |
ಮಗುವಲಾ ಸೌಮಿತ್ರಿಯೆಂದಾ ರಾಮನಳುಕಿದನು ||೭೪||

ತಾಳಲಾರೆನು ಹರಣದೆರೆಯನು |
ವೇಳೆಗಳೆವನದೇತಕರಿಯೆನು |
ಪಾಳುಮೃಗದಿಂದೇನು ಬಿಸುಟದನೇಕೆ ಬಾರನೊ ಹಾ ||
ಕಾಳುಮೂಳನೆ ಬಯಸೆ ಗದರಿಸಿ |
ಪೇಳಲಾರದೆ ಬುದ್ಧಿಯನು ತನ |
ಗಾಳುಗೆಲಸಕೆ ತೆತ್ತು ದೇಹವನೇಕೆ ದಣಿಸುವನೋ ||೭೫||

ಹರಿಣನಿಲ್ಲಿಗೆ ಬರಲದೇತಕೆ |
ಯಿರದೆ ನಾ ಸದನೆಳಸಲೇತಕೆ |
ತರುವೆನೆನ್ನುತೆ ತೆರಳಲೇತಕೆ ರಮಣನೇನಹನೋ ||
ಅರಿಯದೊಂದುಂ ಮನಕೆ ರಮಣನ |
ಬರವಿಗೇತಕೆ ತಡವೆನುತ್ತಾ |
ತರುಣಿ ಮಿಗೆ ಚಿಂತಿಸುವ ಸಮಯಕೆ ಕೇಳ್ದುದಾದನಿಯು ||೭೬||

ಬಿದ್ದುದೇನಿದುತನ್ನ ಕಿವಿಯೊಳು |
ಸದ್ದು ರಾಮನದಾಗದಿರದಿಂ |
ದದ್ದಿಪೋದುದೆ ಧರಣಿ ತಾನಕಟಬ್ಧಿಮಧ್ಯದೊಳು ||
ಬಿದ್ದರೋ ರವಿಶಶಿಗಳೆಳೆಗಿಂ |
ದುದ್ದವಹ ಸುರಮಾರ್ಗದಿಂ ಮೇಣ್ |
ಕದ್ದದೋವಿಧಿ ತನ್ನ ಮಂಗಳಸೂತ್ರದೈಸಿರಿಯ ||೭೭||

ಏನಿದಿಂತಾಯ್ತೆಂದು ಮೈದುನ |
ನೀನು ಕೇಳೆಯ ರಾಘವೇಶನ |
ದೀನಭಾಷಿತವಿದನು ಕೇಳಿಯುಮಿನ್ನು ಜೀವಿಪೆಯ ||
ನಾನುಭೂಮಿಜೆ ಜಡತೆಯಾಂತವ |
ಳೇನಬಲ್ಲೆನು ಕಷ್ಟವನು ಕೇಳ್ |
ನೀನಭಿಜ್ಞತೆಯಾಂತ ಮಾನವನಾಗಿ ಚಿಂತಿಸೆಯಾ ||೭೮||

ಪೋಗು ಪೋಗೈ ಲಕ್ಷ್ಮಣನೆ ನಿನ |
ಗೀಗ ವೇಳೆಯೆ ಚಿಂತಿಸಲು ನಡೆ |
ಬೇಗ ನಿಲ್ಲದಿರಾರ್ಯಪುತ್ರಗೆ ಜೀವಸಂಶಯವು ||
ಆಗುಹೋಗೇನೆಂಬುದರಿಯದೆ |
ಬಾಗಿಸಿದ ಶಿರದಿಂದೆ ಮುಂಗಡೆ |
ಕೈಗಳನು ಮುಗಿಯುತ್ತೆ ನಿಂದಿಹುದಕ್ಕೆ ಸಮಯವಿದೆ ||೭೯||

ಏನಿದೇನೀನಡೆಯು ತಕ್ಕುದೆ |
ನಾನಳಲಿ ನಿಂದೊರಲುತಿರಲುಂ |
ಹಾಸಿಯಾನದ ಮಾನವನ ತೆರದಿಂದೆ ವರ್ತಿಸುವೆ ||
ಮಾನವೇ ನಿಮ್ಮಣ್ಣನಾಪದ |
ವಾನುತಿರೆ ಹೆಚ್ಚಳವು ನಿನಗಿದು |
ಹೀನ ನಿಲ್ಲದೆ ತೊಲಗುತೊಲಗೆಂದುಲಿದಳಾ ಸೀತೆ ||೮೦||

ಕೇಳಿಯಾರ್ತಧ್ವನಿಯ ಲಕ್ಷ್ಮಣ |
ನಾಲಿಯಲಿ ನೀರ್ದುಂಬಿ ಸಂಶಯ |
ಜಾಲದೊಳು ಮನ ಸಿಲುಕಲೇನುಮನರಿಯದರೆಗಳಿಗೆ ||
ಮೇಲೆ ತಾಂ ನಿಶ್ಚೈಸಿ ರಾಕ್ಷಸ |
ಜಾಲವಲ್ಲದೆ ಕಾಣೆ ಲಕ್ಷ್ಮೀ |
ಲೋಲನಸುವಿಂಗುಂಟೆ ಕೊರತೆಯು ಸತ್ಯವೆಂದೆನುತೆ ||೮೧||

ಧರಣಿಜಾತೆಯ ನಿಷ್ಠುರೋಕ್ತಿಯ |
ಸರಕುಗೈಯದೆ ದೇವಿ ಕೇಳ್ವುದು |
ಸರಸಿರುಹಭವತಾತಗಳಿವುಂಟೆಂಬರೇ ತಾಯೆ ||
ಧರಣಿ ಮೇಣೀಸೂರ್ಯಚಂದ್ರರು |
ಮೆರೆವನಕ್ಷತ್ರಾದಿಗಳು ವಿಧಿ |
ವಿರಚಿತಾಂಡವಿದೆಲ್ಲ ಲಯಿಸೆಯುಮಳಿವದಿಲ್ಲವಗೆ ||೮೨||

ತಾಯೆ ನೀವೇ ಲಕ್ಷ್ಮಿ ನಿಮ್ಮಯ |
ನಾಯಕನೆ ಲಕ್ಷ್ಮೀಶನಿಂತಿರ |
ಲಾಯತವೆ ನಿಮಗಿನಿತು ಮರೆವೆಯು ದನುಜಮಾಯೆಯಿದು ||
ರಾಯರಾಘವವರನ ತೋರ್ಪೆನು |
ನೋಯಲಾಗದು ಮನದೆ ನಿಖಿಲಾ |
ನ್ನಾಯಮೂರ್ತಿಯ ಕಾಣ್ಬಿರನ್ನರೆಗಳಿಗೆಯೊಳಗೆನಲು ||೮೩||

ಅರಸನಳಲಿಂ ಕುದಿದು ಬೇವಾ |
ಪರಮಸಾಧ್ವಿಯ ಮನಕೆ ರುಚಿಪುದೆ |
ವೆರರು ಪೇಳುವ ನೀತಿವಚನವು ಕೇಳ್ದು ತತ್ಷಣದೆ ||
ಕೆರಳಿದಳು ಲಲಿತಾಂಗಿ ನಿನ್ನಯ |
ಪರಿಯೆ ಮತ್ತೊಂದಾಗಿ ತೋರ್ಪುದು |
ಪರಿದುದಾವೊದಲಿದ್ದ ಭಕ್ತಿಯು ನಮ್ಮೊಳಿಲೊ ನಿನಗೆ ||೮೪||

ತರುಣಿಯನು ರಕ್ಷಿಸುವುದೆಂದೊರೆ |
ದಿರಿಸಿ ಪೋಗಲು ನಿನ್ನ ನವಸ್ಥಿಪ |
ನೆರಡನೆಣಿಸುವೆಯೇನೊ ಪಾಪಿಯೆ ನಿನ್ನ ನುರೆ ಸುಡಲಿ ||
ಹರಣದೆರೆಯಂಗೊದವಲಾಪ |
ತ್ತರಿದರಿದು ಜೀವಿಪೆನೆ ನಾನಿ |
ನ್ನಿರಲುವಾರೆನು ತೊರೆವೆನಸುವನೆನುತ್ತೆ ಸಡಗರಿಸಿ ||೮೫||

ಸೆರಗನೆಳೆದದನಾಗ ಹೊಸೆಯುತೆ |
ಕೊರಲ ಸರಿಸಕೆ ಕೊಂಡುಪೋಗಲು |
ಭರದೆ ಲಕ್ಷ್ಮಣ ಬೇಡಬೇಡೆಂದೆರಗಿ ಪದಯುಗಕೆ ||
ದುರುಳರಸುರರು ನಿಮಗಪಾಯವ |
ನಿರದೆ ಹವಣಿಪರಾನು ಪೋಗಲು |
ತೆರಳುವೆನು ತಾನಾದುದಾಗಲೆನುತ್ತೆ ಪೊರಮಟ್ಟು ||೮೬||

ಶಿವಶಿವೇನಿಂತಾದುದೀಗಳ್ |
ಭುವನಮಾತೆಯ ಬುದ್ಧಿಗಂಥತೆ |
ಕವಿಯಿತೆನಲಿನ್ನುಳಿದ ಪೆಣ್ಗಳನೆಂದು ಫಲವೇನು ||
ನವೆದನೆಮಗಾಗೀತನೆಂಬುದ |
ಲವವುಮಂ ತಾಂ ಮನಕೆ ತಾರದೆ |
ಕಿವಿಗೆ ಸಲ್ಲದಮಾತನಾಡುತ್ತೆನ್ನ ನಟ್ಟಿದಳು ||೮೭||

ನಾರಿಯರುತಾಂ ಮೂರ್ಖೆಯರು ವಿಗೆ |
ಸಾರುತಿರ್ಪುವು ನೀತಿವಚನಗ |
ಳಾರಯಿದು ನೋಡಲ್ಕೆ ಸುಡಿವುವು ಸತ್ಯವನೆ ತಾವು ||
ದೂರದೃಷ್ಟಿಯೊಳಪ್ಪ ಸುಖವೇ |
ಸಾರವೆಂಬುದನರಿಯದಾಕ್ಷಣ |
ತೋರುತಡಗುವಸುಖವೆ ಸಾರವೆನುತ್ತೆ ನಂಬುವರು ||೮೮||

ಆವವಂಶವೆ ಕಿಡಲಿ ತಮ್ಮಿಂ |
ದಾವನುರುತರಕೀರ್ತಿಯಳಿಯಲಿ |
ತಾವದೇನಪದಶೆಯನಾಸಲಿ ಪಿಡಿದಚಲವದನು ||
ಆವುದೊಂದುಮನಮುವ ಬಗೆಯದೆ |
ಭಾವಕೇಪರಿ ತೋರ್ದುದದೆ ಸಂ |
ಭಾವಿತವು ತಾನೆಂದು ಸಾಧಿಪಯತ್ನವೆಸಗುವರು ||೮೯||

ಎಂದು ಲಕ್ಷ್ಮಣ ಮನದೆ ಚಿಂತಿಸು |
ತಂದು ಮುಂದಕೆ ನಡೆಯುತಲ್ಲಿಯೆ |
ನಿಂದು ಹಿಂದಕೆ ತಿರುಗಿ ನೋಡುತೆ ಮುಯ್ಯು ಹೀವರಿಸಿ ||
ಒಂದುದೆಲ್ಲವು ಬರಲಿ ತಾಂ ಪಡೆ |
ತಂದುದನು ಮತ್ತಾವನುಂಡಪ |
ನಿಂದು ತಾನಿಲ್ಲಿಹುದು ಮತವಲ್ಲೆಂದು ತೆರಳಿದನು ||೯೦||

ಅತ್ತ ಲಕ್ಷ್ಮಣನಂತು ತೆರಳ |
ಲ್ಕಿತ್ತ ರಾವಣನಿದುವೆ ಸಮಯಮೆ |
ನುತ್ತೆ ಭೂಮಿಜೆಯಿರ್ಪ ಪರ್ಣಾಗಾರದೆಡೆಗೈದಿ ||
ಚಿತ್ತಮೂವಳೊಳೀಸುದಿನ ನೆಲ |
ಸಿತ್ತೊ ತಾನಾಸುಂದರಾಂಗಿಯ |
ನೆತ್ತಿ ಮುದ್ದಿಟ್ಟೊತ್ತು ತಾಲಿಂಗಿಸುವೆನೆಂದೆನುತೆ ||೯೧||

ಉಟ್ಟ ಕಾಷಾಯಾಂಬರದ ಪಣೆ |
ಗಿಟ್ಟ ಸಿತಭಸಿತತ್ರಿಪುಂಡದ |
ದಿಟ್ಟಿಯನು ಸೆರೆಗೈವ ಭಸ್ಮವ ಧರಿಸಿದವಯವದ ||
ಜಟ್ಟಿಮುನಿಯಿವನಾವನೆಂಬವೊ |
ಲಟ್ಟಹಾಸದೆ ಜಗ್ಗುವಡಿಗಳ |
ನಿಟ್ಟು ರಾಮನ ಪಟ್ಟದರಸಿಯ ಮುಟ್ಟುವಾಸೆಯಲಿ ||೯೨||

ಬಂದು ಬಾಗಿಲ ಒಳಿಗೆ ನಿಂದನ |
ನೆಂದನಾರೌ ಗೃಹದೆ ಬಿಕ್ಷವ |
ತಂದು ನೀಡುವುದತಿಥಿಗೊಲಿದಪನಿಂದುಧರನಿಂದು ||
ಎಂದು ನುಡಿವಾ ಕಪಟವೇಷಿಯ |
ನಂದು ರಕ್ಕಸನೆಂಬುದರಿಯದೆ |
ವಂದಿಸುತ್ತರ್ಘ್ಯಾದಿಸತ್ಕಾರಗಳನಿರದೆಸಗಿ ||೯೩||

ಒಳಿಯೊಳವನತೆಯಾಗಿ ಕಾಂತನು |
ಬಳಿಯೊಳಿಲ್ಲದುದಕ್ಕೆ ಚಿಂತಿಸು |
ತಳುಕುತವನೈತರುವ ಮಾರ್ಗವ ಜಡದೆ ನೋಡುತಿಹ ||
ಲಲನೆಯನು ಕಾಣುತ್ತೆ ಮನುಮತ |
ನಲಗಿನಿಂ ಕಡುನೊಂದ ಹೃದಯದ |
ಖಳಶಿರೋಮಣಿಯಾಗ ಕೇಳಿದನಾ ಪತಿವ್ರತೆಯ ||೯೪||

ಚೆಲುವೆ ನೀನಾರಾರ ಕುವರಿಯು |
ತಿಳಿಪದಾವನು ನಿನ್ನ ರಮಣನು |
ಬಲಸಮನ್ವಿತರಸುರರಿರ್ಪೆಡೆಗೇತಕ್ಕೈದಿದಿರಿ ||
ಜಲಜಭವಸೃಷ್ಟಿಯಲಿ ಪಲಬರ |
ನಲಘುಲಾವಣ್ಯಾಂಗನೆಯರನು |
ಬಳಸಿ ಬಲ್ಲೆನು ಕಾಣೆ ನಿನ್ನಯ ರೂಪಿಗಿನ್ನೆಣೆಯು ||೯೫||

ಮಾನಿನೀಮಣಿಯಿದನು ನಂಬೆನ |
ಲೇನಿದಕಟಿವರಿಂತು ನುಡಿವರ್ |
ಧ್ಯಾನನಿಷ್ಠರಿಗೇಕೆ ಯುವತಿಯರಂದಚಂದಗಳು ||
ಮಾನವೇಶನದೇಕೆ ಬಾರದೆ |
ತಾನಿನಿತ್ತು ವಿಲಂಬವೆಸಗಿದ |
ನೀನವೀನನ ಬರವು ಮನಕುರುಭಯವನಿತ್ತಪುದು ||೯೬||

ಕಾಲಹರಣವನೆಸಗುತಿರಲಾ |
ಭೂಲಲಾಮರು ಬರುವರವರೀ |
ಯಾಳಿನಾಟಕೆ ತಕ್ಕುಪಾಯವ ತಾವೆ ಹವಣಿಪರು ||
ಕೇಳಿದೀತನ ನುಡಿಗೆ ಮರುನುಡಿ |
ವೇಳತೊಡಗುವೆನೀಗಳೆಂದಾ |
ಲೋಲಲೋಚನೆಯಾಗಳೊರೆದಳು ತನ್ನ ಸಂಗತಿಯ ||೯೭||

ಯತಿಯೆ ಕೇಳ್ಳೈ ನಾನು ಮೆರೆವಾ |
ಮಿಥಿಲೆಯಾಣ್ಮನ ಜನಕಭೂಪನ |
ಸುತೆಯು ತನ್ನನು ಕರೆದಪರು ಸೀತಾಭಿಧಾನದಲಿ ||
ಕ್ಷಿತಿಪದಶರಥಸಾರ್ವಭೌಮನ |
ಸುತನು ಸುಯಶೋನ್ವಿತನು ರಾಮನು |
ಪತಿಯು ತನಗವನೆಸೆವಯೋಧ್ಯೆಯ ರಾಜ್ಯಭಾರವನು ||೯೮||

ಪಿತನ ಸತ್ಯೋದ್ಧಾರಕೋಸುಗ |
ಜತೆಯೊಳುದಿಸಿದ ಭರತಗೊಲಿದಿ |
ತ್ತತಿಭಯಂಕರವಿಪಿನದೊಳ್ಪದಿನಾಲ್ಕುವತ್ಸರವ ||
ಹಿತದೆ ಕಳೆಯಲ್ಕಹಹ ಬಂದಿಹ |
ನತಿಪರಾಕ್ರಮಶಾಲಿ ಸುಗುಣಾ |
ನ್ವಿತನು ಸೋದರವರ್ಯಲಕ್ಷ್ಮಣಸಹಿತನೆನ್ನೊಡನೆ ||೯೯||

ಅರಸು ರಾಮನು ಸುಪ್ರಸಿದ್ಧನು |
ಪರಮಶಿಷ್ಟನು ಸತ್ಯಸಂಧನು |
ಸರಸನತಿಶುಚಿ ಬಹುದಯಾಪರಸುರುಗುಣಾರ್ಣವನು ||
ಸುರನರೋರಗದನುಜರೊಗ್ಗಾ |
ಗೆರೆಯನೊಳ್ಪ್ರತಿಭಟಿಸಿ ನಿಲಲುಂ |
ಧುರದೊಳವರರೆಗಳಿಗೆಯುಳಿಯರು ಕೇಳು ಪೌರುಷವ ||೧೦೦||

ಧರಣಿಯೊಳಗಣ ಸಾರ್ವಭೌಮರ |
ನೆರವಿ ಸೇರಿದುದಾ ಸ್ವಯಂವರ |
ವರಮಹಾಮಂಟಪದೆ ತನ್ನನು ವರಿಸುವಾದಿಸದೆ ||
ಹರನ ಧನುವನು ಸೆಳೆದು ನಾರಿಯ |
ಕೊರಲಿಗೇರಿಸಿ ಮೆರೆವ ನಾರಿಯ |
ಕೊರಲಿಗನುಗೊಳಿಸುವ್ರದು ತಾಳಿಯನೆಂದು ಮತ್ತಿತನು ||೧೦೧||

ಸಾರಲಿರದಾ ನೃಪರು ಚಾಪಕೆ |
ದೂರದಿಂ ನಮಿಸುತ್ತೆ ಸಾಗದೆ |
ಮೋರೆಗಳ ಜೋಲಿಡುತೆ ಸಿಂದಿದೆ ಕಂಡು ರಾವಣನು ||
ತೋರುವೆನು ಪೌರುಷವನೆನ್ನುತೆ |
ಮೀರಿ ಬಗ್ಗಿಸಿಯೊದೆಯಲದು ಕಾ |
ಲ್ಜಾರಿ ಬೀಳಲ್ಕ ಗೆಯೊಳದ್ದುದು ನೆರೆದ ನೃಪನಿಕರ ||೧೦೨||

ಎದ್ದನಾಗೆನ್ನರಸ ರಾಮನು |
ಸದ್ದು ನಿಂದುದು ರಾಜಸಭೆಯೊಳು |
ಹೊದ್ದಿದನು ಶಿವಧನುವನೆಡಗೈಯಿಂದೆ ಪಿಡಿದದನು ||
ತಿದ್ದಿ ನಾರಿಯನೊತ್ತಿ ಬಾಗಿಸೆ |
ಬಿದ್ದುದಿಳೆಗೆರಡಾಗಿ ಮುರಿದಂ |
ದಿದ್ದರೆಲ್ಲರು ಪಟದ ಬೊಂಬೆಗಳಂತೆ ಬೆರಗಿನಲಿ ||೧೦೩||

ಇನಿತು ಸತ್ವದೆ ಮೆರೆವ ಕಾಂತನ |
ಘನಪರಾಕ್ರಮವರಿಯದಿಲ್ಲಿಯ |
ದನುಜರಿದಿರಿಸಿ ಹರಣವಿತ್ತಗಮೋಘಶರಗಳಿಗೆ ||
ವಿನಯ ನೀನಾರಿತ್ತ ಬರನೇ |
ಕೆನಗೆ ಪೇಳುವುದೆಂದು ನುಡಿಯುವ |
ವನಿತೆಯಾನುಡಿಗೇಳಿ ರಾವಣನಾಗ ನಗುತೆಂದ ||೧೦೪||

ಹೇಳತೊಡಗಲೊ ತನ್ನ ಚರಿತೆಯ |
ಕೇಳುತದ ನೀಂ ಸುಮ್ಮನಿರ್ಪೆಯ |
ಕಾಳುಮನುಜನ ರಾಮನೆಂಬನ ಕೂಟ ಬೇಡೆನೆಯ |
ಪಾಳುಮನೆಯೊಳಗುರಿವ ದೀಪದ |
ವೋಲು ನಿನ್ನೀರೂಪು ವಿಫಲವು |
ಬಾಲೆ ನಿನಗನುರೂಪನೇನಾ ಮಾನವಾಧಮನು ||೧೦೫||

ದೇವದಾನವಯಕ್ಷಕಿನ್ನರ |
ರಾವಗಂ ನೆರೆ ಸೇವಿಸುತ್ತಿಹ |
ರಾವನಂ ತಾನಾವನಮರಾವತಿಯನೇಳಿಸುವ ||
ಠೀವಿಯಿಂ ರಾಜಿಸುವ ಲಂಕೆಗೆ |
ದೇವನೆನಿಪನೊ ಮೂರುಲೋಕವ |
ಕಾವನಾದಿತಿಜಪತಿಯಿಹೀಯ ತಿಯೆಂದು ತಿಳಿ ಯುವತಿ ||೧೦೬||

ತನ್ನ ನಾಮವ ಕೇಳಿದೊಡನೆಯೆ |
ಖಿನ್ನರಪ್ಪರು ದಿಕ್ಪತಿಗಳೆನ |
ಲಿನ್ನುಳಿದಪಂದೆಗಳ ಪಾಡೇಂ ತೆಗೆ ನರಾಧಮರ ||
ಮುನ್ನ ಗೈದಿಹ ತಪದ ಫಲದಿಂ |
ದೆನ್ನರಾಣಿಯರೆನಿಸಿ ಲೋಕದ |
ಮನ್ನಣೆಗೆ ಗುರಿಯೆನಿಸಿಕೊಂಡರು ಹಲವುಕನ್ನೆಯರು ||೧೦೭||

ಇಲ್ಲ ಕೇಳ್ಸರಿ ತನ್ನ ವೈಭವ |
ಕಿಲ್ಲ ಪಾಸಟಿ ಬಾಹುಬಲಕಿ |
ನ್ನಿಲ್ಲವಿಂದೆನ್ನಾಜ್ಞೆಗುಲ್ಲಂಘನೆಯು ಮೂಜಗದೆ ||
ಬಲ್ಲತನಕೆಣೆಯಿಲ್ಲ ವಿದ್ಯೆಗ |
ಳೆಲ್ಲವಡಗಿಹುವೆನ್ನ ಮೊಗದೊಳೆ |
ನಲ್ಲಳೇ ನೀನಿನ್ನು ಮನವೊಲಿದೆನ್ನ ವರಿಸುವುದು ||೧೦೮||

ತರಳೆಯೆನ್ನರಸಿಯರ ನಿನ್ನಯ |
ಪರಿಚರಿಯಕಿರಿಸುವೆನು ಕೇಳೆ |
ನ್ನರಮನೆಯುಮೆನ್ನೈಸಿರಿಯು ನಿನ್ನದು ವಿಚಾರಿಸಲು ||
ಹಿರಿಯುಮಗನೆನಿಸಿದೊಡಮವನಿಯ |
ಸಿರಿಯನೀಯದೆ ಜನಕನಟ್ಟಲು |
ಗಿರಿವನಂಗಳ ಸೇರಿ ಜೀವಿಸ ತಿರುಕನಲೆ ರಾಮು ||೧೦೯||

ಹರಿತಮಾದಲಗುಗಳು ನಾಂಟದ |
ಪರುಷಮಾಗಿಹ ಹೃದಯವಿದು ಸುಮ |
ಶರಕೆ ಪಕ್ಕಾದುದನು ನೋಡಲು ನಿನ್ನ ಮಹಿಮೇಕಣಾ ||
ವಿರಹದಾವಾನಲನ ಪೆರ್ಚಿಸಿ |
ಕರಗಿಸುತ್ತೆನ್ನೆದೆಯ ನೀರೆನ |
ಲರಲ ಸರಲಿಂಗೆಡೆಯ ಮಾಡಿದೆಯಲ್ತೆ ನೀನಿಂದು ||೧೧೦||

ಎಂದು ನುಡಿವಾದಶಮುಖನ ಪೂ |
ರ್ಣೇಂದುಮುಖಿ ನೋಡುತ್ತೆ ಭೀತಿಯ |
ನೊಂದಿ ಮನದೊಳು ಬೆಚ್ಚಿ ಬೆದರುತೆ ನಡುಗಿ ಕಳವಳಿಸಿ ||
ಮುಂದೆಯಗಲಿದಪುಲ್ಲೆ ಬಲೆಯೊಳ |
ಗೊಂದೆ ಸಿಲುಕುತೆ ಹೊಲಬುಗಾಣದೆ |
ನೊಂದು ನಾಲ್ಕುಂದೆಸೆಯನೀಕ್ಷಿಪ ಚಂದದಿಂದಿರದೆ ||೧೧೧||

ಹಿಂದೆ ಮುಂದಿಕ್ಕೆಲವ ನೋಡಿದ |
ಳಂದು ಕಾಣದೆ ಜನದ ಸುಳಿವನು |
ನೊಂದು ಜದಿಯನು ಬೈದು ಚೀರ್ದಳು ಗತಿಯದೇನೆನಗೆ |
ಇಂದದೇತಕೆ ಸಂಜೆಯಾದೊಡ |
ಮೊಂದಿ ಮುಂದಿರಕೈದದಿರ್ಪರು |
ಸುಂದರಾಂಗರು ರಾಮಲಕ್ಷ್ಮಣರೆಂದು ಹಲುಬಿದಳು ||೧೧೨||

ಬಳಿಕ ಚಿಂತಿಸಿ ಫಲವದೇನೆಂ |
ದಳುಕದೆಂದಳು ಕೇಳು ನೀಚನೆ |
ಕುಲಸಮಾಪ್ತಿಯನೆಳಸಿ ಬಂದೆಯ ಖುಲ್ಲ ರಾವಣನೆ ||
ಅಲಘುಶೌರ್ಯನೆನುತ್ತೆ ನಿರ್ಜನ |
ನಿಳಯದಲಿ ದಂಭವನು ತೋರುವೆ |
ಗಳಿಗೆ ತಾಳಿದೊಡಾಗ ಕಾಣಲುಬಹುದು ಪೌರುಷವ ||೧೧೩||

ಆರು ತಾನೆಂಬುದನು ತಿಳಿಯದೆ |
ಮೀರಿ ತುಟಿಗಳ ಮಾತನಾಡುವೆ |
ಧೀರ ಗುಣಗಂಭೀರ ರಾಘವನರಸ ನಾನಹೆನು ||
ಮೇರುವಂದದೊಳಚಲನಬ್ಧಿವೊ |
ಲಾರಿಗಂ ತಡೆಯಲ್ಕಶಕ್ಯನ |
ಪಾರಶೌರ್ಯನು ರಾಮನಾತನರಾಣಿ ನಾನಹೆನು ||೧೧೪||

ಸರ್ವಲಕ್ಷಣಸಂಪದನ್ವಿತ |
ಸುರ್ವಿಯಂದದೆ ಸಹನಶಾಲಿಯ |
ಖರ್ವಭುಜಬಲಸೆನಿಪ ರಘುಜನಪತ್ನಿ ನಾನಹೆನು ||
ಸರ್ವಧರ್ಮವಿನಾಶರೆನಿಸು |
ತ್ತುರ್ವಿ ಕೊರ್ವಿದ ದುಷ್ಟದನುಜರ |
ಗರ್ವಗಿರಿಪವಿದಾಶರಥಿಯಾ ಮಡದಿ ನಾನಹೆನು ||೧೧೫||

ಹರಿಯು ಭುಂಜಿಪ ವಸ್ತುವನು ಹುಲು |
ನರಿಯು ಕಾಂಕ್ಷಿಸಿ ಬದುಕಬಲ್ಲುದೆ |
ಕರಿಯಭುಜಗನ ಸರಸಕೆಳಸಿದ ನರನು ಜೀವಿಪನೆ ||
ಉರಿವಬೆಂಕಿಯನುಟ್ಟಬಟ್ಟೆಯೊ |
ಳಿರುಕಿಸುವೆನೆಂಬಾತಸುಳಿವನೆ |
ಧರೆಯ ಮೇಲುಳಿದಪನೆ ರಾಮನ ಸತಿಯನೆಳಸಿದವ ||೧೧೬||

ಶರಧಿಗೆಣೆಯೇ ಕಾಲುವೆಯು ಮದ |
ಕರಿಗೆ ಸಾಟಿಯೆ ಸೂಕರನು ಮೇಣ್ |
ಗರುಡನಿಗೆ ವಾಯಸವೆವರಕನಕಕ್ಕೆ ಕಬ್ಬಿಣವೆ ||
ಸುರಪನಿದಿರೊಳು ಹುಲುಕಿರಾತನೆ |
ಹರಿಗೆ ಸಮವೇ ಜಂಬುಕವು ನರ |
ವರಗೆ ರಾಮಂಗಿದಿರೆ ಪಿಶಿತಾಶನೆಂದಳಾ ಸಾಧ್ವಿ ||೧೧೭||

ವ್ರತದ ಜಪತಪದತುಲಫಲಗಳು |
ಪತಿಯ ಸೇವಾಮಾತ್ರದಿಂದಮೆ |
ಸತಿಗೆ ದೊರೆವುವು ಮೇಲೆ ಸದ್ಗತಿ ಕರತಲಾಮಲಕ ||
ಕ್ಷಿತಿಯೊಳಿದನಾಚರಿಸುತಿರ್ಪೆನ |
ಗಿತರವಿರ್ಪುದೆ ರಾಮನಲ್ಲದೆ |
ಗತಿ ಮನೋವಾಕ್ಕಾಯ ಸಾಕ್ಷ್ಯದೊಳವನ ನಂಬಿಹೆನು ||೧೧೮||

ಸಿರಿಯ ಸೊಬಗನು ಪೋಲ್ವ ಸೊಬಗೈ |
ಸಿರಿಯು ಧನದನ ಭಾಗ್ಯಕಿಮ್ಮಡಿ |
ಕರೆದೊಡಾಗಳೆ ಸಾಸಿರಾಳ್ಗಳು ಹೈಹಸಾದೆನುತೆ ||
ಕರವ ಜೋಡಿಸಿ ಸೇವಿಪುದುಮೇಂ |
ಹರಣದೆರೆಯನ ಚರಣಸೇವಾ |
ಪರಮಸಾಮ್ರಾಜ್ಯಾಭಿಷೇಕೋತ್ಸವ ಕೆಸರಿವಹುವೆ ||೧೧೯||

ಶೀಲವತಿಯಹ ಸತಿಯು ನಿಜಪತಿ |
ಯೊಳಿಗದೆ ದೇಹವನು ತೇಯುತೆ |
ಕಾಲಕಾಲದೊಳೊಪ್ಪುವುಪಚಾರಗಳನೊಲಿದೆಸಗಿ ||
ಜಾಲಗೆಯ್ಯದೆ ಸಕಲಕಾರ್ಯದೊ |
ಳಾಳಿಯಂದದೆ ನಡೆದು ಸಾಧ್ವೀ |
ಮೌಳಿಯೆನಿಸುತ್ತಿಹಪರಂಗಳ ಸೂರೆಗೊಂಡಪಳು ||೧೨೦||

ಭಂಡದನುಜಾಧಮನೆ ನಿನ್ನಯ |
ಗುಂಡಿಗೆಯನಿರದಿರಿವ ಸುಭಟರ |
ಗಂಡ ರಿಪುಭೇರುಂಡ ರಘುಜೋದ್ದಂಡನೈತಹನು ||
ದಿಂಡುದರಿಯುತೆ ನಿನ್ನ ಕೊಬ್ಬಿದ |
ಖಂಡವನು ನೆರೆ ಕಿತ್ತು ರಕುತವ |
ಕೊಂಡು ಭೂತಂಗಳನು ತಣಿಪುವ ಭೂಪನೈತಹನು ||೧೨೧||

ದುರುಳ ನಿನ್ನೊಡಹುಟ್ಟಿದವಳಿಗೆ |
ಮರೆಯದಂದದ ಗುರುತನೊಡರಿಸಿ |
ಖರನ ಸಂಹರಿಸಿರ್ಪ ದಾನವಕಾಲನೈತಹನು ||
ಧರೆಯ ಭಾರವ ತಗ್ಗಿಸುವೆನೆಂ |
ದುರುವಭಾಷೆಯನಿತ್ತು ಮುನಿಜನ |
ಕಿರದೆ ಕಾರ್ಯೋದ್ಯುಕ್ತನಾಗಿಹ ದೇವನೈತಹನು ||೧೨೨||

ಪೆರರ ಸತಿಯರಿಗಳುಪಿದಧಮನ |
ಭರದಿನೊಯ್ವರು ಯಮನ ಕಿಂಕರ |
ರುರುಳಿಸುವರಾ ಘೋರಕುಂಭೀಪಾಕನರಕದೊಳು ||
ಅರುಚಲಯ್ಯೋ ಎಂಬರಿಲ್ಲವು |
ಸರಿಯಲತ್ತಿತ್ತಿರಿದು ಶೂಲದೊ |
ಳುರಿಗೆ ನೂಕುವರರಿಯ ನೀನಿದನೆಂದಳಿಂದುಮುಖಿ ||೧೨೩||

ನುಡಿಯುತಿಂತವನಿಜೆಯು ಮತ್ತೊಡ |
ನೊಡೆಯನೈತಹ ದೆಸೆಯ ನೋಡುತೆ |
ಸಡಿಲವಾಗಲು ಮನದ ಬಯಕೆಯು ಕೂಡೆ ಕಡುಬೆದರಿ ||
ಮಡದಿಮಣಿ ಕಂಗಿಡುತೆ ಬಿಸುಸು |
ಯ್ದೊಡೆಯ ಕಂಭವನೊರಗೆ ನಿಟ್ಟಿಸಿ |
ತಡೆದೊಡೆನ್ನಯ ಕಾರ್ಯ ಕಿಡುವುದೆನುತ್ತೆ ರಾವಣನು ||೧೨೪||

ಎಲೆಗೆ ನಿನ್ನನು ವರಿಸುವುದಕಾ |
ಹಲವುಜೋಹವ ಧರಿಸಿ ಬಂದವ |
ರೊಳಗದಾವನೊ ನನ್ನ ವೇಷವನೊಂದಿಯೈತಂದು ||
ಫಲವನೊಂದದೆ ಪೋದವೂತ್ರದೆ |
ನೆಲದೊಳಗ್ಗಳನೆಸಿಪ ರಾವಣ |
ನಳುಕಿದನು ಧನುವೆತ್ತಲೆಂಬೆಯ ನೋಡು ನೀನವನ ||೧೨೫||

ಹತ್ತುತಲೆಗಳು ತೋಳ್ಗಳಿಪ್ಪ |
ತ್ತೆತ್ತಣದ್ಭುತಕಾಯವೀಕ್ಷನ |
ನೆತ್ತಿಗೆಣ್ಣೆಯನೆತ್ತಣಿಂ ತಂದೊತ್ತಿದಳೊ ತಾಯಿ ||
ಎತ್ತಿದಾತೋಳ್ಬೀಳದಾಗದೆ |
ತೊತ್ತುಗಳ ಸಂದಣಿಯು ದಣಿಯದೆ |
ಹೆತ್ತವರಿಗುಬ್ಬಸವನೀಯದೆ ಬಳೆದುದೇ ಶಿಶುವು ||೧೨೬||

ಎಂದು ನೋಡಿದ ಜನದ ಕಣ್ಮನ |
ಕೊಂದಿಸುತೆ ವಿಸ್ಮಯವ ಕಾರ್ಮುಗಿ |
ಲೊಂದದೇಕಿಳೆಗಿಳಿದುದೆಂಬಂತೆಸೆಯುತಿದಿರಿಸಲಿ ||
ಸುಂದರಾಂಗಿಯನೊಲಿಸಲಿದು ತ |
ಕ್ಕಂದವಾಗಿಹುದೆಂದು ಗರ್ವಿಸಿ |
ಮಂದಮತಿಯೊಲವಿಂದೆ ಸಿಂದಿರೆ ಸೀತೆ ಬೆದರಿದಳು ||೧೨೭||

ಮುಗುದೆ ನೋಡೀಗೆನ್ನ ಚೆಲುವನು |
ಬಗೆಗಿದೊಪ್ಪಿತೆ ಪೇಳು ನಿಜವನು |
ಜೊಗಸೆಗಣ್ಗಳ ತೃಷೆಯ ಕಳೆದುಕೊ ನೋಡಿ ಮನ ತಣಿಯೆ ||
ಪುಗುತುಮಳಕಾವತಿಯ ಯಕ್ಷರ |
ಹಗರಣಂಗೊಳಿಸುತೆ ಕುಬೇರನ |
ಗಗನಯಾನವನಾವಿಮಾನವ ತಂದಭಟನಾನೆ ||೧೨೮||

ಹಲವುಪರಿಯೊಳು ಶಿವನ ಭಜಿಸು |
ತ್ತೊಲಿಯದಿರಲವನಾಗ ಕೆರಳು |
ತ್ತಲುಗಿಸಿದೆನಾರಜತಗಿರಿಯನು ತೋಳ ಬಲುಹಿಂದೆ ||
ಅಳುಕಿದಳು ಪಾರ್ವತಿಯು ಬಳಿಕಾ |
ನೆಳಸಿದಿಷ್ಟವನೆಲ್ಲ ಪಶುಪತಿ |
ಸಲಿಸಿದನು ನೀಂ ಕೇಳ್ದುದಿಲ್ಲವೆ ಎಂದು ಖಲನೊರೆದು ||೧೨೯||

ಧರೆಯು ಬಿರಿದತ್ತೆಂಬವೋಲೊದೆ |
ದಿರದೆ ಝುಂಕಿಸಿ ಕರವನೀಡುತೆ |
ಧರಣಿಜೆಯ ಸಿರಿಮುಡಿಗೆ ಹಾಯ್ದನು ಘೋರದಾನವನು ||
ಸುರರು ನಭದಲಿ ಬೇಡಬೇಡೆಂ |
ದಿರದೆ ಕೂಗಲು ಗಣನೆಗೆಯ್ಯದೆ |
ಪರಿಮಳದೆ ಮಗಮಗಿಪ ಜಡೆಯನು ಬಿಡದೆ ತುಡುಕಿದನು ||೧೩೦||

ಭೂಮಿದೇವಿಯ ಗರ್ಭಕೋಶದೊ |
ಳೀಮಹಾಸತಿಯಿರ್ದ ಕಾಲದೆ |
ಕೋಮಲತೆವಡೆದಿವಳ ಕಚಭರಕಿಲ್ಲದಿಹ ಕೊರತೆ ||
ಕಾಮುಕನ ಕಡುಮೂರ್ಖದನುಜನ |
ವಾಮಕರದಾಂಕಿನಲಿ ನೊಂದುದೆ |
ಹಾಮಹಾದೇವೆನುತೆ ಚೀರ್ದುದು ಮೇಲೆ ಸುರನಿಕರ ||೧೩೧||

ಜಡಿದು ಮುಡಿಯನು ಸೆಳೆದು ಕೈನೆಯೆ |
ನಡೆ ಭರದೆ ನಡೆಯೆಂದು ಗರ್ಜಿಸು |
ತೊಡನೆ ತಂದನು ಕುಕ್ಕರಿಸಿದನು ತನ್ನ ರಥದೊಳಗೆ ||
ಒಡಲ ಕೊಂಕಿನ ನಡುಗುವಂಗದ |
ದಡದಡಿಸುತಿಹ ಮನದ ಮಾನಿನಿ |
ಕಡುಬಡವೆಯಾತೆರದಿನಿದ್ದಳು ರಾಮರಾಮೆನುತೆ ||೧೩೨||

ಮೂರನೆಯಸಂಧಿ ಸಂಪೂರ್ಣಂ.

## ನಾಲ್ಕನೆಯಸಂಧಿ.

ಸೂ|| ಭರದೆ ತಡೆದ ಜಟಾಯುವನು ಸಲೆ |
ತರಿದು ರಾವಣನೈದಿ ಲಂಕೆಯೊ |
ಳಿರಿಸಿದನು ಸೀತೆಯನಶೋಕೊದ್ಯಾನಮಧ್ಯದಲಿ ||

ಎತ್ತಲಿರ್ಪೆಯೊ ರಮಣ ನೀನಿಂ |
ದೆತ್ತಲಿಪ್ಪೆಲೈ ಲಕ್ಷ್ಮಣನೆ ಖಳ |
ನಿತ್ತಲೊಯ್ವನು ಪಿಡಿದು ನನ್ನನು ನೀವದೆಲ್ಲಿಹಿರಿ ||
ಒತ್ತಿದುದು ಮುಳ್ಳೆನ್ನ ಚರಣಕೆ |
ನುತ್ತುಮಾನಿರಲೆನಿತೊ ಮರುಗುತೆ |
ಸುತ್ತಿಕೊಂಡುಪಚಾರವೆಸಗುವ ಹಿತರದೆಲ್ಲಿಹಿರಿ ||೧||

ಹೆತ್ತ ತಾಯ್ತುಂದೆಗಳು ಸಟೆ ನೀ |
ಸುತ್ತಮೋತ್ತಮನೆನುತೆ ನಿನ್ನನೆ |
ಹತ್ತಿಕೊಂಡಿಹಳಲ್ಲುಪೇಕ್ಷೆಯೆ ದೇವ ರಾಘವನೇ ||
ಮಿತ್ತುವಿನ ಬಾಯ್ದುತ್ತೆನೆಪ್ಪೀ |
ಮತ್ತಕಾಶಿನಿಯನುರೆ ಬಿಡಿಸಲು |
ಮತ್ತದಾವಂಗಳವು ಪುರುಷೋತ್ತಮನೆ ನೀಂ ಬಿಡಿಸಾ ||೨||

ಕೊಂಡು ಪೋಪನು ಲಂಕೆಗೆನ್ನನು |
ಚಂಡದನುಜನು ರಾವಣನು ಕಡಿ |
ಕಂಡವೆಸಗಿಂದಿವನನೆನ್ನನದೇಕೆ ಬಿಡಿಸದಿಹೆ ||
ಭಂಡನಿವನೇಂ ನಿನಗಸಾಧ್ಯನೆ |
ಖಂಡಪರಶುವಿನಾ ಮಹಾಧನು |
ಗಂಡುಗಿಡದೇ ನಿನ್ನ ವಿಕ್ರಮಚಂಡದೋರ್ಬಲಕೆ ||೩||

ತಂದೆತಾಯ್ಗಳನುಜ್ಞೆವಡೆಯದೆ |
ಸಂದಮಾವನ ಬುದ್ಧಿಗೇಳದೆ |
ಚಂದವಲ್ಲೆಂಬತ್ತೆನಾದಿನಿಯುರನು ತಾಂ ಮೀರಿ ||
ಬಂಧುಗಳ ಕಡೆಗಣಿಸಿ ಬೇಡಕ |
ಟೆಂದ ಪೌರರನೆಲ್ಲ ಧಿಕ್ಕರಿ |
ಸಿಂದು ನಿನ್ನನೆ ನಂಬಿ ಬಂದೀತರಳೆಗೀವಿಧಿಯೇ ||೪||

ಅಂದು ನೀನೆಂದುದನು ಕೇಳದೆ |
ಬಂದುದಕ್ಕೆನಗಿನಿತು ಶಿಕ್ಷೆಯೆ |
ಕುಂದು ನಿನ್ನಯ ಕುಲಕಿದೆಂಬುದನಿಂದು ಮರೆದಪೆಯಾ ||
ಸುಂದರಾಂಗನೆ ನಿನ್ನ ಸುದತಿಯು |
ನೊಂದಳೈ ಬಲು ಬೆಂದಳೈ ನೀಂ |
ಬಂದು ಬಿಡಿಸಾ ಸೆರೆಯನೆಂದೇಣಾಕ್ಷಿಯೊರಲಿದಳು || ||೫||

ಬಾರೊ ಬಾರೋ ನೀರ ನಿನ್ನೀ |
ನಾರಿಯನು ಬಲುಹಿಂದೆ ದುರುಳನು |
ಚೋರನಂದದೊಳೆಳೆದುಕೊಂಡೊಯ್ದಪನು ಪರಿಭವಿಸಿ ||
ಮೀರಿ ಭೂಮಿಯ ನಿವನು ಕಡಲನು |
ಸೇರುವನಿತರೊಳೆನ್ನ ಬಿಡಿಸೈ |
ಸಾರಸಾಕ್ಷನೆ ಬಳಿಕ ತೃಣವೇ ಬೆಟ್ಟವಪ್ಪುದಲಾ ||೬||

ರಾಮ ರಕ್ಷಿಸು ಸಕಲಜಗದಭಿ |
ರಾಮ ರಕ್ಷಿಸು ವೈರಿವಂಶವಿ |
ರಾಮ ರಕ್ಷಿಸು ರಕ್ಷಿಸಕಟಾ ನೀನನಾಥೆಯನು ||
ಪ್ರೇಮದಿಂದೊಡಗೂಡಿ ನಿನ್ನಯ |
ನಾಮಮಾತ್ರವ ಭಜಿಸಲದು ಸು |
ತ್ರಾಮಪದವಿಯ ಸೂರೆಗುಡುವುದೆನಿಪ್ಪ ನುಡಿ ಹುಸಿಯೆ ||೭||

ದೇವ ನಿನ್ನಯ ಪಾದಪೂಜೆಯೆ |
ಭಾವಿಸಲ್ಕನಗಖಿಲಮೆಂದೇ |
ಸೇವಿಸುತ್ತಿಹಮಡದಿಯೊಳಗಿಂತೇಕೆ ಖತಿ ನಿನಗೆ ||
ಜೀವಿತೇಶನೆ ಬೇಗನೈದೀ |
ಗಾವಿಲನ ಕೈಯಿಂದೆ ಬಿಡಿಸೈ |
ಕಾವನೇ ನೀಂ ಕಾಯದಿರಲಿನ್ನಾರು ಕಾವವರು ||೮||

ಎಲೆಲೆ ವನದಭಿಮಾನದೇವತೆ |
ಗಳಿರ ನಿಮಗಿದೊ ಕರವ ಮುಗಿವೆನು |
ಬಲುಹಿನಿಂ ರಾವಣನು ನಿನ್ನಯ ಮಡದಿ ಸೀತೆಯನು ||
ಪಲತೆರದೆ ಬೇಡಿದೊಡಮೋವದೆ |
ಕಳವಿನಿಂ ಸೆಳೆದೊಯ್ದನೆಂದಾ |
ಯಿಳೆಯರಮಣಂಗೊರೆವುದೌ ನೀವಲ್ತೆ ಗತಿ ತನಗೆ ||೯||

ವನದ ವೃಕ್ಷಂಗಳಿರ ನೀವೆ |
ನ್ನಿನಿಯನೈತರಲವನೊಳೊರೆವುದು |
ತನಗೆ ಸಾಜವೆನಿಪ್ಪ ಶಕ್ತಿಯದಿರ್ಪಪರಿಯಂತ ||
ದನುಜನಿಗೆ ವಶೆಯಾಗೆನೆಂದದು |
ಕೊನೆಯನೈದುವವೇಳೆ ಸಮನಿಸೆ |
ತನುವನೀಗುವೆನೆಂದುಮರಿಕೆಯಗೈದಳಿವಳೆಂದು ||೧೦||

ಅನಿತರೊಳು ನೀಂ ಬಂದು ಬಿಡಿಸುವು |
ದೆಣಿಸಲಾಗದು ಬೇರೆಪರಿಯನು |
ಜನಕರಾಜರ್ಷಿಯೊಳು ಜನಿಸಿದಳೆನಿಸಿಕೊಳುತಿಹೆನು ||
ಮನದೆ ಸಂಶಯಕೆಡೆಯನಿತ್ತೊಡೆ |
ಮನುಕುಲೇಶನೆ ಸತ್ವಗುಂದು |
ತ್ತಣುವ ಘನವಾಗೆಣಿಸಿ ಮಾಳ್ಪುದನುಳಿವೆ ಬೇಸರದೆ ||೧೧||

ತನ್ನ ಪಾತಿವ್ರತ್ಯವಹ್ನಿಗೆ |
ನಿನ್ನ ಸಾಹಸಮೆಂಬ ಮರುತನ |
ನಿನ್ನು ಸೇರಿಸಿ ದಹಿಸು ದಾನವವಂಶಕಾನನವ |
ಗನ್ನಗತಕವಿದಲ್ಲ ನಂಬುವು |
ದೆನ್ನ ನುಡಿಗಳನೆಂದು ಸೀತೆಯು |
ಬಿನ್ನವಿಸಿದಳು ಕರವ ಜೋಡಿಸುತೆನ್ನಿ ಮತ್ಪತಿಗೆ ||೧೨||

ಇಂತು ಹಲವಂದದಲಿ ಹಲುಬುತೆ |
ಕಾಂತನಾಮಸ್ಮರಣೆಮಾಡುವ |
ಕಾಂತೆಯನು ಕೊಂಡಂತರಿಕ್ಷದೆ ಪೋಪ ರಾವಣನ ||
ಮುಂತೆ ವೃಕ್ಷದ ತುದಿಯೊಳಿದ್ದು ಸ |
ಮಂತು ನಿಟ್ಟಿಸುತಾ ಜಟಾಯುವು |
ಚಿಂತೆಯೊಂದುತ್ತಾಗ ತಡೆದನು ನುಡಿಸಿದನು ಖಳನ ||೧೩||

ಏನಿದಕ್ಕಟ ವಿಶ್ರವಸ್ಸಿನ |
ಸೂನುವೇ ಕಥೆಗಳೊಳ್ಳು ನಿನ್ನನು |
ದಾನಿ ಬಹುಧರ್ಮಾತ್ಮನೆಂದೊರೆವುದನು ಕೇಳ್ದಿಹೆನು ||
ದಾನವೇಶ್ವರನೆನಿಸುತೀಪರಿ |
ಮಾನಹೀನನವೋಲಕಾರ್ಯವಿ |
ದೇನನೆಸಗಿದೆ ಮೂರುಲೋಕದ ವೀರಗಿದು ಸರಿಯೆ ||೧೪||

ಎಲವೊ ನೀನಿಂದಿವಳನಾರೆಂ |
ದೊಲಿಸಲಿಚ್ಛೈಸಿಂತು ಕಪಟವ |
ಬಳಸಿಯೀಪರಿ ಪಿಡಿಯುತೊಯ್ವೈ ನಿನಗೆ ತೀರುವುದೇ ||
ಹಲವುಲೋಕವ ಸೃಜಿಸಿ ಸಲಹುತೆ |
ವಿಲಯವೆಸಗುವನಾದಿಪುರುಷನ |
ಲಲನೆಯೊಲಿವಳೆ ಪಾಪಿ ತೆಗೆ ನಿನಗೇಕೆ ದುರ್ವ್ಯಸನ ||೧೫||

ಅರಸನೆನಿಪವನಾತ್ಮಧರ್ಮಕೆ |
ಕೊರತೆ ಬಾರದ ತೆರದೆ ನಡೆವುದು |
ಪರಸತಿಯರನು ನಿಜಸಹೋದರಿಯರವೊಲಾದರಿಸಿ ||
ಧರೆಯ ಪಾಲಿವುದಿದುವೆ ನೀತಿಯು |
ಮರೆತು ನೀನಿದನಿಂತು ಕಾಮುಕ |
ರೆರೆಯನಾಗೀಲೋಕಮಾತೆಯೊಳೆರಡನೆಣೆಸಿದೆಯಾ ||೧೬||

ನಿಲಿಸು ರಥವನು ತಾಯನಿಳಿಸೆಲೆ |
ಖಲನೆ ನಾ ನಾ ರೆಂಬುದರಿಯೆಯ |
ಬಲುಮೆಯೊಂದಿದ ಗೃಧ್ರರಾಜನು ನಾಂ ಜಟಾಯುಕಣಾ ||
ಕಲಕುವೆನು ನಿನ್ನೊಡಲ ರಕುತವ |
ನೆಲವೊ ನನಗಿದಿರಾಗು ನಿನ್ನಯ |
ಹಲವು ತಲೆಗಳಿಗಾನು ಬೆದರೆನು ನೋಡು ತನ್ನದಟ ||೧೭||

ಎನುತೆ ಪಾರುತೆ ನಭಕೆ ತನಗು |
ಳ್ಳನಿತು ಶಕ್ತಿಯನಾಂತು ರಥವನು |
ಹಣಿದವಾಡುವೆನೆನುತೆ ರೆಕ್ಕೆಯೊಳೆರಗುತಪ್ಪಳಿಸೆ ||
ಝುಣಝುಣಧ್ವನಿಗೈದು ಘಂಟೆಗ |
ಳೆಣಿಸಲಸದಳವಾಗಲುದುರಿದು |
ವಣಿಯರಂ ಕೆಟ್ಟಳಕವಾದುವು ರಥದ ಕೀಲುಗಳು ||೧೮||

ಜೋತ ತೊಂಡೆಯ ಪಣ್ಗೆ ವಾಯಸ |
ವಾತುರದೊಳೆರಗುತ್ತೆ ಶಬರನ |
ನೂತನದ ಬಲೆಗಿರದೆ ಸಿಲುಕಿದ ತೆರದೊಳೀದಿನದೆ ||
ಸೀತೆಯನಃ ಸಲೆ ಬಯಸಿ ನನ್ನೀ |
ಘಾತಕೆಡೆಯಾಗೀಗಳೆರಗುವ |
ರೀತಿಯೊದವಿತು ನಿನಗೆ ಕೊಳ್ಳೆಂದೆನುತೆ ಕೊಕ್ಕಿನಲಿ ||೧೯||

ಕುಕ್ಕಿಯಾತನ ತನುವ ರಕುತವ |
ದುಕ್ಕುವಂದದೆ ಬಗಿದು ಕಾಲ್ಗಳಿ |
ನಿಕ್ಕಿ ಸೂತನ ಕೊಂದು ರಥವಾಜಿಗಳ ಖಂಡಿಸಲು ||
ಪಕ್ಕಿಗೇನೀಶೌರ್ಯವೆನ್ನು |
ತ್ತ್ರಕ್ಕಜಂಗೊಂಡಾಗ ಖಳ ದು |
ವ್ಮಿಕ್ಕಿ ಧಾರಿಣಿಗಿರದೆ ಧನುವಿಂಗಸಮಬಾಣವನು ||೨೦||

ಅಳವಡಿಸುತೆಸೆಯಲ್ಕೆ ತಾನಂ |
ದಳುಕದಾಗಳೆ ಬೀಸಿ ರೆಕ್ಕೆಯ |
ಕೆಲಕೆ ಜಾರಿಸಿ ತನ್ನ ಮುಂದೆಡೆ ಬಂದ ಬಾಣವನು ||
ತಲೆಯ ಮೇಲಣ ಮಕುಟವೆಲ್ಲವು |
ನೆಲಕೆ ಬೀಳ್ವವೊಲೊದೆದು ಬೆನ್ನೊಳು |
ಕುಳಿತು ಮಂಡೆಯನಿರದೆ ಕೊಕ್ಕಿಂ ಕುಕ್ಕಿ ಘಾತಿಸಲು ||೨೧||

ಒದರಿದನು ಬೆನ್ನಿಂದೆ ಪಕ್ಷಿಯ |
ನಿದನುಪೇಕ್ಷಿಸಲಾಗದೆನುತವೆ |
ಬದಿಯ ಕಡುಗವ ಸೆಳೆದು ರೆಕ್ಕೆಗಳೆರಡನುರೆ ತರಿಯೆ ||
ಪದುಮನಾಭನೆ ರಾಮ ಸಲಹೆಂ |
ದೊದರುತುರುಳಿದನಾ ಜಟಾಯುವು |
ಬೆದರುತಂಗನೆ ಚೀರ್ದು ಬೈದಳು ನಿಜಪುರಾಕೃತವ ||೨೨||

ಏನಿದಕಟೀಗೆನ್ನ ದೃಷ್ಟವು |
ಹೀನಭಾಗ್ಯೆಯನಿಂದು ರಕ್ಷಿಸ |
ಲೀನಭಸ್ಸ್ಥಲಗಾಮಿ ಯತ್ನಿಸಿಯಸುವ ನೀಗುತಿದೆ ||
ಪ್ರಾಣನಾಥನನುಳಿದ ಸುದತಿಗೆ |
ಹಾನಿಯಲ್ಲದೆ ಲೇಸು ಬಪ್ಪುದೆ |
ದೀನೆಯಾದೆನಗೇನುಗತಿಯೆಂದಬಲೆಯೊರಲಿದಳು ||೨೩||

ಪರಮಮಿತ್ರನೆ ಪಕ್ಷಿರಾಜನೆ |
ದುರಿತವತಿಗೆನಗಾಗಿ ನೀನೀ |
ಪರಿಯ ಕಷ್ಟಕೆ ಗುರಿಯೆನಿಸಿದೈ ಮರೆಯೆ ನಾನಿದನು ||
ಪರಮಪುರುಷನು ರಾಮಚಂದ್ರನು |
ಬರುವನಿಲ್ಲಿಗೆ ಮರೆಯದೆಲ್ಲವ |
ನರುಹಿ ನೀನವನೊಳ್ಪಸಾದವೆ ಮೋಕ್ಷಸುಖಿಯಾಗು ||೨೪||

ಎನುತೆ ಪೇಳ್ವನಿತರೊಳು ಖಳನಾ |
ವನಿತೆಯನು ಮುಡಿವಿಡಿದು ಮೇಲೆ |
ತ್ತನಿಲವೇಗದೊಳಡರಿ ನಭವನು ಮುಂದೆ ಪೋಗುತಿರೆ ||
ಅನುಪಮಾನಶರೀರದಿಂ ಸಲೆ |
ಘನತರಾದ್ರಿಯ ಕೋಡುಗಲ್ಗಳ |
ನನುಕರಿಪ ತೆರದಿಂದೆ ಕುಳಿತಿಹ ಕಪಿಗಳೈವರನು ||೨೫||

ಸುದತಿಯೀಕ್ಷಿಸಿ ತನ್ನ ಮೇಲಣ |
ಹೊದಿಕೆಯಂಚನು ಗೀಳಿಯುದರೊಳು |
ಹುದುಗಿಸುತೆ ತೊಡವುಗಳನಾಗಳೆ ಕಟ್ಟಿಪೊಟ್ಟಳವ ||
ಸದಯರಿರ ನೀವಿದನು ಕೊಳ್ವುದು |
ಹೃದಯವಲ್ಲಭ ರಾಮನೈತರೆ |
ಮುದದೊಳರುಹುವುದೆನ್ನವಸ್ಥೆಯನೆನ್ನುತವರೆಡೆಗೆ ||೨೬||

ಎಸೆಯಲದನವರಾಂತು ಕಡುಬಿ |
ಕ್ಕಸವನಾನುತ್ತೆ ವೆಯನಿಕ್ಕದೆ |
ಯಸುರಚೇಷ್ಟೆಯ ನೋಡುತಿರ್ದರು ಮರುಗಿ ಮನದೊಳಗೆ ||
ಶಶಿವದನೆಯಿನ್ನೇನು ಮತ್ಕರ |
ವಶೆಯೆ ಆದಂತಾಯ್ತೆನುತ್ತಸ |
ವಸದೆ ಪೋಗುತೆ ಕಾಣದಾದನು ದನುಜಪತಿಯಿದನು ||೨೭||

ತೆರಳುತೀಪರಿಯಿಂದೆ ಕೆಳಗಡೆ |
ಮೆರೆವ ಪಂಪಾಸರವ ಲಂಘಿಸಿ |
ಪರಿಪರಿಯ ವನಪರ್ವತಂಗಳನೆಲ್ಲ ಪಿಂದುಳುಹಿ ||
ಧರೆಯಭಾಗವನೆಲ್ಲ ಕಳೆದುರೆ |
ತರತರದೊಳೊಪ್ಪುತಿಹ ತೆರೆಗಳಿ |
ನುರುಭಯಂಕರವಾಗಿ ಭೋರ್ಗರೆಯುತ್ತೆ ರಂಜಿಸುವ ||೨೮||

ಶರಧಿಯನು ಕಂಡದರ ಮಧ್ಯದೆ |
ಮೆರೆವ ಕೋಟೆಗಳಿಂದೆ ಸುರನರ |
ವರರಿಗಸದಳ ಪುಗುವೊಡೆಂಬವೊಲೆಸೆವ ಲಂಕೆಯನು |
ಹರಿಸದಿಂದೊಳವೊಕ್ಕು ಲಕ್ಷ್ಮೀ |
ಸುರುಚಿರಾಮಳಮುಖವು ದಿಟಮಿದು |
ಕೊರತೆಯೇನಿದಕೆಂಬವೋಲ್ಮೆರೆವರಮನೆಯನೈದಿ ||೨೯||

ನಿರುಪಮಾಂತಃಪುರವ ಸೇರ್ದಂ |
ತರದ ಭೂತಾಕೃತಿಯ ವದನದ |
ಪರಿಚರಿಯದಸುರಿಯರ ಸೀತೆಯಸೇವೆಗನುಗೊಳಿಸಿ ||
ಸರಸಿಜಾನನೆಯಾಣತಿಯನುರೆ |
ಸಿರದೊಳಾನುತೆ ನೀವು ನಡೆವುದು |
ಕೊರತೆಯಿನಿಸುಂ ಮನಕೆ ತೋರದ ತೆರದೆ ಸೇವಿಪುದು ||೩೦||

ತನಗಿವಳನೊಡಗೂಡಿಸುವುದೇಂ |
ಘನದ ಕಾರ್ಯವು ನಿಮಗದೆನಿಜರೊ |
ವನಿತೆಯರ್ಕಳನೊಲಿಸಿ ನೆರಪಿದ ಚದುರೆಯರು ನೀವು ||
ಎನುತೆ ನೇಮಿಸಿ ಸಭೆಗೆ ನಡೆತಂ |
ದನಿತು ತನ್ನಳಿಗಜ್ಜಗಳುಮಂ |
ಮನದೆ ಹೇಸದೆ ಸಚಿವಮುಖ್ಯರ್ಗೊರೆದು ತವಕದಲಿ ||೩೧||

ಬರಿಸಿ ತನಗಶ್ಯಾಪ್ತರೆನಿಸುವ |
ದುರುಳರಕ್ಕಸರೆಂಟುಮಂದಿಯ |
ನೊರೆದನವರೊಡನಾ ಜನಸ್ಥಾನದೊಳು ರಾಘವನು ||
ಚರಿಸುವನು ಸೋದರನ ಬೆರಸುತೆ |
ಮರೆಸಿ ಸೀವಲ್ಲಿರುತೆ ನಡೆವಾ |
ಚರಿಯವೆಲ್ಲವನೆನಗೆ ಲೇಖನಮುಖದೆ ತಿಳಿಯಿಸುತೆ ||೩೨||

ಸಮಯವೀಕ್ಷಿಸುತವರ ಕೊಲುವಾ |
ಕ್ರಮವ ಚಿಂತಿಸುತಿರ್ಪುದೆಂಮೊರೆ |
ದಮಿತಮಾದುಡುಗೊರೆಯನಿತ್ತವರುಗಳ ಬೀಳ್ಕೊಟ್ಟು ||
ಸುಮಶರಂಗಳು ನಾಂಟಿ ಹೃದಯದೊ |
ಳಮಮ ಕಡುಬೆಮೆಗೊಂಡ ಕುಮತಿಯು |
ಕಮಲಲೋಚನೆಯೆಡೆಗೆ ಬಂದನು ನುಡಿಸಿದನು ಸತಿಯ ||೩೩||

ಎಲೆಗೆ ಸೀತಾಲಲನೆ ನಿನ್ನಯ |
ಚೆಲುವಿಗೆನ್ನಸು ಸೂರೆವೋದುದು |
ಸಲೆ ಕಟಾಕ್ಷವ ಬೀರಿನನ್ನನು ಕರುಣದಿಂದುಳುಹು ||
ಬಲವಿಹೀನನನಂಗನಿಂದೀ |
ಜಲನಿಧಾನನೆನಿಪ್ಪ ದಶಶಿರ |
ಗಳಿವು ತಾನೆನೆ ಜಗವು ನಗುವುದು ಮಾಣಿಸಿದನೊಲಿದು ||೩೪||

ಕ್ಷಿತಿಜೆ ನಿನ್ನಯ ಚರಣಕಮಲ |
ಕ್ಕತಿಶಯವೆನಿಪ್ಪೆನ್ನ ಮಕುಟವ |
ನತುಳವಾದುಕೆಗೈದು ಪೂಜಿಪೆನನುದಿನದೊಳದನು ||
ಅತನುಹತಗೆನಗಿಂದು ಸುಖಸಂ |
ತತಿಯನೊದವಿಪ ನಿನ್ನ ಸಂಗವ |
ಹಿತದೆ ಕರುಣಿಸಿ ಕಾಯಬೇಕೆಂದೆರಗಿದನು ಪದಕೆ ||೩೫||

ಕೇಳುತಿರ್ದಳು ಸುದತಿಯಾತನ |
ಕೀಳುನುಡಿಗಳ ಕೆರಳಿದಳು ಫಡ |
ಖೂಳ ನೀನಿಂತೇಕೆ ಗಳಹುವೆ ಸಾವ ಲೆಕ್ಕಿಸದೆ ||
ಸಾಲುತಲೆಗಳು ನಿನ್ನವಿವು ಭೂ |
ಪಾಲರಾಮನ ಬಾಣವಹ್ನಿ |
ಜ್ವಾಲೆಗಾಹುತಿಯೆನಿಸದುಳಿವುವೆ ಕಾಣೆ ನೀನಿದನು ||೩೬||

ಎಂದು ನುಡಿವಾ ಸತಿಯ ಬಿರುನುಡಿ |
ಗಂದು ದಶಕಂಧರನು ಮುಳಿಯು |
ತ್ತಿಂದನಾ ಕಾವಲಿನ ರಕ್ಕಸಿಯರಿಗೆ ನೀವಿವಳ ||
ಬಂದಿಯೊಳಗಿಟ್ಟಾ ಅಶೋಕದ |
ನಂದನದೊಳುರುಭಯವ ಪುಟ್ಟಿಸು |
ತೊಂದಬುದಪರಿಯಂತ ಕಾದಿಹುದನಿತರೊಳಗಿವಳು ||೩೭||

ಒಲಿದೊಡೊಳ್ಳಿತನೊಂದಿ ಸುಖಿಸುವ |
ಳೊಲಿಯದಿರೆ ಮರುದಿನವೆ ಮಾರಿಗೆ |
ಬಲಿಯಹಳು ಖಂಡಿತದ ನುಡಿಯಿಂತಿದಕೆ ಕವಡಿಲ್ಲ ||
ಸಲಿಗೆಯಾ ನುಡಿ ಸಲ್ಲದಿವಳೊಳು |
ಕಲುಮನದ ಕಡುಸೊಕ್ಕಿನಿವಳನು |
ಬಲುಹಿನಿಂ ವಶಗೊಳಿಪುದೆಂದೊಡರುತ್ತೆ ತೆರಳಿದನು ||೩೮||

ಒಡನೆ ಬಂದುದು ದಡಿಗರಕ್ಕಸಿ |
ಗಡಣವೀಕೆಯ ಮುತ್ತಿಕೊಂಡುದು |
ನಡೆನಡೆಯೆನುತ್ತಟ್ಟುತಾರ್ಭಟಿಸುತ್ತೆ ಬೆದರಿಸುತೆ ||
ಮಡದಿ ಗಡಗಡನಡುಗುತಡಿಯಿಡು |
ತೊಡೆಯನಹ ರಘುರಾಮನಡಿಗಳ |
ಬಿಡದೆ ನೆನೆಯುತೆ ಪೋಗಿ ಕಾಲವ ಕಳೆದಳಾಬನದೆ ||೩೯||

ನಾಲ್ಕನೆಯಸಂಧಿ ಸಂಪೂರ್ಣಂ.

## ಐದನೆಯ ಸಂಧಿ.

ಸೂಚನೆ|| ವರರಘುಜನರಸುತ್ತೆ ಸೀತೆಯ |
ನುರುವನದೆ ಕಂಡಾಜಟಾಯುವ |
ನರಿಕಬಂಧನನರಿದು ಮಾತಂಗಾದ್ರಿಗೈದಿದನು ||

ಮರುಗಿ ಲಕ್ಷ್ಮಣನಿತ್ತ ಸೀತೆಯ |
ಬಿರುನುಡಿಗೆ ಕುದಿಕುದಿದು ಮನದೊಳು |
ತೆರಳಿಯಣ್ಣನ ಕಡೆಗೆ ಕಾನನದೊಳಗೆ ಪೋಗುತಿರೆ ||
ದುರುಳದನುಜನು ಹರಣವಿಡುವಾ |
ಗೊರಲಿದಾ ನುಡಿಗಂಜಿ ರಾಘವ |
ನರರೆ ತನ್ನವರಿದನು ಕೇಳ್ದೊಡದೇನ ಗೈದಪರೋ ||೧||

ಎಂಬ ಸಂಶಯವಡರೆ ಮನವನು |
ಹಂಬಲಿಸಿ ತೊಳಲುತ್ತೆ ವನನಿಕು |
ರುಂಬವನು ನಿಮಿಷದಲಿ ದಾಂಟಿ ಬರುತ್ತುಮಿದಿರಿನಲಿ ||
ಕಾಂಬರಾರೆಂದೊತ್ತಿ ನಿಟ್ಟಿಸಿ |
ತಾಂ ಬರುವವನೆ ತಮ್ಮನೆಂದರಿ |
ದಂಬುಜಾಕ್ಷನು ದುಗುಡದಿಂ ನುಡಿಸಿದನು ಲಕ್ಷ್ಮಣನ ||೨||

ಏನಿದೇನೈ ತಮ್ಮ ನಿನ್ನ ನ |
ವೀನವೆನಿಸಿದ ರೀತಿ ಸೀನೆ |
ನ್ನಾಣತಿಯ ಮಾರ್ದಿಲ್ಲಿಗೈದಿಹೆ ಸೀತೆಯೆಲ್ಲಿಹಳು ||
ಕಾನನದೊಳೇಂ ಬರುತುಮಿರ್ಪಳೆ |
ಕಾಣಿಸಲು ತನಗೇಕೆ ನಿನ್ನಯ |
ದೀನವದನವ ನೋಡೆ ಕಳವಳವಹುದು ಮಾನಸಕೆ ||೩||

ತಮ್ಮ ನೀಂ ಪರಮಾಪ್ತನೆಂದರಿ |
ದೊಮ್ಮೆ ಮಡದಿಯ ನಿನ್ನ ಬಳಿಯೊಳ |
ಗುಮ್ಮಹದೆ ಬಿಡಲಿಂತುಪೇಕ್ಷಿಸಿಯವಳನುಳಿಯುವದು ||
ಸಮ್ಮತವೆ ನಿನಗೆಮ್ಮೊಳೀಪರಿ |
ದುಮ್ಮನದ ವೈಷಮ್ಯವಕಟಕ |
ಟುಮ್ಮಳಕೆ ಗುರಿಮಾಳ್ಪುದೇನಿದು ಬಿಸದವೇ ಪೇಳ ||೪||

ದೇಶಕೋಶವನುಳಿದು ಪೆತ್ತರೊ |
ಳಾಶೆಯನು ಮಿಗೆ ತೊರೆದು ತನಗೆ ನಿ |
ಜೇಶನೇ ಗತಿಯೆಂದು ನಂಬುತ್ತೆನ್ನ ಪಿಂದೈದಿ ||
ಲೇಶಮಾತ್ರವುಮುಗ್ರವಿಪಿನ |
ಕ್ಲೇಶಕಂಜದೆ ಭೂರಿಸುಗುಣಾ |
ವೇಶದಿಂ ಮೆಚ್ಚಿಸಿದ ಮಡದಿಗಿದಲ್ತೆ ಉಡುಗೊರೆಯು ||೫||

ಖರನ ಸಂಹರಿಸಿದುದೆ ಮೊದಲಾ |
ಗಿರದೆ ನಮ್ಮೊಳು ಬಹುಳವೈರವ |
ಧರಿಸಿ ದನುಜರು ಸಮಯವೀಕ್ಷಿಸುತಿರ್ಪರೆಂಬುದನು ||
ಅರಿಯದನೆ ನೀನೆನಗೆ ಬುದ್ಧಿಯ |
ನೊರೆಯೆಯಾ ನಾಂ ಬರ್ಪಕಾಲದೊ |
ಳರರೆ ನಿನಗಿಂದಂಧಕಾರವದೆಂತು ಸಮನಿಸಿತು ||೬||

ಮನಕೆ ಸಂಶಯವೀಗ ತೋರ್ಪುದು |
ಜನಕತನುಜೆಯ ಕುಶಲದಲ್ಲಿಯೆ |
ಮನೆಯೊಳವಳನು ಕಾಣ್ಬೆವೋ ಮೇಣ್ಕಾಣದಳಲುವೆವೋ ||
ವನಿತೆಯಾಮೃದುತನುವಿಗೆಳಸುತೆ |
ದನುಜರವಳನು ಮುರಿದು ತಿಂದುರೆ |
ತಣಿವನೊಂದದೆ ಮಾಣರೇಗುವೆನಿದಕೆ ತಾನಿಂದು ||೭||

ಪಾದವೇತಕೆ ಲಕ್ಷ್ಮಣನೆ ನೀ |
ನೈದುವಾಸಮಯದಲಿ ತಾನಾ |
ಮೆದಿನೀಸುತೆ ಸುಖದೊಳಿರ್ದಳೆ ತಳಿರ ಮಂದಿರದೆ ||
ಸೋದರನೆ ಕೃಪೆಯೆತ್ತ ಪೋಯಿ |
ತ್ತಾದುದೇನನಿವಾರ್ಯವಾಕೆಯೊ |
ಳೀದುರಾಗ್ರಹಕೇಂ ನಿಮಿತ್ತವು ಪೇಳು ವಹಿಲದಲಿ ||೮||

ಏತಕಿನ್ನಕಟೆನ್ನ ಬಾಳಿಕೆ |
ಬೀತತರು ತಾನಾದೆನೈ ನನ |
ಗಾತಳೋದರಿಯಿಲ್ಲದಿರೆ ಪೆರತುಂಟೆ ಜೀವನವು ||
ಧಾತುಗೆಟ್ಟೆನು ತಮ್ಮ ನೀನಿ |
ನ್ನೇತಕೀಬಳಿಯಿರ್ಪೆ ವರಸಾ |
ಕೇತಪುರಿಗಿರದೈದಿ ಭರತನ ಕೂಡಿ ನೀಂ ಬದುಕು ||೯||

ಮುಳಿಸು ನಿನ್ನೊಳಗಿಲ್ಲ ಪೂರ್ವದೆ |
ಗಳಿಸಿದುದನಿಂದುಣ್ಬೆನೆನಗಾ |
ಗಳಲದಿರು ಶುಭಮಕ್ಕೆ ಮಾರ್ಗದೊಳೆನಲು ರಾಘವನು ||
ಪಳಪಳನೆ ಕಣ್ಬನಿಯ ಧಾರೆಗ |
ಳಿಳೆಗೆ ಸುರಿಯಲು ಲಕ್ಷ್ಮಣನ ಮನ |
ದೊಳಗೆ ಶೋಕಾನಳವು ಪೊಕ್ಕದು ಸುಟ್ಟುದವಯವವ ||೧೦||

ಮರೆದನಂಗವನೊಡನೆ ಕೆದರಿದ |
ಕರಣಮೊದಲಂತಾಗಲಂಜುತೆ |
ಕರವ ಜೋಡಿಸಿ ಬಿನ್ನವಿಸಿದನು ಗದ್ಗದಸ್ವರದೆ ||
ಒರೆಯಲೇನನು ದೇವ ಚಿತ್ತ |
ಕ್ಕರಿಕೆಯಿಲ್ಲದುದುಂಟೆ ರಕ್ಕಸ |
ನೊರಲಿದಾರ್ತಧ್ವನಿಯೆ ಕಾರಣವೆನ್ನ ಬರವಿಂಗೆ ||೧೧||

ಮೋಸವೀನುಡಿ ತಾಯಿ ಮಹಿಮಾ |
ವಾಸರಾಮಂಗಿಲ್ಲಪಾಯವು |
ಲೇಸ ಕಾಣ್ಬರಿ ನಿಮಿಷ ಸೈರಿಪುದೆಂದು ನಾನುಸಿರೆ ||
ಭಾಸುರಾಂಗಿಗೆ ನಿಮ್ಮೊಳಿಹ ವಿ |
ಶ್ವಾಸವೇ ಗಾಢಾಂಧತೆಯನಿ |
ತ್ತೀಸುಬೇಡಿದೊಡ್ಯೈಸು ನಿಷ್ಫಲವೆನಿಸಿತೆಲ್ಲವನು ||೧೨||

ಪೋಗುಪೋಗೆಂದೆನ್ನ ನಟ್ಟಿಯೆ |
ಮೇಗುಕೀಳಾವುದುಮನೆಣಿಸದೆ |
ಬಾಗುಳದೆ ಹುಲುನರರಿಗೊಪ್ಪುವ ಕೀಳುನುಡಿಗಳಲಿ ||
ಬೇಗುದಿಯನೆಸಗಿತ್ತರದರಿಂ |
ಬೇಗ ಬಂದೆನು ದೇವ ಕರುಣಾ |
ಸಾಗರನೆ ಕೃಪೆದೋರಿ ಮನ್ನಿಪುದೆನ್ನ ನೀನೆನಲು ||೧೩||

ಮಾರಿ ತನ್ನಯ ನೇಮವನು ಕಾ |
ಯ್ಪೇರಿ ಬಂದುದದೊಂದು ಮೇಣವಿ |
ಚಾರೆಯೆನಿಪಾ ಮಾನಿನಿಯ ಮಾತಿಂಗೆ ಮತಿಗೆಟ್ಟು ||
ಕ್ರೂರದಾನವರಿರ್ಪ ಕಾಡೊಳ |
ಗಾರುಸಾಹಾಯಕರುಮಿಲ್ಲದ |
ನಾರಿಯೊಬ್ಬಳ ಬಿಟ್ಟು ಬಂದಾ ತಪ್ಪು ತಾನೊಂದು ||೧೪||

ಇಂತು ನೀನಪರಾಧವೆರಡನು |
ಭ್ರಾಂತಿಯಿಂದಮೆಗೈದೆ ನಿನ್ನನೆ |
ಸಂತತವು ಸಂಬಿರ್ದನಮ್ಮೊಳಗಿಂತದೇಕಾದೆ ||
ಚಿಂತೆಯೊಂದಿರೆ ದೇವಿಯಾಕೆಯ |
ಸಂತವಿಸುತಲ್ಲಿಪ್ಪುದನು ಬಿಸು |
ಟಿಂತುಟಾದೊಡಮಾಗಲೆಂದುಳಿದಕಟ ಬರಬಹುದೇ ||೧೫||

ಎಂದು ದುಃಖಿಸುತಾಡಿದಣ್ಣಂ |
ಗೆಂದನಾ ಸೌಮಿತ್ರಿ ಲಾಲಿಪು |
ದಿಂದುವದನೆಯ ನಿಷ್ಠುರೋಕ್ತಿಯ ಕೇಳಿ ಜೀವಿಪರೆ ||
ಇಂದು ಮತ್ಪ್ರಿಯನಳಿದೊಡೆನ್ನನು |
ಹೊಂದುವಿಚ್ಛೆಯೊಳಗಲದಿರ್ಪೆಯ |
ಕೊಂದುಕೊಂಡಪೆನಲ್ಲದುಳಿಯೆನೆನುತ್ತೆ ವಾಚಿಸಲು ||೧೬||

ಒಡೆದುದೆನ್ನೆದೆ ಬಳಿಕ ಜೀಡಿದೆ |
ನೊಡತಿ ಮನ್ನಿ ಪುದೆನುತುಮಲ್ಲಿಂ |
ದುಡುಕಿನಿಂದೈತಂದೆ ನಾಂ ಭವದೀಯಸನ್ನಿಧಿಗೆ ||
ತಡೆಯಲಸದಳವಾದ ನುಡಿಗೇ |
ಳ್ದೆಡೆಯೊಳಿಂತಿಹುದಣ್ಣದೇವನೆ |
ನುಡಿಯಲಂಜುವೆನೆನ್ನ ದೋಷವ ಮರೆದು ನೀಂ ಸಲಹು ||೧೭||

ಎನುತೆಯಾಡಿದ ಲಕ್ಷ್ಮಣನ ನುಡಿ |
ಗಿನಕುಲಾಧಿಪನಿರದೆ ಮನ್ನಿಸಿ |
ವನದೆ ನಡೆದನು ವಾಯುವೇಗದೊಳಿಲೆವನೆಯ ಕಡೆಗೆ ||
ಜನಕಜೆಯ ಬಾಗಿಲೊಳು ಕಾಣದೆ |
ಮನಕೆ ಸಂಶಯುವಾಗಲೊಡನೆಯೆ |
ಘನವಿಷಾದವನಾಂತು ನಿಲಯುವ ಹೊಕ್ಕು ಹುಡುಕಿದನು ||೧೮||

ಕಾಣಲಿಲ್ಲವು ತನ್ನ ಸತಿ ಬಳ |
ಕಾಣೆಯಿಕ್ಕುತೆ ಕೂಗಿದನು ಮ |
ತ್ಪ್ರಾಣವಲ್ಲಭೆ ಮಾತನಾಡೆಯದೇತಕೆಲ್ಲಿರುವೆ ||
ಕೇಣವನು ಬಿಸುಡೇಣವನು ಕೊ |
ಳ್ಳೇಣಲೋಚನೆ ಬೇಗ ಬಾ ನಿ |
ನ್ನಾಣತಿಯ ಮೀರುವನೆ ರಾಮನದೇಕೆ ತಡಗೈವೆ ||೧೯||

ಅಸುರರಂಜಿಕೆಗವಿತುಕೊಂಡೆಯೊ |
ಅಸುರಮರ್ದನನಿದೆಕೊ ಬಂದಿಹೆ |
ನೊಸಗೆಯುಲ್ಲವೆ ಸತಿಯರಗ್ರಣೆಗಿನಿಯನಾಗಮನ ||
ಬಸಿದು ಬೀಳುವ ನಿನ್ನ ಮಮತಾ |
ರಸವದೋಪನೊಳಿಂಗಿಪೋದುದೆ |
ಬಸಿರಶಿಖಿ ಸುಡುತಿಹುದು ತೋರಿಸು ಮೊಗವ ಶಶಿವದನೆ ||೨೦||

ಸುತ್ತಿ ಕೂಗಿದುದಾಯ್ತು ಮನೆಯೊಳ |
ಗೆತ್ತಲುಂ ಜಾನಕಿಯ ಸುಳಿವಿ |
ಲ್ಲೆತ್ತ ಪೋದಳೊ ಕಾಣಲೊಲ್ಲಳು ಚಿತ್ತವಲ್ಲಭೆಯು ||
ಚಿತ್ತದಾಸರ ಕಳೆಯಲುಪವನ |
ದತ್ತಲೈದಿರಬೇಕು ಲಕ್ಷ್ಮಣ |
ಮತ್ತಕಾಶಿನಿಯಿಪ್ಪೆಡೆಯ ನೀಂ ಗೊತ್ತುಗೈಯೆನಲು ||೨೧||

ತಾನು ಗೈದವಿವೇಕದಿಂದೀ |
ಹಾನಿಯಣ್ಣಂಗಾಯ್ತು ಶಿವಶಿವ |
ಹೀನಭಾಗ್ಯರು ಧರೆಯೊಳೆನಗೆ ಸಮಾನರಾರಿಹರು ||
ಮಾನಿನಿಯ ಕುಶಲದೊಳೆ ಸಂಶಯ |
ವೇನಮಾಡುವೆನಿನ್ನು ಮುಸುಕಿದ |
ಕಾನನಂಗಳನೆಲ್ಲ ಶೋಧಿಪೆನೆಂದು ಲಕ್ಷ್ಮಣನು ||೨೨||

ಹೂವನಂಗಳೊಳರಸಿದನು ಗೋ |
ದಾವರಿಯ ತಡಿಗಳಲಿ ಕೂಗಿದ |
ನಾವನಜತತಿಯೊಗೆದ ಸರಗಳನೆಲ್ಲ ಬಳಸಿದನು ||
ಆವೆಡೆಯೊಳಂ ಕಾಣಳಿನ್ನೇ |
ಗೈವೆನೆಂದೆಲೆವನೆಗೆ ಮರಳುತೆ |
ದೇವ ಚಿತ್ತೈಸೆಲ್ಲಿಯುಂ ದೇವಿಯರ ಸುಳಿವಿಲ್ಲ ||೨೩||

ಎಂದು ನುಡಿಯಲ್ಕೇಳಿ ರಘುಪತಿ |
ನೊಂದು ಹಮ್ಮೈಸಿದನು ಮನದೊಳ |
ಗಿಂದುಮುಖಿ ನೀನಿಂತು ಮೋಸವ ಗೈವುದೇ ತನಗೆ ||
ದಂದುಗಕ್ಕೆಡೆಗೈದು ನನ್ನನು |
ಮಂದಭಾಗ್ಯನನೊರ್ವನನೆ ಬಿಡು |
ತಿಂದು ನೀನಕಟೆತ್ತ ತೆರಳಿದೆ ಮುಂದೆ ಗತಿಯೇನು ||೨೪||

ಹಾ ತನೂದರಿ ಸೀತೆ ಭುವನ |
ಖ್ಯಾತೆ ಧರಣೀಜಾತೆ ಸುಗುಣೋ |
ಪೇತೆ ಸಜ್ಜನಗೀತೆ ಮುನಿಸುಪ್ರೀತೆ ಘನದಯಿತೆ ||
ಬೀತುದೆನ್ನಯ ಸಿರಿಯು ಭುವನ |
ಖ್ಯಾತರಘುಕುಲಮುದ್ದುದಬುದಿಯೊ |
ಳಾತುಕೊಂಡೆನಕೀರ್ತಿಯನು ನಾನೆಂದು ಹಲುಬಿದನು ||೨೫||

ನೋಡಿದನು ಲಕ್ಷ್ಮಣನು ರಾಮನ |
ನಾಡಮನುಜರಿಗುಚಿತವೆನಿಸುವ |
ಗಾಢತರದಾಲಾಪಗಳ ನಿವನಡಗಿಸುವೆನೆಂದು ||
ಬೇಡಿದನು ಕೈಮುಗಿದು ನಿನಗೀ |
ಪಾಡು ತಕ್ಕುದೆ ದೇವ ದೇವಿಯ |
ನಾಡೆ ಹುಡುಕುವೆಮೇಳು ಸನಿಹದ ಗಿರಿಯ ಗುಹೆಗಳೊಳು ||೨೬||

ಸರಸು ಸೀಸಲ್ಲಸುರರಳಿವಿಗೆ |
ಧರೆಯೊಳವತರಿಸಿರ್ಪ ಮಾಧವ |
ನೊರೆಯಲೇನವನಿಜೆಯು ಸಾಕ್ಷಾಲ್ಲಕ್ಷ್ಮಿಯೆಂಬುದನು ||
ಅರಿಯದನೆ ನೀಂ ನಿನಗಿದೇಕೀ |
ಪರಿಬವಣೆ ಚಿತ್ತದಲಿ ಸಾಕೀ |
ಳರಸ ದೇವಿಯನರಸಲೆಂದಲ್ಲಿಂದೆ ಪೊರಮಡಿಸೆ ||೨೭||

ದಾರಿಯಲ್ಲದದಾರಿಗೈದುತೆ |
ಚೀರಿಯಂದದೆ ಚೀರಿ ಮತ್ಸಖಿ |
ಬಾರ ಜಾನಕಿ ಹೃದಯನಾಯಿಕೆ ಬಾ ಸರೋಜಮುಖಿ ||
ಧೀರೆ ಗುಣಮಣಿಹಾರೆ ರತ್ಯಾ |
ಕಾರೆ ದುರಿತವಿದೂರೆ ರಾಮನ |
ನೀರೆ ನೀನಿಂದೆತ್ತಲೈದಿದೆ ಮೊಗವ ತೋರೆನುತೆ ||೨೮||

ದಿಕ್ಕುತೋರದೆ ಕಣ್ಗಳೊಳು ನೀ |
ರುಕ್ಕಿಬರೆ ರೋದಸವನೆಸಗು |
ತ್ತಕ್ಕಜದ ನರರೂಪದಾಹರಿ ಹರವಸದೆ ಸೊರಗಿ ||
ಪಕ್ಕಿಗಳ ಕೈವೀಸಿ ಕರೆಯುತೆ |
ಸೊಕ್ಕುಜೌವನೆ ತನ್ನ ಮಡದಿಯ |
ನಕ್ಕಟಾ ನೀಂಕಾಣಿರೇ ಎಂದೊಲಿದು ಬಿಸಗೊಂಡ ||೨೯||

ಹರಿಣಗಳ ಕೇಳಿದನು ತನ್ನಯ |
ಹರಿಣಲೋಚನೆಯೆತ್ತಲೆನ್ನುತೆ |
ಕರಿಣಿಗಳ ಕಂಡರ್ಥಿಸಿದನಾಕರಿಗಮನೆಯಿರವ ||
ಧರಣಿಯನು ಬೇಡಿದನು ತನಗಾ |
ಧರಣಿಜೆಯ ತೋರೆನುತೆ ತಾಪಸಿ |
ಯರನು ಕೇಳಿದನಾತಪಸ್ವಿನಿಯಿರ್ಪಳೆಲ್ಲೆಂದು ||೩೦||

ಧೈರ್ಯಗೆಟ್ಟುದು ಮನವು ಮೊದಲಿನ |
ಕಾರ್ಯವೆಲ್ಲಡಗಿತ್ತೊ ಶಿವಶಿವ |
ಶೌರ್ಯವೆಲ್ಲವು ಸಡಿಲಿತುತ್ಸವಮೆಲ್ಲವಿಂಗಿದುದು ||
ಸ್ಥೈರ್ಯಭುಜಬಲದರ್ಪಗಳು ನಿಜ |
ಕಾರ್ಯಗಾಣದೆ ಬಣ್ಣಗೆಟ್ಟವು |
ಸೂರ್ಯವಂಶದ ನೃಪತಿಗರಸಿಯುನಗಲಿದುದರಿಂದ ||೩೧||

ದೇವರಾಮಂಗಾಗಚೇಷ್ಟಾ |
ಭಾವದಿಂ ಜಾನಕಿಯ ಮಾರ್ಗವ |
ನಾವನಂಗಳ ಮೃಗಗಳೆಲ್ಲವು ತೋರುತಿಹುವೆನಲು ||
ಮೇವನುಳಿದಿದಿರಲ್ಲಿ ನೆಗೆಯುತೆ |
ತಾವು ತೆಂಕಣದಿಕ್ಕಿಗೋಡಿದು |
ವೀವಿಶೇಷವ ಕಂಡು ರಘುವರರತ್ತ ನಡೆಯುತ್ತೆ ||೩೨||

ಕಂಡರೊಂದೆಡೆಯಲ್ಲಿ ಹೂವಿನ |
ದಂಡೆಯಿಂದುದಿರ್ದ ಪುಷ್ಪವ |
ಖಂಡಿತದೆ ಜಾನಕಿಯ ಮುಂಡೆಯೊಳಿರ್ದುದಹುದೆನುತೆ ||
ಕೊಂಡು ರಾಘವನದನು ಚುಂಬಿಸಿ |
ಪುಂಡರೀಕಾಂಬಕೆಯ ನಿಜದಿಂ |
ಕಂಡನೋ ಎನೆ ಪರಿಸಗಡಲೊಳು ಮುಳುಗಿ ಮೈಮರೆದು ||೩೩||

ಮತ್ತೆ ಚೇತರಿಸುತ್ತಿದರ್ಕ್ಕನಿ |
ಮಿತ್ತವೇನುಂಟಾಯ್ತು ತನ್ನಯ |
ಮತ್ತಕಾಶಿನಿ ಮುಡಿದ ಸುಮವಿಂತೇಕೆ ಕೆದರಿದುದು ||
ಉತ್ತಮಾಂಗದ ಮುಡಿಗದಾವನೊ |
ಮಿತ್ತುರೂಹಿಸ ದಾನವನು ಹಾ |
ಯೆದ್ದೆತ್ತಿಕೊಂಡರಸಿಯನು ಪೋಗಿರವೇಳ್ಕುಮೆಂದೆನುತೆ ||೩೪||

ಸುತ್ತಮುತ್ತಲು ನೋಡಿ ಹೇಸರ |
ಗತ್ತೆಗಳು ಸತ್ತಿಹುದ ಕಂಡವ |
ರೊತ್ತಿನಲಿ ಮುರಿದಿಳಿಯೊಳುರುಳಿದ ರಥವದೊಂದಿರಲು ||
ಚಿತ್ತವಿಭ್ರಮವಾಂತು ಮುಂದೈ |
ದುತ್ತೆ ತನ್ನಯ ನಾಮವನು ಜಪಿ |
ಸುತ್ತೆ ಕೆಡೆದಿರ್ಪಾ ಜಟಾಯುವನಾಗ ನೋಡಿದನು ||೩೫||

ಪರಿದರೆಕ್ಕೆಯ ಸುರಿವ ರಕುತದ |
ಗೊರಗೊರೆಂಬುತ್ಕ್ರಮಣನಿನದದ |
ಕೊರಗುತಿಹ ಖಗಪತಿಯ ಮುಖದಿಂದರಿದದೆಲ್ಲವನು ||
ದುರುಳರಾವಣನಿಂದೆ ತನ್ನಯ |
ಹರಿಬಕೋಸುಗ ಕೆಡೆದನೆಂದುರೆ |
ಮರುಗಿದನು ಸಂಸ್ಕರಿಸಿದನ್ನು ಖಗಪತಿಯಾ ಜಟಾಯುವನು ||೩೬||

ಪರರಿಗುಪಕಾರವನು ಮಾಳ್ಪವ |
ನಿರಿಸುವನೆ ದೇಹಾಭಿಮಾನವ |
ನರರೆ ತಂದೆ ಜಟಾಯು ತನಗಾಗಸುವನೀಗಿದೆಯ ||
ಪರಮಪುಣ್ಯಶ್ಲೋಕ ನೀನಾ |
ಪರಮಪದದೊಳ್ಸುಖದೆ ಬಾಳೆಂ |
ದರಸನುದಕಾಂಜಲಿಯನಿತ್ತನು ಮುಂದೆ ತೆರಳಿದನು ||೩೭||

ಬಿಡದೆ ತೆಂಕಣದೆಸೆಗೆ ನಡೆಗೊಂ |
ಡೆಡಬಲಂಗಳೊಳಿರ್ಪ ಗಿರಿಗಳ |
ನಡರಿ ನೋಡುತೆ ವನವ ಸೋದಿಸಿ ಗುಹೆಗಳನು ಪುಗುತೆ ||
ತಡೆಯದಲ್ಲಲ್ಲರಸಿ ಸೀತೆಯ |
ಕಡೆಗೆ ಕಾಣದೆ ದುಃಖಪರವಶ |
ರಡಿಗಡಿಗೆ ಹಮ್ಮೈಸಿ ಬಿಳ್ದಿರದೊಡನೆಯೇಳುತ್ತೆ ||೩೮||

ಇಂತು ಕಂಗೆಟ್ಟಡವಿಯಲಿ ಬಲು |
ಚಿಂತೆಗಂಗವನಿತ್ತು ತೆರಳುತೆ |
ಕಂತುಪೀಡಿತೆಯಾದಯೋಮುಖಿಯೆಂಬ ದನುಜೆಯನು ||
ಪಿಂತೆ ತಾವಾ ಶೂರ್ಪಣಖೆಗಿರ |
ದೆಂತು ಗೈದರೊ ಆವಿಧಾನದ |
ಸಂತವಣೆಗಿವಳರ್ಹೆಯೆನ್ನುತೆ ಭಂಗಿಸಿದರವಳ ||೩೯||

ದಾರಿಯೇ ನೆರೆ ಕಾಣಬಾರದ |
ಘೋರಕಾನನದೊಳಗೆ ಬರುತಿರ |
ಲಾರುಬಟೆಯೊಂದಾಗ ಕೇಳಿಸಿತತಿಭಯಂಕರದ ||
ಭೂರಿಸೂಕರಹರಿಗಜಂಗಳು |
ಚೀರಿಡುತೆ ದೆಸೆಗೆಟ್ಟು ಹಾರಿದು |
ವೀರಭಸಕಿಂದೇನುಕಾರಣವರಿಯಬೇಕೆಂದು ||೪೦||

ಸುತ್ತಲೀಕ್ಷಿಸುತುಭಯದ್ದಿಶೆಯಿಂ |
ದೊತ್ತಿ ಬರ್ಪುವು ಗಿರಿಯ ... ಳಿ |
ವೆತ್ತಣದ್ಭುತ ಸಿಲುಕಿಸಿದ
ನಿತ್ತರಿಪಹದನಾವುದೆನ್ನು
ಚಿತ್ತದಲಿ ಸಂಭ್ರಾಂತರಾ
ಮತ್ತೆ ನೋಡುತ್ತಿರಿದರಸ

ಸಿರವದಿರ್ದುದು ಬಸಿರಮಧ್ಯದೆ |
ಚರಣವಿಲ್ಲದ ಬರಿಯ ಮುಂಡವು |
ಕರಗಳವು ತಾನೆರಡುಯೋಜನದುದ್ದದಳತೆಯಲಿ ||
ಉರಿವನೇತ್ರವದೊಂದು ಪಣೆಯೊಳ |
ಗಿರಲು ಪಸರಿಸಿದುಭಯಕರಗಳ |
ಸೆರೆಗೆ ಸಿಕ್ಕಿದ ವನಮೃಗಂಗಳ ತಿಂದು ತೇಗುತ್ತೆ ||೪೨||

ಅದುಭುತಾಕಾರದಲಿ ಗಿರಿಯವೊ |
ಲಿದಿರೊಳಿರುವನ ಕಂಡದೇನಿಂ |
ದಿದಕುಪಾಯವು ಕೊಂದೊಡಲ್ಲದೆ ಬಾಳ್ಕೆ ತವಗಿಲ್ಲ ||
ಸದೆದು ಕಳೆ ನೀನೊಂದುಬಾಹುವ |
ನಿದೆಕೊ ನಾಂ ಮತ್ತೊಂದ ಕಡಿವೆನು |
ಬೆದರಲಾಗದೆನುತ್ತೆ ರಾಘವನೊರೆದನನುಜಂಗೆ ||೪೩||

ಭರದೊಳಾಗಳೆ ವೀರರಿರ್ವರು |
ಶರಗಳಿಂದವನೆರಡುತೋಳ್ಗಳ |
ನರಿಯಲಾತಂಗರಿವು ಬಂದುದು ಕಂಡನಾಹರಿಯ ||
ಗುರುವೆ ತವದರ್ಶನದೊಳೆನ್ನಯ |
ದುರಿತರಾಶಿಯು ಕರಗಿ ಪೋದ |
ತ್ತರರೆ ದಾನವಜನ್ಮದುಃಖವು ಕಳೆದುದಿಂದಿನಲಿ ||೪೪||

ಅರಿಯಲಾನು ಕಬಂಧನೆಂಬವ |
ನಿರವು ತನಗೀವಿಪಿನಮಧ್ಯದೆ |
ದೊರೆದುದೀದನುಜತ್ವವೊರ್ವ ತಪೋಧನನು ಶಪಿಸೆ ||
ಪರಿಹೃತಿಯ ಯಾಚಿಸಲು ಲಕ್ಷ್ಮೀ |
ವರನು ನರನಾಗುದಿಸಿ ನಿನ್ನೀ |
ಕರವನರಿಯೆ ವಿಶಾಪವಹುದೆಂದವನು ಬೆಸಸಿದನು ||೪೫||

ಎಂದಿಗಪ್ಪುದೊ ನಿನ್ನ ಪದಗಳ |
ಸಂದರುಶನದ ಭಾಗ್ಯವೆಂದರ |
ವಿಂದನಾಭನೆ ಸಮಯವೀಕ್ಷಿಸುತಿಂದು ಧನ್ಯತೆಯ ||
ಒಂದಿದೆನು ನಿನ್ನಯ ಕರಂಗಳಿ |
ನಿಂಧನವನುರಿಗೊಳಿಸಿ ಪಾಪಿಕ |
ಬಂಧದೇಹವ ದಹಿಸಿದೊಡೆ ಲೇಸಹದು ನಿನಗೆನಲು ||೪೬||

ಒಡನೆ ಸಹಭವರಿಂಧನಂಗಳ |
ಕಡಿದು ಜೋಡಿಸಿಯಸುರದೇಹವ |
ನಿಡುತುಮಗ್ನಿಯೊಳುರಿಸಲದರಿಂದೆಳ್ದು ಗಗನದಲಿ ||
ಕಡುಚೆಲುವ ಗಂಧರ್ವನೊಪ್ಪುತೆ |
ನುಡಿಸಿದನು ಸಿರಿಯೆರೆಯ ನಿನ್ನಯ |
ಮಡದಿಮಣಿಯನು ಕಾಣ್ಬುಪಾಯವ ಪೇಳ್ವೆನವಧರಿಸು ||೪೭

ಅರಸರಿಗೆ ಷಡ್ಗುಣಗಳೇ ತಾ |
ವರಿಯೆ ಕಾರ್ಯಕೆ ಸಾಧನಂಗಳು |
ಪಿರಿಯಕಷ್ಟದೊಳೊದವಿದಾತನೆ ತಿಳಿಯಲುಪಕಾರಿ ||
ನಿರುತ ನಿನ್ನಾಪತ್ತಿಗೆಣೆಯಾ |
ದುರುವಿಪತ್ತನು ಪೊರ್ದಿ ಕೊರಗುವ |
ಖರಕರಾತ್ಮಜನೆನಿಪ ಸುಗ್ರೀವಾಖ್ಯ ಕಪಿವರನು ||೪೮||

ವರಪರಾಕ್ರಮಿಯೆನಿಸಿ ಸೊಕ್ಕಿದ |
ಹಿರಿಯಸೋದರನಪ್ಪ ವಾಲಿಯ |
ಕರದೊಳಪಜಯವೊಂದಿ ನಾಲ್ವರು ಮಂತ್ರಿವರರೊಡನೆ ||
ಇರುವನಾವರಋುಶ್ಯಮೂಕದ |
ಗಿರಿಯೊಳವನನು ಸೇರಿ ಸಖ್ಯವ |
ನುರುವಿವೇಕದೆ ಬಳಸಲಪ್ಪುದು ಕಾರ್ಯವತಿಜವದೆ ||೪೯||

ಕಲಹವಾಗಲು ಸೋದರನ ನಿಜ |
ಲಲನೆ ರುಮೆಯೆಂಬಳನು ಬಲುಹಿಂ |
ದಲಘುಭುಜಬಲನಿಂದ್ರತನುಜನು ವಾಲಿಯಪಹರಿಸಿ ||
ನಿಲಯದಿಂ ಪೊರಮಡಿಸಿ ತಮ್ಮನ |
ನೆಳಲ ಸೈಸದೆ ಕಾಡಿಗಟ್ಟ |
ಲ್ಕಲೆಯುತಿರ್ಪನು ಸತಿಯ ವಿರಹದೊಳವನು ಕಂಗೆಟ್ಟು ||೫೦||

ದೊರೆವುದಾತನ ಮೈತ್ರಿ ದಿಟದಲಿ |
ತೆರಳು ಪಶ್ಚಿಮದಿಕ್ಕಿಗೀಗಳೆ |
ಮೆರೆವ ಪಂಪಾಸರದ ತೀರದ ಪುಣ್ಯವನಗಳಲಿ ||
ಪರಿಪರಿಯ ಫಲಪುಷ್ಪವಿರ್ಪುವು |
ಹರಿಣಸೈಕ್ಕಲನಾದಿಯಹ ಮಿಗ |
ಮಿರುಪುವಲ್ಲಿಯೆ ಕೆಲವುಕಾಲವ ಕಳೆವುದನುಕೂಲ ||೫೧||

ಅದರ ಪಡುವಣ ತಡಿಯ ಸೇರಲು |
ಸದಮಲಾಶ್ರಮವೊಂದು ಮನಕುರೆ |
ಮುದವ ಬೀರುತೆ ಗೋಚರಿಪುದಲ್ಲೊರ್ವ ತಾಪಸಿಯು ||
ಪದುಮನಾಭನೆ ಶಬರಿಯೆಂಬವ |
ಳಿದಿರುನೋಡುತೆ ನಿನ್ನ ಚರಣವ |
ಪದುಳದಿಂ ಸೇವಿಸುವುದಕೆ ಕಾದಿಹಳು ಪೋಗಲ್ಲಿ ||೫೨||

ಎನುತೆ ನುಡಿದಾ ವರಕಬಂಧನ |
ವಿನಯದುಕ್ತಿಗೆ ಮೆಚ್ಚಿ ರಾಮನು |
ಘನಮಹಿಮ ನೀನಿನ್ನು ನಿನ್ನಯ ಲೋಕಕ್ಕೈದೆಂದು ||
ಅನುಜನೊಡನಲ್ಲಿಂದೆ ಪೊರಮ |
ಟ್ಟನು ನಯಾನ್ವಿತೆಯಾದ ಶಬರಿಯ |
ವಿನುತಮಾದಾಶ್ರಮವನರಸುತ್ತಲ್ಲಿಗೈತಂದ ||೫೩||

ಸಡಗರದೊಳಾ ಘನವಿರಕ್ತೆಯು |
ಮುಡಿಯ ಚಾಚುತೆ ರಾಮನಂಘ್ರಿಗೆ |
ಕಡುದರಿದ್ರಗೆ ನಿಧಿಯು ದೊರೆದಂತಾಗಳೊಲವಿನಲಿ ||
ತಡೆಯದರ್ಘ್ಯಾದಿಗಳ ನೀಯು |
ತ್ತೊಡಗಡಿಗೆ ಕೀರ್ತಿಸುತೆ ಕುಣಿಯು |
ತ್ತೊಡನೆ ಫಲಮೂಲಾದಿಗಳ ನಿತ್ತಾಗಳುಪಚರಿಸೆ ||೫೪||

ರಾಮನಾತಿಥ್ಯವನು ಕೈಕೊಂ |
ಡಾ ಮಹಾವ್ರತೆಗಿರ್ಪ ಭಕ್ತಿಗ |
ಮಾಮುಹಿತವೈರಾಗ್ಯಕಂ ಮಚ್ಚುತ್ತೆ ತಲೆದೂಗಿ ||
ನೇಮವಿತ್ತೆನು ನಿನಗೆ ನೀನಿ |
ನ್ನಾ ಮಹೇಂದ್ರನ ಲೋಕವನು ಮೇಣ್ |
ಕಾಮಿಸುವ ಲೋಕಾಂತರವನಿರದೊಂದಿ ಸುಖದೊಳಿರು ||೫೫||

ಎಂದು ನುಡಿಯಲ್ಕೊಡನೆ ವೃದ್ಧೆಯು |
ವಂದಿಸಿ ರಘೂದ್ವಹನ ಪದಗಳಿ |
ಗಂದು ಯಜ್ಞೇಶ್ವರನಿಗಾಹುತಿಯಿತ್ತು ನಿಜತನುವ ||
ಹಿಂದೆ ತನ್ನಯ ಗುರುಮತಂಗನು |
ಹೊಂದಿದಾ ವರಪುಣ್ಯಲೋಕಕೆ |
ಸಂದು ಸುರುಚಿರಸುಖದೊಳೆಸೆದಳು ಶಬರಿ ಗುಣಲಹರಿ ||೫೬||

ಬಳಿಕವಾಮಾತಂಗವನವನು |
ಕಳೆದು ಮುಂದಿಹ ಗಿರಿಯನೀಕ್ಷಿಸಿ |
ವಲಿಮುಖೇಂದ್ರನ ಕಾಣುವೆವು ತಾವೆಂಬ ಸಡಗರದೆ ||
ಲಲಿತಹರ್ಷವನಾಂತು ಭಾಸ್ಕರ |
ಕುಲಜರೈದುತೆ ಕೆಲದೊಳೆಸೆವಾ |
ತಿಲಕಪಾಟಲಿಪನಸನಾರಂಗಾದಿತರುಗಳೊಳು ||೫೭||

ನೆರೆದು ಕುಳಿತಿಹ ಶುಕಪಿಕಂಗಳ |
ನೆರವಿಯಿಂದೈತರ್ಪ ಮೃದುಲ |
ಸ್ವರವನಾಲಿಸುತತಿಮನೋಹರವಾಗಿ ರಂಜಿಸುವ ||
ಗೊರಟೆ ಸಂಪಗೆಯಾದಿಯಾದಾ |
ತರುಗಳಿಗೆ ಪರ್ಬಿರ್ಪವನಲತೆ |
ಭರದೆ ಕುಸುಮಿತವಾಗಿ ಮೆರೆದಿರಲದರ ಮಧ್ಯದಲಿ ||೫೮||

ವನಸುಮಂಗಳ ಮೇಲೆ ಬೀಸು |
ತ್ತನಿಲನುರೆ ತನಿಗಂಪನಾನುತೆ |
ತನುವಿಗಾಪ್ಯಾಯನವ ಮಾಳ್ಪುದ ಕಂಡು ರಘುವರರು ||
ವಿನುತಚೈತ್ರನ ಮಹಿಮೆಗಿರದುರೆ |
ಮನದೊಳಾನಂದಿಸುತೆ ಕಪಿಕುಲ |
ವನಧಿಚಂದ್ರನ ಕಾಣ್ಬ ತವಕದೊಳೈದಿದರು ಮುಂದೆ ||೫೯||

---

ವಿದಿತಘನಕರ್ಣಾಟರಾಜ್ಯದ |
ಪದಕೊಡೆಯನಹ ಕೃಷ್ಣಭೂಪನ |
ಪದದ ಸೇವಕನೆನಿಪ ಚಿಕಲಿಂಗಾಖ್ಯಪಾರ್ಥಿವನು ||
ಪದೆದು ನುಡಿದನರಣ್ಯಕಾಂಡವ |
ನಿದನು ಸುಲಲಿತಭಾಮಿನೀಷ |
ಟ್ಪದಿಯೊಳಿದು ರಾಜಿಸುಗೆ ಸುಜನರ್ಗೊಲವನೊಡರಿಸುತೆ ||

ಅರಣ್ಯಕಾಂಡಂ ಸಮಾಪ್ತಂ



# ಕಿಷ್ಕಿಂಧಾ ಕಾಂಡವು.



ಸೂ|| ಒಲಿದು ಸುಗ್ರೀವಂಗೆ ವಾಲಿಗೆ |
ಮುಳಿದು ಕಿಷ್ಕಿಂಧಾಧಿಪತ್ಯವ |
ಬಲಿದು ಮಿತ್ರನೊಳೊರೆದನುಡಿಯನು ರಘುಜನೋವಿದನು ||

ಇತ್ತಲೆಸೆವಾ ಋಶ್ಯಮೂಕದ |
ನೆತ್ತಿಯೊಳು ಪವನಸುತನೀಲಾ |
ದ್ಯುತ್ತಮಕಪೀಂದ್ರರ್ವೆರಸಿಯೊಡ್ಡೋಲಗದೊಳಿರುತೆ ||
ಕೆತ್ತ ದುಗುಡಕೆ ಮನವ ತೆತ್ತದ |
ನೊತ್ತಲೇನಿಹುದಕಟುಪಾಯವೆ |
ನುತ್ತೆ ಸುಗ್ರೀವಾಂಕ ಚಿಂತಿಸುತಿರ್ದನನಿತರೊಳು || || ೧ ||

ನೆತ್ತಿಯೊಳು ಜಡೆಯಾಂತು ನಡುವಿಗೆ |
ಸುತ್ತಿ ವಲ್ಕಲಗಳನು ಕರದೊಳು |
ಕತ್ತಿಬಿಲುಗಳನಾಂತು ವಿಕ್ರಮದಿಂದೆ ರಂಜಿಸುತೆ ||
ಬತ್ತಳಿಕೆಯೊಳು ಮಿರುಗುವಂಬುಗ |
ಳೊತ್ತಿ ತುಂಬಿರೆ ನಡೆಯ ಗಮಕದ |
ಬಿತ್ತಿಗರನೀಕ್ಷಿಸಿದನಂದಾರಾಮಲಕ್ಷ್ಮಣರ || || ೨ ||

ಏನಿದಚ್ಚರಿ ನಮ್ಮ ವನಮಿದ |
ಮಾನುಷವು ತಾನೆಂದಿರಲು ಪೊಸ |
ತೀನವಾಯಿಯೊಳಿತ್ತಲೈದುವ ಪುರುಷರಾರಿವರು ||
ಏನು ಮಾಗಳ್ ಮನಕೆ ತೋರದು |
ಮಾನವರ ವೇಷದೊಳು ನಮಗುರೆ |
ಹಾನಿಯೆಸಗಲ್ಕಣ್ಣನಟ್ಟಿರವೇಳ್ಕುಮಿಂದಿವರ || || ೩ ||

ಶೂರಮಾರುತಿ ಪೋಗಿ ಬಳಿಗಿವ |
ರಾರು ಪರಿಕಿಸಿ ನೋಡಿ ಬಾರೈ |
ತೋರಿಸದೆ ನಿಜರೂಪವಾಸುತೆ ಸಲೆ ನರಾಕೃತಿಯ ||
ದೂರನಾಕಾರದ ಕುಮಾರರು |
ದಾರಿಯುಲ್ಲದ ವಿಪಿನಕೈದಲು |
ಕಾರಣವದೇನೆಂಬುದನು ನೆರೆ ತಿಳಿದು ಹಿಂತಿರುಗೆನಲು || || ೪ ||

ಜೀಯನಾಣತಿಯೆನುತುಮಲ್ಲಿಂ |
ವಾಯುಸುತನತಿಭರದೆ ಲಂಘಿಸಿ |
ಯಾಯತದ ಬಿಲ್ಲಂಬುವಿಡಿದಿದಿರೈದುವವರೆಡೆಗೆ ||
ಮಾಯದಿಂ ಯತಿರೂಪುದಾಳ್ದು ವಿ |
ಧೇಯನಾಗಿಯೆ ಪೋಗಿ ಕಂಡೆಲೆ |
ತೋಯಜಾಕ್ಷರೆ ನಿಮ್ಮನೀಕ್ಷಿಸಲಾದುದತಿಮುದವು || ೫ ||

ಆವದೇಶವು ಸುಕೃತವಡೆದುದ |
ದಾವವಂಶವು ಬೆಳಗುತಿರ್ಪುದು |
ಭಾವಿಸಲ್ನಿಮ್ಮಿಂದವೆಂಬುದನರಿಯಲೆಳಸುವೆನು ||
ದೇವಸಮರೆಂಬುದನು ನಿಮ್ಮಯ |
ಭಾವಭೇದಗಳಿಂದಮರಿತೆನು |
ಕೋವಿದರೆ ನೀವಿತ್ತಬಿಜಯಂಗೈದ ಹದನೇನು || ೬ ||

ನೆತ್ತಿಯೊಳು ಜಡೆಗೇನು ಕಾರಣ |
ಕತ್ತಿನೊಳು ರುದ್ರಾಕ್ಷವೇತಕೆ |
ಕತ್ತಿಬಿಲ್ಗಳ ಧರಿಸಿದಂಸರಿಗುಂಟೆ ಮುನಿವೃತ್ತಿ ||
ಎತ್ತಣಿಂದಾಗಮನವಿಲ್ಲಿಗೆ |
ಮತ್ತೆ ಮುಂದಕೆ ಪಯಣವೆಲ್ಲಿಗೆ |
ಚಿತ್ತವಿಪುದಿಂದೆನ್ನ ಪರಿಯನು ಬಿತ್ತರಿಪೆನೊಸೆದು || ೭ ||

ವೀರವನೀಗಿರಿಶಿಖರದೊಳು ನ |
ಮ್ಮರಸನಹ ಸುಗ್ರೀವದೇವನು |
ಪರಮಸತ್ಯವ್ರತಿ ಸುಧರ್ಮಿಯಪಾರಗುಣಯುತನು ||
ಅರಿಯಲಾತನಮಾತ್ಯನಾನಹೆ |
ನುರುವ ವಾನರಕುಲವು ನಮ್ಮದು |
ಕರೆವರೆನ್ನನು ಹನುಮನೆನ್ನುತೆ ಕಾಮರೂಪೆನಗೆ || ೮ ||

ದೇವತಾಂಶರೆ ನಿಮ್ಮ ಮೈತ್ರಿಯ |
ಪಾವನತೆಯನು ನೆನೆದು ವರಸು |
ಗ್ರೀವನೆನ್ನನು ಕಳುಹೆ ಬಂದೆನು ಬೇಡಲೀಗದನು ||
ಈ ವಿಚಾರದೊಳಿನಿತು ಕೊರತೆಯ |
ಭಾವಕಿಂದಂಟಿಸದೆ ನಮ್ಮನು |
ಕಾವುದೆಂದೊರೆದಿರಗೆ ರಾಘವನೆಂದನನುಜಂಗೆ || ೯ ||

ಅನುಜ ಕೇಳ್ದಿಯ ಹನುಮನಾಡಿದ |
ವಿನಯಗುಣರಸಭರಿತಮಾದೀ |
ಘನತರೋಕ್ತಿಯನಿದು ಗಹನಮಜ್ಞರಿಗಯೋಗ್ಯರಿಗೆ ||
ಅನುಗುಣವು ವೇದಾಂಗನಿಗಮಾ |
ದ್ಯನುಪಮಿತವಿದ್ಯೆಗಳನರಿತ |
ರ್ಗನುಪಮನನದರಿಂದಮಂಗೀಕರಿಸು ನೀನೆನಲು || ೧೦ ||

ಬಳಿಕ ಲಕ್ಷ್ಮಣನನಿಲತನುಜಂ |
ಗುಲಿದನೀಪರಿ ನಿನ್ನ ದೆಸೆಯಿಂ |
ದಲಘುಬಲಸುಗ್ರೀವದೇವನ ಪರಗುಣಾವಳಿಯ ||
ತಿಳಿಯಲಾದೆವು ನಾವು ಕಷ್ಟಕೆ |
ಸಿಲುಕಿಯಾತನ ಸಖ್ಯವನೆ ಸಂ |
ಗಳಿಸಬಂದಿಹೆವೆಮ್ಮ ಬರವಿಂಗಿದುವೆ ಕಾರಣವು || ೧೧ ||

ಎನುತೆ ಪೇಳಿದ ನುಡಿಗೆ ಪವನನ |
ತನಯನುರೆ ಹಿಗ್ಗಿದನು ಮನದೊಳ |
ಗಿನತನೂಜನು ಗೆಲಿದನಳಿದನು ಸುರಪತಿಯ ಸೂನು ||
ಮನದ ಸಂಶಯವಿಂದು ಹಿಂಗಿತು |
ಘನಪರಾಕ್ರಮರಿವರ ಕಜ್ಜಕೆ |
ತನುವ ತೆತ್ತಿಹೆನಿಂದುಮೊದಲಾಗೆನುತೆ ನಿಶ್ಚಯಿಸಿ || ೧೨ ||

ಕರವ ಮುಗಿಯುತೆ ರಾಮಚಂದ್ರನ |
ಮಿರುಗುವಾನನವನು ನಿರೀಕ್ಷಿಸು |
ತೊರೆಯಬೇಹುದು ನೀವದಾರೆಂಬುದನು ತನಗೊಲಿದು ||
ಕರಕರಿಸುತಿದೆ ಮನವು ಬೇಗದೊ |
ಳರಿಪಬೇಕೆಂದೆನಲು ರಾಘವ |
ನಿರದೆ ಸೌಮಿತ್ರಿಯನು ನೋಡಲ್ಕಾತನಿಂತೆಂದ || ೧೩ ||

ಒರೆವೆನಾಲಿಸು ಕಪಿಕುಲೋತ್ತಮ |
ಧರಣಿಗೊಡೆಯನು ದಶರಥೇಂದ್ರನು |
ಮೆರೆವಯೋಧ್ಯೆಯೊಳಾಳುತಿರ್ದನು ಸುತರು ನಾವವಗೆ ||
ಹಿರಿಯನೀರಘುರಾಮ ತಂದೆಯ |
ಪರಮಭಾಷೆಯ ಸಲಿಸಬೇಕೆಂ |
ದರಸಿವೆರಸುತ್ತೆನ್ನನೊಡಗೊಂಡೈದಿದನು ಬನಕೆ || ೧೪ ||

ಇರಲು ಸಾವಡವಿಯೊಳು ರಾವಣ |
ನಿರದೆ ಮೋಸದೊಳೀತನರಸಿಯ |
ನರಿಯದೊಲ್ಕದ್ದೊಯ್ದನದರಿಂದಿಲ್ಲಿಗೈದಿದೆವು ||
ಬರುತುಮರಿದೆವು ನಿಮ್ಮ ರಾಯನು |
ನೆರೆ ಬಲಾನ್ವಿತನತುಳಸತ್ಕಾ |
ದರನು ಮೈತ್ರಿಯಬೆಳಸಲೆಮ್ಮಯ ಕಾರ್ಯವಹುದೆನುತೆ || ೧೫ ||

ಬಂದೆವಿಲ್ಲಿಗೆ ನಿಮ್ಮ ರಾಯನ |
ನೊಂದಿಹುದು ಮೇಣೆಮ್ಮ ಕಜ್ಜವ |
ದಿಂದುಮೊದಲಾಗವನೆ ಶರಣೆಂದೆನುತೆ ನಂಬಿಹೆವು ||
ಕಂದುಕಸರಿಕೆ ನಮ್ಮ ಮೈತ್ರಿಯೊ |
ಳೊಂದುಮಿಲ್ಲದ ತೆರದೆ ನಡೆವೆವು |
ಮುಂದೆ ಪಥಿಕಿಸೆ ವೇದ್ಯಮಪ್ಪುದು ಸಕಲವಾತಂಗೆ || ೧೬ ||

ತಿಳಿಯಲಾನತಕಲ್ಪಭೂಜನು |
ಮಲಿತ ಪಗೆವರ ಲಯಕೃತಾಂತನು |
ಜಲಜಸಖನನ್ವಯದ ಭೂಪನು ಕೆಳೆಯನೆಳಸಿಹನು ||
ಇಳೆಯ ರಮಣರದಾವನಂಘ್ರಿಗೆ |
ತಲೆಯ ಬಾಗುತೆ ಸುಪ್ರಸಿದ್ಧರೊ |
ಕಲಿಗಳಗ್ರಣಿ ರಾಘವೇಶನು ಕೆಳೆಯನೆಳಸಿಹನು || ೧೭ ||

ಪ್ಲವಗಪತಿ ಸುಗ್ರೀವನಿಂದಹು |
ದವನಿಜೆಯ ಸಾಧನವು ಮಿಕ್ಕಿನ |
ಕವಡುಗಳ ಪಾಡಲ್ಲ ನೂಕದಿದಜಭವಾದ್ಯರಿಗೆ ||
ಅವನ ಸೇರಿಯೆ ಮನದ ದುಗುಡವ |
ತವಿಸುವೆನು ತಾನೆನುತುಮೀಗೆ |
ಮ್ಮವನಿಪತಿ ಬಂದಿಹನು ನಿಮ್ಮೊಡೆಯನ ಸಮಾಗಮಕೆ || ೧೮ ||

ನುಡಿಯದೇನಿಹುದಿನ್ನು ಕಾರ್ಯ |
ಕ್ಕೊಡಬಡಿಸು ನೀನೆನಲು ಸಂತಸ |
ಗಡಲೊಳಗೆ ಮುಳುಗುತ್ತೆ ತನ್ನಯ ಮೊದಲಿನಾಕೃತಿಯ ||
ಪಡೆದು ಭುಜಗಳೊಳವರನೇರಿಸು |
ತೊಡೆಯನಹ ಸುಗ್ರೀವನಿರ್ಪಾ |
ಕಡೆಗೆ ಧೀಂಕಿಟ್ಟವರನಿಳುಹಿದನವನ ಸರಿಸದೊಳು || ೧೯ ||

ಅರಿಪಿದನು ಸುಗ್ರೀವಗೀನೃಪ |
ವರರ ಚರಿತವನೆಲ್ಲ ತಾವಿಂ |
ದಿವಿಜಯರ್ಕೈಡಿಹರು ಸಖ್ಯವ ಬೆಳಸುವಿಟ್ಟೆಯಲಿ ||
ಪರಮಪುರುಷರ ಸತ್ಕರಿಪುದೆನೆ |
ಭರದೆ ಬಂದುಪಚರಿಸುತವರನು |
ಹರಿಸುದಿಂದೆನ್ನಘವು ನಿಮ್ಮಯ ದರ್ಶನದೊಳೆನುತೆ || ೨೦ ||

ದೇವತಾಂಶರು ನೀವು ನಾನಿಂ |
ದೀವನಂಗಳೊಳಿರ್ಪ ಕೋಡಗ |
ಪಾವಕಾಂಗದೊಳೇನೊ ತನ್ನಯ ಚಿತ್ತವತಿಚಪಲ ||
ಭಾವಿಸಲ್ಕಿಮಗೆಂತು ಬರ್ಪುದು |
ಭಾವದೊಳ್ನಂಬುಗೆಯು ತನ್ನೊಳು |
ಪಾವಕನ ಸಮ್ಮುಖದೊಳೆಸಗಲು ನೇಹವುದು ನೆಲೆಯು || ೨೧ ||

ದೇವರೊಪ್ಪುವುದೆನೆ ಕೃಶಾನುವ |
ಪಾವಮಾನಿಯು ಸಜ್ಜುಗೊಳಿಸ |
ಲ್ಕಾವನೇಚರಪತಿಯು ಕೈಯನು ನೀಡೆ ರಾಘವನು ||
ಭಾವಶುದ್ಧಿಯೊಳಾತ್ಮಕರದಾ |
ಜೀವದಿಂದವನೊಡನೆ ಪಿಡಿಯ |
ಲ್ದೇವದುಂದುಭಿ ಮೊಳಗಿತಭ್ರದೆ ಸುರರುಘೇಎನಲು || ೨೨ ||

ಇಂದು ನಿನ್ನಯ ನೇಹವೊದವಿತು |
ಮುಂದೆ ತನ್ನೇಳಿಗೆಗೆ ಕುರುಹಿದು |
ಮಂದಿಮಾರ್ಬಲಸತಿಗಳೊಡನಾರಾಜ್ಯವನು ನೀಗಿ ||
ದಂದುಗಂಬಡುತಿರ್ದ ತನ್ನನು |
ಬಂದು ನೀನೀಗುದ್ಧರಿಸಿದೈ |
ಬಂಧು ನೀನೆನಗೆಂದನಾಸುಗ್ರೀವ ಕೈಮುಗಿದು || ೨೩ ||

ಸಂತವಿಸಿದನು ರಾಮನವನನು |
ಚಿಂತೆ ಬೇಡಿದಕಿನ್ನು ನಿನ್ನ ದು |
ರಂತಮಾದಳಲಿಂಗೆ ನೀಡು ಜಲಾಂಜಲಿಯನಿಂದು ||
ಪಿಂತೆಯೇ ಕೇಳ್ದಿಹೆನು ನಿನ್ನಾ |
ದ್ಯಂತಚರಿತವನೆಲ್ಲ ನೀನಿ |
ನ್ನಂತರಂಗವಿಶುದ್ಧನಾಗಿಹ ಸಖನು ತನಗೆಂದ || ೨೪ ||

ಕೆಲವುದಿನಗಳನಿಂತು ಕಳೆಯುತೆ |
ಸಲುಗೆ ಪೆಚ್ಚಿದ ಬಳಿಕ ರವಿಜನು
ಲಲನೆಯೊರ್ವಳು ಬಿಸುಟಗಂಟನು ನೆನೆಯುತದ ತರಿಸಿ ||
ಲಲಿತಗುಣನಿಧಿ ರಾಮಚಂದ್ರನೆ |
ಖಲಶಿರೋಮಣಿಯೊರ್ವದನುಜನು |
ಬಲುಹಿನಿಂದೊಬ್ಬಳನು ಪಿಡಿಯುತೆ ಗಗನಮಾರ್ಗದಲಿ || ೨೫ ||

ಪೋಗುತಿಹ ಸಮಯದೊಳು ಸತಿ ತಾ |
ನೀಗುರುತನೆನ್ನೆರೆಯಗೀವವ |
ರಾಗಿ ನೀವೆಂದಿಡಲು ನಾವಿದ ಬಳಿಯೊಳಿರಿಸಿದೆವು ||
ಈಗ ನಿಮ್ಮಯ ಕಥೆಯ ಕೇಳಲು |
ತಾಗಿತೆನ್ನಯ ಮನಕೆ ತಾನಾ |
ನಾಗವೇಣಿಯೆ ಸೀತೆಯಾಗಿರವೇಳ್ಕುಮೆಂಬೂಹೆ || ೨೬ ||

ನೋಡು ನೀನಿದನೆಂದೊಡಾಗಳೆ |
ನಾಡೆ ಗಂಟನು ಬಿಚ್ಚಿ ಕಂಡನು |
ಖೋಡಿಯಿಲ್ಲದ ಜನಕಜೆಯ ನಿಖಿಲಾಭರಣಗಳನು ||
ರೂಢಿಸದ ಶೋಕಾಬ್ಧಿಯೊಳು ಮುಳು |
ಗಾಡುತಾಗಳು ತನ್ನ ಮುದ್ದಿನ |
ಗಾಡಿಕಾತಿಯೆ ಬಾರ ಬಾ ರಾಜೀವಲೋಚನೆಯೆ || ೨೭ ||

ಎತ್ತಲಿಹೆ ಸೀಂ ದೇವಿ ನಾನಿಂ |
ದೆತ್ತಲರಸುವೆನು ನಿನ್ನ ಸುದ್ದಿಯ |
ನೆತ್ತಿ ಹೇಳುವರಿಲ್ಲಲೇ ಮತ್ತೇನನೆಸಗುವೆನು |
ಮತ್ತನಹ ಖಳರಾವಣನು ತಾ |
ನೆತ್ತಿಕೊಂಡ್ಯೆದಿದುದನರಿತೆನು |
ಗೊತ್ತುಗುರಿಯಾವುದುಮನರಿಯೆನು ಖೂಳನಾಸಲೆಯ || ೨೮ ||

ನೀರೆ ನಿನ್ನಾಭರಣಗಳ ಕ |
ಣ್ಣಾರೆ ನೋಡುತೆ ಸುಖಿಪೆನೆನೆ ಕ |
ಣ್ಣೀರು ತಾನದಕೀಯದೆಡೆಯನು ತುಂಬಿತುಳುಕುತಿದೆ ||
ಚಾರುಮುಖಿ ಖಳನೊಯ್ದ ದಾರಿಯ |
ತೋರಬೇಕೆನಗೆಂದು ತೊಡಿಗೆಯ |
ಜಾರಿಸಿದೆ ಕಡುಜಾಣೆ ನಿನಗಿನ್ನೆಣೆಯನಾಂ ಕಾಣೆ || ೨೯ ||

ಮೊದಲು ಮಿಗಗಳು ಬಳಿಕ ಖಗಗಳು |
ಚದರಿದಾಭರಣಂಗಳೀಗಳು |
ಸುದತಿ ನಿನಗೊದವಿರ್ಪ ಕಷ್ಟವನರುಹಿದುವು ತನಗೆ ||
ವಿದಿತವಾದೊಡಮೆನಗೆ ಸುದ್ದಿಯು |
ಪದುಮಗಂಧಿಯೆ ನಿನ್ನನೆಳೆದೊ |
ಯ್ದಧಮರಾಕ್ಷಸನಿರ್ಪ ತಾಣವು ಮಾತ್ರ ತಿಳಿಯದಲಾ || ೩೦ ||

ಎನುತೆ ಹಂಬಲಿಸುತ್ತುಮೊಡವೆಯ |
ನನುಜ ನೀಂ ನೋಡೆಂದು ನೀಡುತೆ |
ತೊನೆಯುತೊಡನೆದೆಗೊತ್ತಿ ಚುಂಬಿಸಿ ಪಲವುರೀತಿಯೊಳು ||
ನೆನೆನೆನೆದು ಶೋಕಿಸುತೆ ನೃಪನಿ |
ಪ್ಪನುವನಾಸುಗ್ರೀವನೀಕ್ಷಿಸಿ |
ಜನಪ ನಿನಗಿದು ಸರಿಯೆ ಧೀರೋದಾತ್ತನಾಯಕಗೆ || ೩೧ ||

ದೊರೆತ ಕುರುಹಿದು ಸಾಕು ನಾನೀ |
ಗರಸಿ ನಿನ್ನಯ ಪಟ್ಟದರಸಿಯು |
ನರಿಯುದಂದವೆ ಕಳವಿನಿಂ ಕೊಂಡೊಯ್ದ ಪಾತಕಿಯು ||
ಸುರನರೋರಗಲೋಕಗಳೊಳೆ |
ಲ್ಲಿರುವನೆಂಬುದನರಿದು ನಿನಗಾ |
ನೊರೆವೆ ನೀನಿದಕಿನಿತು ಚಿಂತಿಪುದೇಕೆ ನಾನಿರಲು || || ೩೨ ||

ಚಿತ್ತದೊಳು ನೆಮ್ಮದಿಯ ನಾನುತು |
ಮೊತ್ತಿಕಳೆ ದುಗುಡವನು ನೀತಿಯು |
ಬಿತ್ತರಿಪುದಲೆ ಚಿಂತೆ ಚಿತೆಗೆಣೆಯಪ್ಪುದೆಂಬುದನು ||
ಬತ್ತುವುದು ಬೇಸಗೆಯ ಕೊಳದವೊ |
ಲುತ್ತಮೋತ್ತಮಬಲವದಿರೆಯುಂ |
ಮಿಕ್ಕು ತಾನೆನಿಸುವುದು ಬೆಸನವು ಮನುಜಗಳೆಯೊಳಗೆ || ೩೩ ||

ಎಂದು ವರಸುಗ್ರೀವನಾಡಲು |
ತಂದು ಧೈರ್ಯವ ಮನಕೆ ರಘುಪತಿ |
ಯೆಂದನಿನ್ನಾರೆನಗೆ ಹಿತಚಿಂತಕರು ನಿನ್ನವೊಲು ||
ತಂದೆ ಕಪಿವರ ನಿನ್ನ ಬಲದಿಂ |
ದಿಂದುಮುಖಿಯನು ಸೇರುವಾಸೆಯು |
ನೊಂದಿ ಧೈರ್ಯದೊಳಿರ್ಪೆನಲ್ಲದೆ ಬೇರೆಯೇನಿಹುದು || ೩೪ ||

ಸತ್ಯವೀನುಡಿಯಿದರೊಳಿಲ್ಲವ |
ಸತ್ಯವೆಂಬುದು ನಿನಗೆ ಭಾಷೆಯು |
ನಿತ್ತವೊಲು ಸಲಿಸುವೆನು ತಾಸದ ಮೊತ್ತವೊದಲೊಳಗೆ ||
ಚಿತ್ತಕಾಗೆ ಸಮರ್ಪಕವು ಬಳಿ |
ಕುತ್ತರದೆ ನೀನೆನ್ನ ಕಾರ್ಯವ |
ನುತ್ತಮನೆ ಕೈಗೂಡಿಸುವುದೆನಲೆಂದನಾ ರವಿಜ || ೩೫ ||

ಅರಸ ನಿನ್ನಯ ಕರುಣವಿರಲಾ |
ಸುರಪಮುಖದಿಕ್ಪತಿಗಳೈಸಿರಿ |
ದೊರೆವುದೆನೆ ಭಲ್ಲೂಕಗೋಲಾಂಗೂಲರಾಜ್ಯವಿದು ||
ಒರೆಯಲಿನ್ನೇಸರದು ತನ್ನಯ |
ಪರಕೆ ಕೈಗೂಡಿಸುದು ನಿನಗಿ |
ನ್ನೊರೆವೆನಾಲಿಪುವಗ್ರಜನ್ಮನ ವಾಲಿಯುಧಟುಗಳ || ೩೬ ||

ವೀರನಿವನರುಣೋದಯಕೆ ಮೊದ |
ಲೂರ ಹೊರವಂಟಂಬುನಿಧಿಗಳ |
ಸೇರಿಯುವರೊಳು ಮಿಂದು ನಿತ್ಯವು ಮರಳಿಬರುತಿಹನು ||
ಭೂರಿಭುಜಬಲವನು ಪರೀಕ್ಷಿಸೆ |
ತಾರುತಟ್ಟನೆ ಘನತರಾದ್ರಿಯ |
ತೋರವಾಗಿಹ ಕೋಡುಗಲ್ಗಳ ಕಿತ್ತು ಬಿಸುಡುವನು || ೩೭ ||

ಒಂದುದಿನವಿವನೊಡನೆ ಕಾಳೆಗ |
ಕೆಂದು ಬಂದನು ಸುರರಿಗಲಗಹ |
ದುಂದುಭಿಯೆನಿಪ್ಪೊರ್ವದೈತ್ಯನು ಪರ್ವತೋಪಮನು ||
ಹೊಂದಿ ಮಹಿಷಾಕೃತಿಯ ಕೋಡುಗ |
ಳಂದಚಂದದೊಳೊಪ್ಪುತಿವನನು |
ನಿಂದು ಕೆಣಕಿದನಾಗಳಂಟಿತು ವಿಷಮವಹ ಸಮರ || ೩೮ ||

ಕಾದಿದರು ಸಮಜೋಡಿಯೆಂದೆನ |
ಲಾದುದದ್ಭುತರಣವು ಕೊನೆಯೊಳ |
ಗಾದುರಾತ್ಮಕದುಂದುಭಿಯನೆಮ್ಮಣ್ಣನೊರಸಿದನು ||
ಹೋದುದಸುವೆಂದಿರದೆ ಹೆಣದಾ |
ಕಾಡವೊಂದನು ಹಿಡಿದು ಬಿಸುಡೆ |
ಲ್ಕಾಧರಾಂಗಣದಾಚೆ ಬಿಳ್ದುದು ಯೋಜನಾಂತರದೆ || ೩೯ ||

ಬಿಸುಟ ರಭಸಕ್ಕದರ ಬಾಯಿಂ |
ದೊಸರ್ದ ರುಧಿರವು ಮುನಿಮತಂಗನ |
ಮಿಸುಪ ಪುಣ್ಯಾಶ್ರಮಕೆ ಬೀಳಲು ಖತಿಯು ತಾಳ್ದನಸು ||
ಅಸಮಸಾಹಸಿಯೆಂಬ ಗರ್ವದೊ |
ಳೆಸೆದನಿದನಾವಾಲಿಯುದರಿಂ |
ದಸುವ ನೀಗಲಿ ಬಂದೊಡೀವನಕೆಂದು ಶಪಿಸಿದನು || ೪೦ ||

ಇತ್ತಲದರಿಂದವನು ಬಾರನೆ |
ನುತ್ತುಮಿಲ್ಲಿಯೆ ಸೇರಿಕೊಂಡೆವು |
ಮತ್ತೆ ತನಗವನೊಡನೆ ಹಗೆತನವೊಗೆದ ಕಾರಣವ ||
ಬಿತ್ತರಿಸುವೆನು ಕೇಳು ದುಂದುಭಿ |
ಸತ್ತನವನಿಂದೆಂಬುದರಿಯುತೆ |
ಮತ್ತನಹ ಮಾಯಾವಿಯೆಂಬವನವನ ತನುಭವನು || ೪೧ ||

ಅಟ್ಟಹಾಸದೊಳೆಂದು ವಾಲಿಯ |
ಕುಟ್ಟುವೆನು ತಾನೆನುತೆ ಬರುತಿರ |
ಲಟ್ಟುತಗ್ರಜನವನ ಬೆನ್ನಂಟಿರದೆ ಪೋಗುತಿರೆ ||
ತಟ್ಟನವನಂಜುತ್ತೆ ಕಡುಕಂ |
ಗೆಟ್ಟು ಹೊಕ್ಕಡೆ ಗವಿಯನೊಂದನು |
ದಿಟ್ಟಕಪಿವರನವನ ಹಿಂದೆಯೆ ಬಿಡದೆ ನುಗ್ಗಿದನು || ೪೨ ||

ಜತೆಯೊಳಿರ್ದಾರ್ಗಂ ನುಸುಳಬೇಡೆನೆ |
ಖತಿಯನಾನುತ್ತೆನ್ನ ಗಜರಿಸಿ |
ಜತನದಿಂ ಕಾದಿಹುದು ಬಾಗಿಲೊಳೆಂದು ನನಗೊರೆದು ||
ಅತಿಪರಾಕ್ರಮಿಯೊಂದುವರುಷವು |
ಗತಿಸಿದೊಡಮಿತ್ತೈದದಿರೆಯು |
ದ್ಭುತವೆನಿಪ ಕೋಲಾಹಲಧ್ವನಿಯೊಂದು ಕೇಳಿಸಿತು || ೪೩ ||

ಕೇಳಿತಿಲ್ಲವೆ ನಮ್ಮವನ ದನಿ |
ಕೇಳಿಸಿತು ರಕ್ಕಸನ ಹುಯ್ಯಲು |
ತಾಳಿ ದುಃಖವ ಮನದೊಳಣ್ಣನು ಮೃತಿಪಡೆದನೆಂದು ||
ಗೋಳಿಡುತೆ ಕೆಲದಿನವ ಕಳೆದೆನು |
ವಾಲಿಯಾಸೆಯಿಲ್ಲದಿರೆ ನಾಂ |
ಕೀಲಿಸಿದೆನಾಗವಿಯ ಬಾಗಿಲ್ಗೊಂದು ಶಿಲೆಯಿಂದೆ || ೪೪ ||

ಬಳಿಕವಲ್ಲಿಂ ನಗರಿಗೈತರೆ |
ಬಲುಹಿನಿಂ ಮಂತ್ರಿಗಳು ರಾಜ್ಯವ |
ನಿಳುಹಿದರು ತನ್ನೊಳಗೆ ಕಳಿದೆನು ಪಲವುಕಾಲವನು ||
ಗೆಲವನೊಂದಿದ ವಾಲಿ ಬಾಗಿಲ |
ಶಿಲೆಯ ಕಂಡದನೊದೆದು ಬಂದನು |
ವಿಲಯಕಾಲದ ರುದ್ರನಾಟೋಪವನು ತೋರುತ್ತೆ || ೪೫ ||

ಲಲನೆಯಿರಲೆನ್ನ ವಳನಿರದು |
ಯ್ದುಲಿಯಬಾರದ ಹಿಂಸೆಗೈಯು |
ತ್ತೆಳೆದು ನೂಕಿದನೆನ್ನನೂರಿಂ ಪೊರಗೆ ಪೋಗೆನುತೆ ||
ಅಳಲಿನಾಂ ಕಂಗೆಟ್ಟು ಬರುತಿರೆ |
ಘಳಿಲನೀಮಂತ್ರಿಗಳು ಸಹಿಸದೆ |
ಬಳಿಯೆ ಬಂದರು ವಾಸವಾದುದು ನಮಗೆ ಗಿರಿಯೊಳಗೆ || ೪೬ ||

ಅದೆಕೊ ಸೊರಗಿದ ದುಂದುಭಿಯ ಶವ |
ವಿದಿರೊಳಿರ್ಪುದದನು ನಿನ್ನಯ |
ಪದದಿನೊದೆದಿನ್ನೂರುಬಿಲ್ಲಂತರಕೆ ಹಾರಿಸಲು ||
ಸದೆವೆ ಲೀಲೆಯೊಳಗ್ರಜನನೆನ |
ಲದಟ ನೋಡೆಂದಾಗ ರಾಘವ |
ನೊದೆಯೆ ಪಾದಾಂಗುಷ್ಠದಿಂದದು ಹತ್ತುಯೋಜನದೆ || ೪೭ ||

ಬೀಳಲುಚ್ಚರಿವಡುತೆ ಮಗುಳಿರ |
ಬಾಳುತನವಿನ್ನೊಂದ ತೋರ್ಪುದು |
ಸಾಲವೃಕ್ಷಗಳೇಳು ಮೆರೆಯುತ್ತೆ ಕಾಣುತಿಹುವಿದೆಕೊ ||
ವಾಲಿಯೊಂದರೊಳೊಂದುವೆಜ್ಜವ |
ಕೋಲನೆನಿತನೊ ಬಿಸುಟು ಕೊರೆದನು |
ಕೋಲೊಳೊಂದರೊಳೆಸಗಿ ವೆಜ್ಜವ ಬಲುಹುದೋರ್ಪುದೆನೆ || ೪೮ ||

ನಕ್ಕನಸುರಾರಾತಿ ಕಪಿಗಳ |
ದಕ್ಕಡಿಗನೆಂದುದಕೆ ಬಿನದದೊ |
ಳಕ್ಕತುಳಬಿಲ್ಲಿನೊಳು ಪೂಡುತೆ ಕಣೆಯನೊಂದನಿಡೆ ||
ಪೊಕ್ಕು ವೃಕ್ಷಗಳೇಳರೊಡಲೊಳ |
ಗಿಕ್ಕೆ ವೆಜ್ಜವನಾಗ ರವಿಸುತ |
ನಕ್ಕಜವನಾಂತೈದೆ ಪೊಗಳುತ್ತೆರಗಿದನು ಪದಕೆ || ೪೯ ||

ಆಗ ರಾಘವನೆಂದನೆನ್ನೊಳ |
ಗೀಗ ಪುಟ್ಟಿತೆ ಭರವಸವು ನೀಂ |
ಬೇಗನೈದಿಯೆ ವಾಲಿಯನು ಕರೆಯಿನ್ನು ಕಾಳಗಕೆ ||
ಪೋಗು ಬೆದರದಿರೆನ್ನ ಬಾಣದ |
ಲಾಗುವೇಗವ ತೋರುತವನನು |
ಸಾಗಿಸುವೆನಂತಕನ ಬಳಿಗೆನಲಾಗ ಕಪಿವರನು || ೫೦ ||

ಹಾರಿದನು ಕಿಷ್ಕಿಂಧೆಯೆಡೆಗಿರ |
ದಾರಿದನು ಪಾಪಾತ್ಮ ನೀಚನೆ |
ಬಾರೆಲವೊ ಪೌರುಷವು ನಿನಗಿರೆ ಕದನಕಿಂದೆನುತೆ ||
ಆರುಭಟೆಯನು ಕೇಳಿ ವಾಲಿಯ |
ದಾರು ಬಂದವನೆನುತೆ ನಡೆತಂ |
ದೂರ ಮುಂದಣ ವನದೆ ನಿಂದಿಹ ತಮ್ಮನನು ಕಂಡು || ೫೧ ||

ದುರುಳನಿವಗೆನ್ನೊಡನೆ ಸೆಣಸೇ |
ಹರಹರಾ ವಿಶ್ಮಯವಿದೇನೈ |
ನರಿಯು ಸಿಂಹದ ಕೂಡೆ ಮಲೆವುದು ಕಾಲಧರ್ಮವಲಾ ||
ಅರಸಿಯನು ಕಳೆಕೊಂಡ ದುಃಖದೊ |
ಳುರಿಯ ಹಾಯ್ವೆಯ ತಮ್ಮ ನಿನ್ನೀ |
ಪರಿಯು ಲೇಸಾಯ್ತೆಂದು ತಿವಿದನು ಬಲಿದ ಮುಷ್ಟಿಯೊಳು || ೫೨ ||

ತರಹರಿಸಿದನು ಮತ್ತೊಡನೆ ಚೇ |
ತರಿಸಿಯಣ್ಣನ ಬದಿಯ ತಾಗಿದೊ |
ಡೆರಗಿದನು ಕಲಿವಾಲಿ ಕೋಪಾಟೋಪಮಯನಾಗಿ ||
ಅರಿಯಲೀಸುಗ್ರೀವ ಬಡವನೆ |
ಸರಿಸರಿಯೆ ಕಾದಿದನು ರಾಘವ |
ನರಿಯದಾದನು ವಾಲಿಯಾರ್ ಸುಗ್ರೀವನಾರೆಂದು || ೫೩ ||

ರೂಪವೊಂದೇ ವಜ್ರಕಾಯದ |
ಚಾಪವೊಂದೇ ವೀರರುಗ್ರಾ |
ಟೋಪವೊಂದೇ ಸರಿನೆಸೆವೊಡದೇನನಾಸುಕವೊ ||
ಭಾಪು ತನ್ನಯ ಸುಡಿಗೆ ವಿಧಿಯಾ |
ರೋಪಿಸಿತೆ ವಿಕಳತೆಯನಾನತಿ |
ಪಾಪಿಯೆಂದಾನೃಪತಿ ಚಿಂತಿಸುವನಿತರೊಳಗಿತ್ತ || ೫೪ ||

ವಾಲಿಯಾಬಿರುಮುಷ್ಟಿಘಾತವ |
ತಾಳಲಾರದೆ ಋಶ್ಯಮೂಕದ |
ಶೈಲಕಾಸುಗ್ರೀವನೋಡಲುನೆನೆದು ಶಾಪವನು ||
ಕಾಲನಲ್ಲಿಡಲಂಜುತೂರಿಗೆ |
ಲೀಲೆಯಿಂ ತಿರುಗಿದನು ವಾಲಿಯು |
ಕಾಲಗಳೆಯದೆ ಬಂದನಿಜಜನ ಬಳಿಗೆ ರಘುವರನು || ೫೫ ||

ಬಂದ ರಾಮನನಾಕಪೀಶ್ವರ |
ನಂದು ನುಡಿಸದೆಯುಡ್ಡಮೊಗವಿಡೆ |
ಮುಂದಕೈದುತೆ ತನಗೊಗೆದ ಸಂದೇಹವನು ತಿಳಿಸಿ ||
ಇಂದು ತನ್ನಯ ತಪ್ಪ ಮನ್ನಿಸು |
ಮುಂದೆ ನಾನಿರದಿದಕುಪಾಯವ |
ನೊಂದನೆಸಗುವೆನೆಂದು ಸಂಪಗೆವೂಗಳನು ತರಿಸಿ || ೫೬ ||

ಬಂಧಿಸುತೆ ಹಾರವನು ಗುರುತಿದು |
ಸಂದಿಗವ ತೊಲಗಿಪುದು ಧರಿಸೆಂ |
ದಂದು ಕೊರಳಿಗೆ ಸಾರ್ಚೆ ರಾಮನನಿಜನಾದರಿಸಿ ||
ಇಂದು ತನ್ನಯ ಕಾರ್ಯಜಯವಹು |
ದೆಂದು ಸಕಲರು ಬೆರಸಿ ಮಗುಳ್ಕೆ |
ತಂದನಾಕಿಷ್ಕಿಂಧೆಯುಪವನದೆಡೆಗೆ ಕಪಿವರನು || ೫೭ ||

ಆಲಿದನು ಮೊದಲಂತೆ ಗರ್ಜನೆ |
ಕೇಳಿಸಿತು ಕಿವಿಗಳ್ಗೆ ತಾಂ ಕ |
ಣ್ಣಾಲಿಗಳು ಕೆಂಪಡರೆ ಜಗ್ಗನೆ ಸಜ್ಜೆವನೆಯಿಂದೆ ||
ಕಾಲ ಪೆಂಡೆಯು ಝಣಝಣೆನುತಿರೆ |
ಕಾಲಭೈರವನಂತೆ ತಮ್ಮನ |
ಕಾಲ ಮುಗಿಯಿತ್ತೆನುತೆ ಬಂದನು ವಾಲಿ ರಿಪುಕೂಲಿ || ೫೮ ||

ಪೊರಮಡುತ್ತಿರೆ ತಾರೆ ತಡೆದೆ |
ನ್ನರೆಯ ಪೋಗದಿರಿಂದು ಸಮರ |
ಕ್ಕರಿಯುಬಾರನು ದಿಕ್ಕು ಕಗ್ಗತ್ತಲೆಯು ಕವಿದಿಹುದು ||
ಅರಿದೆನಂಗದನಿಂದಮಿರ್ವರು |
ಧರಣಿಪರು ಬಲಶಾಲಿಗಳು ಸೋ |
ದರಯೋಧ್ಯಾಧಿಪನ ಸುತರಾರಾಮಲಕ್ಷ್ಮಣರು || ೫೯ ||

ಹರಿಯ ದವರವರಂತೆ ದುರ್ಧರ |
ಧುರಧುರಂಧರರಂತೆ ನಂಬಿದ |
ಶರಣಜನರಿಗೆ ರಕ್ಷಕರು ತಾವಂತೆ ರಘುವರರು ||
ಕರಕರಿಪ ಸುಗ್ರೀವಗಭಯವ |
ನಿರದೆ ಕೊಟ್ಟಿಹರಂತೆಯಾದರಿಂ |
ದುರುಬಿನಿಂದೀನಿಶಿಯೊಳೈದಿಹನಂತೆ ಕಾಳಗಕೆ || ೬೦ ||

ಜಾಣ ನಿನ್ನಯ ತಮ್ಮ ಬರಿದೇ |
ತ್ರಾಣವಿಲ್ಲದರೊಡನೆ ನೇಹವ |
ನೇನುಕಾರಣ ಬಳಸುವನು ಬಲುವೀರರವರಿಯೆ ||
ಮಾಣುಮಾಣವರೊಡನೆ ನಿನ್ನಯ |
ಕೇಣಸರವಿಂದಿನೊಳು ಸಾಗದು |
ಪ್ರಾಣನಾಥನೆ ಧಿಕ್ಕರಿಸದಿರು ಪೆಣ್ಣ ನುಡಿಯೆಂದು || ೬೧ ||

ಆಗದಾಗದು ಪತಿಯೆ ವೈರವು |
ರಾಘವೇಶನೊಳಕಟ ಪಿರಿದಹ |
ರಾಗದಿಂ ಸುಗ್ರೀವಗಿತ್ತಾ ಯೌವರಾಜ್ಯವನು ||
ತ್ಯಾಗಿಯೆಂಬ ಸುಕೀರ್ತಿವಡೆಯುತೆ |
ಭೋಗಭಾಗ್ಯವನನುಭವಿಸುತಾ |
ಭೋಗಿಶಯನನ ತೆರದೆ ಪದುಳದೊಳಿಹುದು ನೀನೆನಲು || ೬೨ ||

ಧುರಕೆ ಪೊರಮಡುತಿರ್ಪ ತನ್ನನು |
ಹರಿಹರಾದ್ಯರು ತಡೆಯಲಮ್ಮರು |
ತರುಣಿ ನಿನ್ನೀಬೀಳುನುಡಿಗಳು ಕಿವಿಗೆ ಬೀಳುವುವೇ ||
ಧುರದೊಳೋಡುತ್ತಿರ್ದ ಹೇಡಿಯು |
ಮರಳುತೈತಂದಿಹುದ ನೋಡೆಲೆ |
ಪರಿಸಮಾಪ್ತಿಪದಾಯ್ತು ತಮ್ಮನ ಪಣೆಯ ಬರೆಹವದು || ೬೩ ||

ಬಂದಿಹರೆ ರಘುಕುಲಜರೊಳ್ಳಿತು |
ಬಂದು ತನಗವರೇನ ಮಾಳ್ಪರು |
ಮುಂದೆ ನಿಂದೊಡೆ ಕಾಲನರಮನೆಗವರ ಕಳುಹುವೆನು ||
ವಂದಿಸೀಯುರೆಸುತ್ತೆ ಕೇಳ್ದಿಹೆ |
ನಂದಗೆಡಿಸರು ತಮ್ಮ ವಂಶವ |
ಹಿಂಡಣರಿತದ ಗೆಳೆಯರಲ್ಲವರೇನು ಭಯವೆನಗೆ || ೬೪ ||

ವಲ್ಲಭೆಯೆ ನೀನಿಂದು ತನ್ನನು |
ನಿಲ್ಲಿಸಿದುದಪಶಕುನವೆಂಬಿನೆ |
ಮಲ್ಲಜನಕೀಶಕುನಗಳುನವು ಹುಲ್ಲಿಗಿಂ ಕಡೆಯು ||
ಇಲ್ಲಿ ನೋಡುತ್ತಿರ್ದ್ದೆಯಾದೊಡೆ |
ಖುಲ್ಲತಮ್ಮನ ಪೆಣನೊಡನೆ ನಾ |
ನಿಲ್ಲಿಗೈದುವ ಸೊಬಗನೀಕ್ಷಿಪೆ ಬರಿದೆ ಬೆದರದಿರು || ೬೫ ||

ಎನುತೆ ರೋಷದೊಳೌಡುಗಚ್ಚುತೆ |
ಕುಣಿವ ಮಿಾಸೆಯ ಕರದೆ ತಿರುಹುತೆ |
ರಣಭಯಂಕರವಾಲಿ ನುಗ್ಗಿದನಹಿತನಿದ್ದೆಡೆಗೆ ||
ಕಿನಿಸಿನಾಲಿಗಳಿನಜನೊಳೆ ಕಾಂ |
ಗಣೆಕದೀರವ ಕೀಲುಗೊಂಡಿರೆ |
ಝಣದೆ ಕಾಸ್ಸೈದುಪ್ಪುಮಪ್ಪಳಿಸಿದನು ಸಹಭವನ || ೬೬ ||

ಎರಗಿದರು ತಾವೊರ್ವರೊರ್ವರ |
ಸುರುಬೆಗಾರರು ಮಲೆತವನ ಮದ |
ಕರಿಗಳಂದದೆ ಹೋರುತಿರ್ದರು ಹೆಣಗಿ ತೋಳ್ಗಳಲಿ ||
ಚರಣಗಳ ತೊಡರಿಕ್ಕಿ ಮೇಗೊತ್ತು |
ಸರಿಸುತದ ಡೊಕ್ಕರದೊಳೆಸೆಯುತೆ |
ಪರಿಪರಿಯ ಜಾಣ್ಮೆಯನು ತೋರ್ದರು ಸುರಪರವಿಸುತರು || ೬೭ ||

ಮುಂದೆ ಕಲಿಯುಗದೊಳಗೆ ತಮ್ಮೊಳ್ |
ದ್ವಂದ್ವಯುದ್ಧವನಿಳೆಯ ಜನ ಮನ |
ದಂದು ತಾನಭಿನಯಿಸಲೀಟದೊಳೆಂಬುದನು ಬಗೆದು ||
ಇಂದು ನಿರುಪಮವಿಸ್ಮಯದ ರಣ |
ದಂಡವನು ತೋರುವರೊ ಮಝು ಭಾ |
ಪೆಂದು ನಭದೊಳ್ಸುರರು ಪೊಗಳುತ್ತಿರಲು ಕಾದಿದರು || ೬೮ ||

ಹೊಕ್ಕು ಹೆಣಗುತೆ ಸಿಕ್ಕಿ ಜಾರುತೆ |
ಪಕ್ಕಕೆರಗುತೆ ಗಕ್ಕನಿರಿಯುತೆ |
ಜಕ್ಕುಲಿಸುತಿರದಿಕ್ಕಿ ಕಂದದೊಳುಕ್ಕುವಾಳ್ತನದೆ ||
ಸೊಕ್ಕುವಣುದುದೆ ತಮ್ಮ ನಿಸಗಿರೆ |
ದಿಕ್ಕು ಬಡಿಸಲಿ ನಿನ್ನನೆನುತುಂ |
ದಕ್ಕಡಿಗನಾವಾಲಿ ಸುಗ್ರೀವನನು ಕೆಡಹಿದನು || ೬೯ ||

ಕೆಳಗೆ ಬೀಳುತ್ತೊರೆಗಣ್ಣಿಂ |
ಕೆಲದೊಳಿಹ ರಘುವರನ ನೋಡ |
ಲ್ಕಿಳಿದುದೆಮ್ಮವಸಥಟು ಭಾಷೆಯ ಸಲಿಪೆನೆಂದವನು ||
ಜಲಜಸಖಸುತ ಬೆದರಬೇಡೆಂ |
ದುಲಿಯುತೆಸೆಯಲು ಶರವನೊಂದನು |
ಸಿಲುಕಿತೆದೆಯೊಳು ವಾಲಿ ಕೆಡೆದನು ಸಿಡಿಲುಬಡಿದವೊಲು || ೭೦ ||

ಉಬ್ಬಿದನು ಸುಗ್ರೀವ ರಾಮನ |
ತಬ್ಬಿದನು ನಲಿದಾಡಿ ತನ್ನನು |
ಹೆಬ್ಬುಲಿಯ ಬಾಯಿಂದೆ ಬಿಡಿಸಿದೆ ದೇವ ಕರುಣಾಳು ||
ಸಬ್ಬರರಿಯಲು ನಿನ್ನ ಮಾತಿನ |
ಹೆಬ್ಬೆಳಸು ಫಲವೊಂದಿತ್ತೈ ಬರಿ |
ಬೊಬ್ಬೆಯಾಗಿದೆ ನನ್ನ ನುಡಿಯಿನ್ನದನು ಸಲಿಸುವೆನು || ೭೧ ||

ಎನುತುಮಾಸುಗ್ರೀವನಾಡಲು |
ಮನುಕುಲೇಂದ್ರನು ಮನ್ನಿಸುತೆ |
ತನ್ನನುಜನೊಡನಾವಾಲಿ ಬಿದ್ದಿಹ ತಾಣಕಾಕ್ಷಣದೆ ||
ಮನಮರುಕದಿಂದೈದಿ ನೋಡು |
ತ್ತನುನಯಾನ್ವಿತರಿರ್ವರುಂ ಸ |
ದ್ವಿನಯದಿಂ ಸಂತೈಸುತಿರಲಾವಾಲಿಯಿಂತೆಂದ || ೭೨ ||

ಎಲೆಲೊ ರಾಮನೆ ಕಪಟವೇಷದ |
ಹುಲುಕಿರಾತನೆ ನಿನ್ನದೆಸೆಯಿಂ |
ದಳಿದವನು ನಾನೊರ್ವನೆಂದೇ ಬಗೆದು ಹಿಗ್ಗದಿರು ||
ನೆಲದೊಳಗ್ಗಳರೆನಿಪ ದಿನಮಣಿ |
ಕುಲಜರಿನ್ನೆಗವೊಲವಿನಿಂತಾಂ |
ಗಳಿಸಿದನುಪಮಕೀರ್ತಿಯೆಲ್ಲವ ಮಳಿದುದೆನ್ನೊಡನೆ || ೭೩ ||

ಮಾನವೇಶನ ದಶರಥೇಂದ್ರನ |
ಸೂನುವೆಂದೆನಿಸುತ್ತುಮಾದಿನ |
ವೇನಕಾರ್ಯವಗೈದೆ ಪಾಪಿಯೆ ಹೇಸದೇಂ ಜಗವು ||
ನೀನು ಬಂದುದನರಿತೊಡಂ ಪರ |
ಭಾನುವಂಶದ ರಾಜಪುತ್ರನು |
ಹೀನಬುದ್ಧಿಯ ಬಳಸನೆಂದಾಂ ನಂಬುಗೆಯನಿಕ್ಕೆಂಳು || ೭೪ ||

ಹಿಂದೆ ನೋಡದೆ ಬಾಹುಯುದ್ಧದೊ |
ಳಿಂದು ತೊಡಗಿರೆ ಸಮಯವೇದ್ಯೆ |
ತಂದು ಮರೆಯೊಳಗಿದ್ದು ಮುಳಿಗೆಟ್ಟಿಸುವರೇ ಶರವ ||
ಎಂದಿಗುಂ ಕುಶಿಕಾತ್ಮಜನು ಕ |
ಳ್ಹಿಂದವಿದನೊರೆದಿಹನು ನಿನಗಿದು |
ಬಂದ ಪರಿಯೆಂತೀವಿವೇಕಕ್ಕಾವನೈ ಗುರುವು || ೭೫ ||

ಮೇಲೆ ನೋಡಲು ಹುಲ್ಲು ಮುಸುಕಿದ |
ಹಾಳು ಬಾವಿಯ ತೆರದೆ ಮುನಿಗಳ |
ಜೋಲುಜಡೆಗಳನಾನುತಡಸುತ್ತೊಳಗೆ ಕಪಟವನು ||
ಜಾಲಗಾರನ ತೆರದೆ ಚರಿಸುವ |
ಖೂಳನೆಂಬುದ ನರಿಯದಾಡೆನು |
ವೇಳೆ ಮುಂಚಿದ ಬಳಿಕ ಚಿಂತಿಸಿ ಫಲವದೇನಿನ್ನು || ೭೬ ||

ತನ್ನ ಮಡದಿಯನೊಂದದರ್ಥವನು |
ನಿನ್ನ ಮಡದಿಯನರಸಿ ಕುಡುವನೆ |
ಗನ್ನಗತಕವಿದೆಂದು ತಿಳಿಯದೆ ನನ್ನ ಕೊಂದೆಯಲಾ ||
ಮುನ್ನ ವೆನಗೀಹದನಸರಿಪಿರ |
ಲಿನ್ನೆಗಂ ರಾವಣನ ಕೊಂದಾ |
ಚನ್ನೆಯನು ನಿನ್ನೆಡೆಗೆ ಸೇರಿಸದಿರ್ದನೇ ಮರುಳೇ || ೭೭ ||

ನಿನ್ನ ಗೊಡವೆಗೆ ಬಾರದೆಯೆ ಬಿಡ |
ದನ್ಯನೊಂದಿಗೆ ಸೆಣಸುತಿರುವನ |
ನನ್ನಿಯಡೆ ನೀನಿಂದು ಕೊಂದುದಧರ್ಮದಾಚರಣೆ ||
ಎನ್ನಡಗು ಭೂದೇವಪಾರ್ಥಿವ |
ರಿನ್ನರಿಗಯೋಗ್ಯವಲೆ ಪರಿಕಿಸೆ |
ತಿನ್ನದುದನೇತಕ್ಕೆ ಕೊಂದೈ ಪಾಪಿಯಾದೆಯಲಾ || ೭೮ ||

ಎಂದು ತನ್ನನು ಪಳಿವ ವಾಲಿಯ |
ನೆಂದು ನೋಡುತೆ ರಾಘವನು ಮನ |
ನೊಂದು ಧರ್ಮಾಧರ್ಮವಿವರವ ತಿಳುಹಬೇಕೆನುತೆ ||
ತಂದು ಚಿತ್ತದೊಳಾಲಿಸುವುದೆಲೆ |
ಮಂದಮತಿಯಜ್ಞಾನದತ್ತಣಿ |
ಲಿಂದು ನನ್ನನು ಜರಿದು ಪಳಿವೈ ಕೇಳು ನಿಶ್ಚಯವ || ೭೯ ||

ಭೇದವಿಲ್ಲದ ಮೈತ್ರಿ ನಿನ್ನ ಸ |
ಹೋದರನೊಳೆನಗಾಯ್ತು ನೀನಪ |
ರಾಧಿಯಾತಂಗಾಗೆ ತನಗುಂ ಶತ್ರುವಾದೆ ಕಣಾ ||
ವೋದವಾನುತ್ತವನ ಕಜ್ಜವ |
ನಾದರದೆ ಕೈಕೊಂಡು ನಿನ್ನನು |
ಭೇದಿಸಿದೆ ರಣದೊಳಗೆ ನಂಬಿದ ಮಿತ್ರನನು ಪೊರೆದೆ || ೮೦ ||

ನ್ಯಾಯಯುಕ್ತರಿಕ್ಷ್ವಾಕುವಂಶದ |
ರಾಯರೀಭೂಮಂಡಲೇಶ್ವರ |
ರಾಯುತದಿನಿಳೆಯಾಳುತಿರ್ಪರು ಧರ್ಮಮಾರ್ಗದೊಳು ||
ಕಾಯಜೋಪಮಭರತಭೂಪನ |
ಜೀಯ ಮತ್ಸಹಜಾತನೀಗಧಿ |
ನಾಯಕನು ತದ್ವಂಶಸಂಭವನವನನುಜ್ಞೆಯೊಳು || ೮೧ ||

ದುರುಳರನು ಶಿಕ್ಷಿಸುತೆ ಸಚ್ಚರಿ |
ತರನು ಸಮ್ಮಾನಿಸುತೆ ವಿಪಿನಾಂ |
ತರದೆ ಸಂಚರಿಸುತ್ತಮಿರ್ಪೆನು ಲಕ್ಷ್ಮಣಂಬೆರಸಿ ||
ಅರಿಯೆ ಮನುಜರು ಪಕ್ಷಿಮೃಗಗಳು |
ಧರೆಯ ನಿಖಿಲಪ್ರಾಣಿವರ್ಗವು |
ಚರಿಸುತಿರೆ ತಂತಮ್ಮ ಧರ್ಮದೊಳೆಮಗೆ ಸಂಮತವು || ೮೨ ||

ಉಳಿದು ಧರ್ಮವ ಕಾಮುಕತ್ವದೆ |
ಬಳಸಿ ಸೋದರನರಸಿಯುನು ಮೇ |
ಣಳುಕದಪವಾದಕ್ಕೆ ರಾಜ್ಯದಿನವನ ಹೊರವಡಿಸಿ ||
ಕಲಗಿಡಕತನವೆಸಗಿ ಕೊಬ್ಬುತೆ |
ಹೊಲಬುದಪ್ಪಿದ ನಿನ್ನ ಕೊಲುವುದು |
ಸಲುವುದೆನಗಿದು ಧರ್ಮಶಾಸ್ತ್ರದ ಮರ್ಮವಿದನರಿಯೈ || ೮೩ ||

ಘನಮನುಸ್ಮೃತಿ ಸಾರುತಿರ್ಪುದು |
ದನುಜಸುತರರಸಿಯರಿಗಳೆಪುವ |
ಮನುಜಪಾಪಿಯವಂಗೆ ತಕ್ಕುದು ಮರಣದಂಡನೆಯು ||
ಜನವು ತನ್ನಯ ಪಾಪಕೃತ್ಯ |
ಕ್ಕನುಗುಣದ ಶಿಕ್ಷೆಯನು ಪೊರ್ದಲು |
ಹನನವಾಂ ಪುವು ಗೈದ ಪಾಪಗಳೆಲ್ಲ ಮೆಂದೆನುತೆ || ೮೪ ||

ಅರಸರಿಳೆಯೊಳು ಬೇಟೆಯಾಡುತೆ |
ದೊರೆತ ಮೃಗಗಳನೆಲ್ಲ ಕೊಲುವರು |
ನಿರುತ ಶಾಖಾಮೃಗವು ನೀನೆಂದರಿತು ಕೆಡಹಿದೆನು ||
ಮರೆಯ ದೋಷವದಿಲ್ಲ ಬೇಂಟೆಯೊ |
ಳಿರಿಯಬಹುದೆಂತಾನುಮುದರಿಂ |
ದರಿಯುದೆನ್ನನು ಬರಿದೆ ಜರೆವೊಡೆ ಕೊರತೆಯಿಲ್ಲೆನಗೆ || ೮೫ ||

ಎನ್ನೊಡನೆ ನೀಂ ಸೆಣಸಲೇಂ ಮೇ ||
ಣ್ಯನೊಳು ಮಿಗೆ ಸೆಣಸಲೇನೈ |
ನಿನ್ನೊಡಲು ಕಪಿಜಾತಿಯದು ತಾನೆಂಬುದೇಂ ಪುಸಿಯೆ ||
ನಿನ್ನ ಕೊಲುವುದದೇಸಧರ್ಮವೆ |
ಬೆನ್ನದೆಸೆಯಿಂದೆಚ್ಚೊಡಂ ಕೇ |
ಳನ್ನೆಯವು ತಾನಿಲ್ಲಮೆಂದನು ದಾಶರಥಿ ನಗುತೆ || ೮೬ ||

ಅರಸನಾಡಿದ ಧರ್ಮತತ್ತ್ವವು |
ಸುರಪತನುಜನ ಮನಕದಮೃತದ |
ಸರಿಯೆ ಸುರಿದಂತಾಗೆ ಶಾಂತತೆಯೊಂದಿ ಕೈಮುಗಿದು ||
ನರಕಯಾತನೆಗಳುಕದೀಪರಿ |
ದುರಿತಗಳನೆಸಗಿರ್ಪ ತನ್ನನು |
ಕರುಣದಿಂದೀಕ್ಷಿಸುತೆ ಸದ್ಗತಿಯಿತ್ತು ಪಾಲಿಪುದು || ೮೭ ||

ಎಂದು ಕಣ್ಣೀರ್ದುಂಬಿ ರಾಮನೊ |
ಳೆಂದನೆಲೆ ದೇವಾಧಿದೇವನೆ |
ಕಂದನಂಗದನಿಂದು ಕೆಟ್ಟನು ನನ್ನ ಮರಣದೊಳು ||
ಮುಂದೆ ನಿನ್ನಯ ತನುಜನೆನುತುಂ |
ತಂದು ಕೃಪೆಯಿಂ ದೇವ ಸಲಹೈ |
ತಂದೆ ನೀನಿನ್ನವಗೆ ಬೇರಿನ್ನಿಲ್ಲ ರಕ್ಷಕರು || ೮೮ ||

ಎನುತೆ ನುಡಿವಾಸಮಯದೊಳು ತ |
ನ್ನಿನಿಯನೀಪರಿ ಬಿದ್ದನೆಂಬುದ |
ನನುಚರರ ಮುಖದಿಂದೆ ಕೇಳ್ದಾತಾರೆಯೈತಂದು ||
ಘನಮದದ್ವಿಪದಂತೆ ಬಿದ್ದಿ |
ರ್ಪನಿಮಿಷೇಂದ್ರಾತ್ಮಜನ ಕಂಡೀ |
ವಿನುತಮಂಗಳಸೂತ್ರಕಾದುದೆ ವಿಲಯವಿಂದಿನೊಳು || ೮೯ ||

ಆವನ್ಯೆ ನಿನಗಿಂತು ಗೈದವ |
ನಾವನ್ಯೆ ಪಿಂದೆಸೆಯೊಳಂಬನು |
ಜೀವಹೆದು ಬಿಲ್ಲಿಂದಮೆಚ್ಚಾಪರಮಘಾತುಕನು ||
ಭಾವದೊಳಗೆಳ್ಳನಿತು ನಾಚದೆ |
ಯಾವಕಾರಕೆ ಮನವನಿತ್ತವ |
ನಾವನ್ಯೆ ಬಲ್ಲುಹೇಡಿಯಾವನು ನೀತಿಬಾಹಿರನು || ೯೦ ||

ಕಾಂತ ನೀಂ ಪೊರಮಡುವ ಕಾಲದೆ |
ಸಾಂ ತಿಳಿಯುತಿದನೊರೆಯೆ ಚೀಭೀ |
ಭ್ರಾಂತಿಯುತೆ ನೀನೆಂದು ನನ್ನನು ಜರೆದು ನೀಂ ಬಂದು ||
ಕಾಂತಿವಿರಹಿತಸೂರ್ಯನಂದದೊ |
ಳಿಂತು ನೆಲನನು ನೆಮ್ಮಿ ಮಲಗಿರ |
ಲಿಂತು ಜೀವವ ಪಿಡಿದು ನಿನ್ನನು ನೋಡಿ ಸೈರಿಪೆನು || ೯೧ ||

ಏಳು ಕಾಂತನೆ ನಿನ್ನ ಮೋಹದ |
ಬಾಲಕನ ಸಂತೈಸು ಕಂದನು |
ಕಾಲು ದೆಸೆಯೊಳು ಬಿದ್ದು ಹೊರಳುವನೇಕೆ ಸುಮ್ಮನಿಹೆ ||
ಹೇಳು ಬುದ್ಧಿಯನಿವಗೆ ಮುಂದಿ |
ನ್ನಾಳುಗೆಲಸವ ಕಲಿತು ಭೂಮೀ |
ಪಾಲಸುಗ್ರೀವನನು ಸೇವಿಸಿ ಬದುಕು ನೀನೆಂದು || ೯೨ ||

ಪತಿಯೆ ನಿನ್ನುದರದೊಳು ಬಂದೀ |
ಕ್ಷಿತಿಯನಾಳುವ ಪುಣ್ಯವಿಲ್ಲದೆ |
ಗತಿವಿಹೀನರ ತೆರದೊಳಾದನು ಕಂದನಂಗದನು ||
ಪತಿತನಾಸುಗ್ರೀವನೆಮ್ಮನು |
ಹಿತದೆ ಕಾಣ್ಬನೆ ಮುಂದೆ ತಮಗಾ |
ರ್ಗತಿಯು ಪೇಳೆಂದಬಲೆ ಗೋಳಿಡೆ ನುಡಿದನಾವಾಲಿ || ೯೩ ||

ಅರಸಿ ನನ್ನನು ತೆರಳಬೇಡೆಂ |
ದೊರೆದ ನಿನ್ನಯ ನುಡಿಯ ಮೀರಿಯೆ |
ಧುರಕೆ ಬಂದುದರಿಂದಮೀದುರ್ಗತಿಯನೊಂದಿದೆನು ||
ಧರಿಸಿ ಧೈರ್ಯವನಾಂತು ತಾಳ್ಮೆಯ |
ತರಳನನು ಸಂತೈಸಿ ನನ್ನೀ |
ಹರಣ ತೊಲಗಿದ ಮೇಲೆ ಸುಗ್ರೀವನನು ನೆರೆ ನಂಬು || ೯೪ ||

ಆತನನುಮತವಿಡಿದು ನಡೆವುದು |
ನೀತಿ ನಿನಗೆಂದೊರೆದು ಮಗನಂ |
ಪ್ರೀತಿಯಿಂದಾಲಿಂಗಿಸುತ ಸುಗ್ರೀವನನು ಕರೆದು ||
ಭೀತಿಯಾಂತಿಹ ನಿಜಸತೀತನು |
ಜಾತರನು ಕೈವಿಡಿದು ಬಹುವಿ |
ಖ್ಯಾತಿವಡೆವವನಾಗು ನೀನೆಂದೊರೆದು ನಲವಿನಲಿ || ೯೫ ||

ತನ್ನ ಕಂಠದ ರತ್ನಹಾರವ |
ಮುನ್ನ ಸುರಪತಿಯಿಂದೆ ಬಂದಿಹು |
ದಿನ್ನು ನೀನಿದ ಧರಿಸೆ ನಿನಗತಿಭಾಗ್ಯವೊದವುವುದು ||
ನನ್ನಿಯೆಂದದನಿತ್ತು ಕೊಡಳುತ್ತೆ |
ತನ್ನ ದಾರಿಯು ಸೋಲ್ಪೆನೆನ್ನುತೆ |
ಸನ್ನುತಾಂಗನ ರಾಮಚಂದ್ರನ ನೋಡುತಸುವಳಿದ || ೯೬ ||

ಹೇವರಿಸಿದನು ತನ್ನ ಮಾಳ್ಕೆಗೆ |
ಭಾವದೊಳು ಕಡು ನೊಂದನಾಸು |
ಗ್ರೀವನೈದಿ ನರೇಂದ್ರಚಂದ್ರನ ಚರಣಕೆರಗಿದನು ||
ದೇವ ಕೃಪೆಯಿಂದೆನಗನುಗ್ರಹ |
ವೀವುದೀದಿನವಣ್ಣನೊಡನೆಯೆ |
ಜೀವವನು ನಾಂ ಬಿಡುವೆನೊಲ್ಲೆನು ರಾಜ್ಯವೈಭವವ || ೯೭ ||

ದೇಶಕೋಶವನುಳಿದೆನೆಂಬಾ |
ಕ್ರೋಶದಿಂ ನಿನ್ನಿಂದಮೀಬಲು |
ಹೇಸಿಕೆಯ ಕಾರ್ಯವನು ಗೈಸಿದೆನಲ್ಲದಿನ್ನಿಲ್ಲ ||
ಆಸೆ ರಾಜ್ಯದೊಳಿಲ್ಲ ಮೆನಗೀ |
ಕೀಶಪತಿಸುತನಂಗದಂಗಿದೊ |
ಸೇಸೆದಳಿವೆನು ಮಾತೆಯೊಡನಿವನಾಳಲೀನೆಲನ || ೯೮ ||

ಈತನತಿಸಂಪನ್ನಸದ್ಗುಣಿ |
ನೀತಿವಿದನಿವನೊಳಗೆ ರಾಜ್ಯವ |
ನೋತು ನೀನಿರಿಸಿದೊಡೆಯೊಪ್ಪಿಕೆಯಹುದು ಜಗಕೆಲ್ಲ ||
ಪಾತಕಿಯನಿಂದೆನ್ನನಿರಿಸಲ್ |
ಖ್ಯಾತಿ ಬಪ್ಪುದೆ ನಿನಗೆ ಸುಜನ |
ವ್ರಾತ ನಗುವುದು ದೇವ ತನಗಿನ್ನಾಜ್ಞೆಯಾಯೆಂದ || ೯೯ ||

ಕಂಡನಿವರಳಲಿಕೆಯನಾಕೋ |
ದಂಡಧರನಾಕ್ಷಣದೆ ತನ್ನಯ |
ಗಂಡನೊಡಲಿನ ಮೇಲೆ ಬೀಳುತ್ತಳ್ದು ಶೋಕದೊಳು ||
ಕಂಡತೆರದೊಳು ಹೊರಳುತಿರ್ಪಾ |
ಪುಂಡರೀಕಾಂಬಕೆಗೆ ಮರುಕಂ |
ಗೊಂಡು ಸನಿಹಕೆ ಸಾರೆ ಕಂಡಳು ತಾನೆ ಚಿನುಮಯನ || ೧೦೦ ||

ರಾಮ ಜಗದಭಿರಾಮ ಸದ್ಗುಣ |
ಧಾಮ ನೀನಾಗೆನ್ನ ರಮಣನ |
ನೀಮಹೇಂದ್ರಾತ್ಮಜನ ಮರೆಯೊಳು ನಿಂದು ಕೊಂದಿಂದು ||
ವ್ಯೋಮಕೇಶನೆನಿಪೊಡಂ ಜಡ |
ಭೂಮಿಯೊಳು ನರಜನ್ಮವೆತ್ತಲು |
ತಾಮಸದ ಜಂಜಡವು ಬಿಡದೆಂಬುವನು ನೀಂ ತೋರ್ದೆ || ೧೦೧ ||

ದೇವ ನಿನ್ನೀನಾಟಕವ ತ |
ತ್ತ್ವವಧಾರಕರರಿವರಿತರರಿ |
ಗೀವಿಚಾರದೊಳಿಲ್ಲ ಬಳಕೆಯು ತಿಳಿವರೆಂತವರು ||
ಪಾವನನೆ ನೀನೆನ್ನ ರಮಣನ |
ನಾವಲೋಕಕೆ ಕೊಂದು ಕಳುಹಿದೆ |
ಭಾವಿಸುತ್ತಾಪರಿಯೊಳೆನ್ನನು ಸಾಗಿಸವನೆಡೆಗೆ || ೧೦೨ ||

ಉಳಿಯಲಾರೆನು ಪತಿಯ ಕಾಣದೆ |
ಬಳಿಯ ಸೇರಿಸು ನನ್ನನೆಂದಿಂ |
ತಳುವ ತಾರೆಯ ಸಂತವಿಸಲೆಂದಾಗ ರಾಘವನು ||
ಲಲನೆ ತಾರಾದೇವಿ ನೀನೇಂ |
ತಿಳಿಯದಜ್ಞೆಯೆ ವಿಧಿಯ ಬರೆಹವ |
ನಳಿಸಲಾರಿಂದಳವು ಮೀರುವರಾರು ತಾವದನು || ೧೦೩ ||

ಶೂರನೆನಿಸಿದ ಪತಿಯ ಸೇರಿದ |
ವೀರಪತ್ನಿಗೆ ಕಮಲಭವನೇ |
ಗೀರಿಹನು ವೈಧವ್ಯರೇಖೆಯ ಪಣೆಯ ಮಧ್ಯದೊಳು ||
ಧೀರೆ ನೀನದರಿಂದೆ ದುಃಖಕೆ |
ಮಾರದಿರು ಹೃದಯವನು ನಿನ್ನ ಕು |
ಮಾರನಾದಂಗದನಿಗೀವೆನು ರಾಜ್ಯಲಕ್ಷ್ಮಿಯನು || ೧೦೪ ||

ಕೇಳು ನೀಂ ಸುಗ್ರೀವ ಲಾಲಿಸು |
ಕೇಳು ನೀನಂಗದನೆ ಪವನಜ |
ಕೇಳು ನಳನೀಲಾದಿವಾನರಮುಖ್ಯರಿರ ಕೇಳಿ ||
ಕಾಲಮಾರಿಂ ಮೀರಲಪ್ಪುದು |
ಕಾಲಕಿಲ್ಲವು ಬಂಧುಮಿತ್ರರು |
ಕಾಲವೆಲ್ಲಾ ಜಗವ ನೊಣೆವುದು ಸಕಲಕದು ಮೇಲು || ೧೦೫ ||

ಕಾಲದಿದಿರೊಳು ಮಿಡುಕು ನಡೆಯದು |
ಕಾಲವಿತರರ ಗಣನೆಗೊಳ್ಳದು |
ಕಾಲವೇ ಕಾರಣವು ಜಗಕದಕಿಲ್ಲ ಪರಿಮಿತಿಯು ||
ಕಾಲ ಮನುಜಗೆ ಪುಣ್ಯಪಾಪದ |
ಹೋಲಿಕೆಯು ಸುಖದುಃಖವೀವುದು |
ಕಾಲವಿದು ತಾಂ ಮುಳಿಯೆ ವಾಲಿಯದೆಂತು ಜೀವಿಸನು || ೧೦೬ ||

ನಾವು ನೀವೀಸೂರ್ಯಚಂದ್ರರು |
ದೇವದಾನವಮುಖ್ಯರೆಲ್ಲರು |
ಮಾವಗಂ ನಡೆಯಿಸಲೆಬೇಕಾಕಾಲದಾಜ್ಞೆಯನು ||
ಭಾವಿಸಲು ಮತ್ಪ್ರಾಣನಾಯಿಕೆ |
ದೇವಿ ವೈದೇಹಿಯನು ನಾಂ ತೊರೆ |
ದೀವಿಷಾದದೊಳಿರ್ಪುದಿದು ಕಾಲಪ್ರಭಾವವಲೇ || ೧೦೭ ||

ಆದುದರಿನುಳಿದೀಗ ಚಿಂತೆಯ |
ನೈದೆ ಮುಂದಣ ಕಾರ್ಯವಾವುದೊ |
ಯೋಧರಿರ ನೀವದನು ಗೈವುದು ನೀತಿಸಂಮತವ ||
ಮೇದಿನೀಪತಿಯೋಗ್ಯಮಾದಾ |
ಸಾಧನಂಗಳನೆಲ್ಲಮೊದವಿಸು |
ತೀಧುರಂಧರವಾಲಿಗುತ್ತರಕರ್ಮವೆಸಗಿಮೆನೆ || ೧೦೮ ||

ಆಗಲೆಂದೊರೆದದಕೆ ಬೇಹುದ |
ನಾಗಳೊದವಿಸಿ ಶವವನಲ್ಲಿಂ |
ಬೇಗ ಸಾಗಿಸಿ ಚಿತಿಯ ವಿರಚಿಸಿ ದಹಿಸಿ ಸಂಸ್ಕರಿಸಿ ||
ರಾಘವನ ಬಳಿಗೈದಿ ಜೋಡಿಸಿ |
ಕೈಗಳನು ನಮಗರಸನಿನ್ನಾ |
ರಾಗುಹೋಗೆಂಪರಿಯೊ ಕರುಣಿಪುದೆಂದರವರೆರಗಿ || ೧೦೯ ||

ಅರಸನೆಂದನು ಸಚಿವವರ್ಯರೆ |
ಭರದಿನೀಸುಗ್ರೀವಗೊಪ್ಪಿಸಿ |
ಮೆರೆವ ಕಿಷ್ಕಿಂಧಾಧಿಪತ್ಯವ ಯೌವರಾಜ್ಯವನು |
ತರಳನಂಗದಗಿತ್ತು ಪೂರ್ವದ |
ಹಿರಿಯರಾಪದ್ಧತಿಯ ಮೀರದೆ |
ಪರಮಭಕ್ತಿಯೊಳಿವರ ಸೇವಿಸುತಿಹುದು ಪದುಳದೊಳು || ೧೧೦ ||

ಎಂದು ರಾಮನು ನುಡಿಯೆ ಪರಮಾ |
ನಂದಪರವಶರಾಗಿ ಸಕಲರು |
ವಂದನೆಯನಿರದೆಸಗಲಾಸುಗ್ರೀವ ಕೈಮುಗಿದು ||
ತಂದೆ ರಾಘವ ಯಾಚಿಸುವೆನಿದ |
ನೊಂದನೀದ್ಯೈತಂದು ಪುರಕೆ |
ನ್ಮಿಂದೆ ಪೂಜೆಯನೊಂದಿ ನಮ್ಮನು ಸಲಹು ನೀನೆನಲು || ೧೧೧ ||

ವಿಹಿರಸುತ ನೀನೆಂದ ನುಡಿ ತಾ |
ನಹಿತವಲ್ಲವಿದಾಮೊಡಂ ಬಡಿ |
ಸಿಹೆನು ನಿಜತಾತಂಗೆ ಪುರವನು ಪುಗುವುದಿಲ್ಲೆಂದು ||
ವಿಹಿತಮದು ಪದಿನಾಲ್ಕುವತ್ಸರ |
ಗಹನವಾಸವು ಮುಗಿಯೆ ಪುಗುವುದು |
ವಹಿಸಿ ಮುನ್ನಿನ ಚಿಂತೆಗೊಳ್ಳದೆ ತೆರಳು ಪುರಕಿಂದು || ೧೧೨ ||

ಧರಣಿಭಾರವನಾಂತು ಶಕ್ರನ |
ಜರೆವ ಸಂಪದಕೊಡೆಯನೆನಿಸು |
ತ್ತರಸಿಯುಹ ರುಮೆಯೊಡನೆ ಭೋಗೋತ್ಸವವನನುಭವಿಸಿ ||
ಮೆರೆವ ವರ್ಷರ್ತುವನು ಕಳೆ ನೀಂ |
ಶರದಮೈದಲ್ಕಾಗ ಕಪಿಬಲ |
ವೆರಸಿ ರಾವಣವಧೆಗೆ ಪೊರಮಡು ತಕ್ಕಸಮಯವದು || ೧೧೩ ||

ಮೆರೆವ ಮಾಲ್ಯವದಾಖ್ಯಮಾದಾ |
ಗಿರಿಯ ಗುಹೆಯೊಳಗನುಜನೊಡನಾ |
ನಿರುವೆನಾಪರಿಯಂತ ನೀನಿನ್ನೆಂದು ಪುರಕೆನಲು ||
ಪರಮಕರುಣಾರ್ಣವನೆ ಬೆಸನನು |
ಶಿರದೊಳಾಂತೆನೆನುತ್ತ ಮೆರಗುತೆ |
ಪರಿಜನಂಬೆರಸೊಲ್ದು ತೆರಳಿದನಂದು ಸುಗ್ರೀವ || ೧೧೪ ||

# ಎರಡನೆಯ ಸಂಧಿ.

ಸೂಚನೆ || ಸೀತೆಯನು ಹುಡುಕುತ್ತ ಕಾಣದೆ |
ಸೋತಮನದಾಕಪಿವರರು ಸಂ |
ಪಾತಿಯಿಂ ನೆಲೆಯರಿತು ಸೇರ್ದರು ತಡಿಯನಾಕಡಲ ||

ಶರಣಜನ ಬೀಳ್ಕೊಟ್ಟು ರಾಘವ |
ನಿರದೆ ಸೋದರನೊಡನಡರ್ದ |
ನಿರತಿಶಯವಿಸ್ತೀರ್ಣವಾಗಿಹಮಾಲ್ಯವದ್ಗಿರಿಯ ||
ಕರೆದು ಸೌಮಿತ್ರಿಯನು ನೋಡೀ |
ಗಿರಿಯೊಳಿಹ ಗುಹೆಗಳನು ನಾವೀ |
ಬರಿಸರಿತುವನು ಕಳೆಯಲಿತ್ತಲು ಯೋಗ್ಯವಾಗಿಹುದು || ೧೧೫ ||

ನಿಟ್ಟಿಸಲ್ಕೀಪರ್ವತೇಂದ್ರನು |
ತೊಟ್ಟ ರತ್ನಾಭರಣವೆಂದೆನ |
ಲಿಟ್ಟಣಿಸಿ ಮೆರೆವಖಿಳವರ್ಣದ ಶಿಲೆಗಳಿಲ್ಲಿರ್ಪುವು ||
ಉಟ್ಟಿಹಳೊ ತಾಂ ಶೋಣವಸನವ |
ದಿಟ್ಟ ಭೂವಧುವೆಂಬವೋಲು ಬಲು |
ದಟ್ಟತಾಗಿಯೆ ತೋರ್ಪ ಗೈರಿಕದೆಡೆಯ ನೋಡೆಂದ || ೧೧೬ ||

ಇಲ್ಲಿ ನಾವಿನ್ನಿರ್ಪೆವೆನುತಾ |
ಸಲ್ಲಲಿತಗುಣಸಿಂಧುಗಳಿರಲಾ |
ಗೆಲ್ಲೆಡೆಯನಾವರಿಸಿ ಕೊಂಡುದು ಕಾರ್ಮುಗಿಲ ಗಡಣ ||
ಚಲ್ಲಿದುದು ಬಲುಮಳೆಯನದು ತಾ |
ನೆಲ್ಲೆಯುಂ ಬಿರುಗಾಳಿ ಬೀಸಿತು |
ನಿಲ್ಲಲಾರವೆ ಜೀವತತಿಗಳು ತಲೆಯ ಮರೆಸಿದುವು || ೧೧೭ ||

ಸುತ್ತಲುಂ ಕವಿದಿರ್ಪ ಮುಗಿಲಿಂ |
ಕತ್ತಲೆಯು ತಾನಾಗೆ ಸೂರ್ಯನ |
ಗೊತ್ತನರಿಯದೆ ನಿತ್ಯಕರ್ಮವ ಗೈವ ಜನನಿಕರ ||
ತತ್ತರಿಸಿ ಪಕ್ಷಿಗಳ ಗತಿಯಿಂ |
ಹೊತ್ತನರಿವಂತಾಯ್ತು ಬಿಸಿಲಿಂ |
ಬತ್ತಿದಾಕೆರೆಕಟ್ಟೆ ಜಲದಿಂ ತುಂಬಿತುಳುಕಿದುವು || ೧೧೮ ||

ಋತುವು ತಲೆದೋರ್ದೊಡನೆ ಭರದಿಂ |
ಕ್ಷಿತಿಯು ಪೊಳೆವೆಣ್ಗಳ್ಗೆ ಮುಗಿಲಿಂ |
ಅತಿಪಯೋವಿಸಂಗಳೊಳು ಗರ್ಭವ ಮೂಡಿ ಬಳೆಸುದರಿಂ ||
ವಿತತಕಷ್ಟವದಾಗೆ ಹೆಂಗೆಯು |
ಬೆತೆಯು ಸೈಸದೆ ಯುವನು ಮೊರೆಯು |
ಶ್ರುತಿಭಯಂಕರರವದೊಳೋಡುತೆ ಬಿದ್ದನಬುಧಿಗೆ || ೧೧೯ ||

ನದಿಗಳುಬ್ಬುತೆ ಹರಿದು ಜಲಧಿಯ |
ನೊಡೆವೊಲೆಸೆದುವು ಮುಗಿಲ ಕೆಡದಿಂ |
ತ್ರಿದಶರಭಿಷೇಕಿಪಸು ಗಿರಿವರಲಿಂಗಗಳನೊಲಿದು ||
ವಿದಿತಮಪ್ಪುದಿದೆಂಬವೊಲು ಮಳೆ |
ಯಧಿಕವಾಗುತೆ ಭುವನವೆಲ್ಲವು |
ಮುದಕಮಯಮಾಗಲ್ಕೆ ಸುರಿದುದು ಪಗಲಿರುಳು ಬಿಡದೆ || ೧೨೦ ||

ಅತ್ತಲಾಸುಗ್ರೀವ ಘನಸಂ |
ಪತ್ತನಾಂತುರೆ ಮಂತ್ರಿಗಳ ವಶ |
ಕಿತ್ತು ರಾಜ್ಯದ ವಹಿತವನು ನಿಜಪತ್ನಿಯರ ಸೇರಿ ||
ಚಿತ್ತಜಾತನ ಕೇಳಿಯಿಂದು |
ನ್ಮತ್ತನಾಗುತೆ ಮಳೆಯ ದಿನಗಳ |
ನೊತ್ತಿ ಶರದೃತುವೈದಿತೆಂಬುದನಂದು ಲೆಕ್ಕಿಸನೆ || ೧೨೧ ||

ಭಾನುಕುಲಜಂಗಿತ್ತ ಗಡುಬವು |
ತಾನು ಮುಗಿದುದನರಿಯದಿರುತಿರ |
ಲಾನರೋತ್ತಮನಾಗ ಕೆರಳುತೆ ಲಕ್ಷ್ಮಣನ ಕರೆದು ||
ವಾನರೇಂದ್ರರ ಮೈತ್ರಿಗೊಂಡುದ |
ಕೇನು ಫಲವೆಮಗಾಯ್ತು ಕಂಡೆಯ |
ಹೀನಜನಕುಪಕೃತಿಯನೆಸಗಲು ನೆನೆವರೇನದನು || ೧೨೨ ||

ಆಡಿದಾಭಾಷಿತವ ನೆರೆ ಕಾ |
ಪಾಡಲೋಸುಗ ಬೆದರದಾರಿಪು |
ಬಾಡಬಾನಲಸದೃಶನಹ ವಾಲಿಯನು ಸಂಹರಿಸಿ ||
ಕೇಡುಗನನೀರಾಜ್ಯಕೊಡೆಯನ |
ಮಾಡಿ ನಿಲ್ಲಿಸಿದುದಕೆ ತನಗೀ |
ಪಾಡು ಬಂದುದು ಬಹುಕೃತಘ್ನನು ದಿನಪಸಂಭವನು || ೧೨೩ ||

ಖೂಳನಿರ್ಪಡೆಗೈದಿಯಿರಾಗಳೆ ।
ಪೇಳುವುದು ನಾವಿಂದು ನಿನ್ನು ।
ದಾಢ್ಳಿಕೆಗೆ ಭಯವೊಂದಿ ಸಖ್ಯವ ಬಳೆಯಿಸಿದೆವೆಂಬ ॥
ಕೇಳುಬುದ್ಧಿಯುಂ ನಿನ್ನೊಳೊಗೆದಿರೆ ।
ವಾಲಿಗೋಸುಗ ಸಜ್ಜುಗೊಳಿಸಿದ ।
ಕಾಲನಗರಿಯ ಕದವು ತೆರದಿದೆ ನಿನ್ನ ಪಯಣಕ್ಕೆ ॥ ೧೨೪ ॥

ಆಗದಾನಡೆ ನಿನ್ನೊಳಿಂದೊಡೆ ।
ಬೇಗನೈದುವುದೆಮ್ಮ ಬಳಿಗಿರ ।
ದೀಗ ಕಪಿಬಲವೆರಸಿ ಮುಂದಣ ಕಾರ್ಯಸಾಧನೆಗೆ ॥
ಸಾಗದೆಮ್ಮೊಳು ನಿನ್ನ ಜಪಂತೆ ।
ಯೋಗಡಿಕೆ ತಾನೆನ್ನುತವನನು ।
ಪೋಗಿ ಬೆದರಿಸಿ ನೀನು ಬೇಗನೆ ಕರೆದುತಹುದೆಂದ ॥ ೧೨೫ ॥

ದುಡುಕದಿರು ನಾನೆಂದಪರಿಯೊಳು ।
ತಡೆದು ಕೋಪವ ತಾಳ್ಮೆಯಿಂ ನೀಂ ।
ನಡೆವುದೊಳ್ಳಿತೆನುತ್ತೆ ಮುಗುಳೆಚ್ಚರಿಸಿ ಕಳುಪಲ್ಕೆ ॥
ತಡೆಯದಾಗಳೆ ಪಿಡಿದು ಬಿಲ್ಲನು ।
ನಡೆದು ಕಿಷ್ಕಿಂಧೆಗುರೆ ಕಣ್ಣೊಳು ।
ಕಿಡಿಯನುಗುಳುತೆ ರೋಷದಿಂದಾಕಾಹಿನವರುಗಳ ॥ ॥ ೧೨೬ ॥

ಕರೆದು ನೀವೀಗಿರದೆ ಬಳಿಸಾ ।
ರ್ದರಸಸುಗ್ರೀವಂಗೆ ಲಕ್ಷ್ಮಣ ।
ನುರುಧನುರ್ಧರನಾಗಿ ಬಂದಿಹನೆಂದು ಪೇಳುವುದು ॥
ಅರಿತುಬಂದೊಡೆ ಲೇಸು ಬಾರದೆ ।
ಬೆರೆತು ನಿಂದೊಡೆ ನಾನೆ ಬರ್ಪೆನು ।
ಪಿರಿಯಕಜ್ಜವದುಂಟು ನಿನ್ನೊಳಗೆನುತೆ ಪೇಳುವುದು ॥ ೧೨೭ ॥

ಎಂಬ ನುಡಿವಾಲಕ್ಷ್ಮಣನ ಮನ ।
ದಂಡವನು ತಾವರಿಸು ಕಪಿಗಳು ।
ಬಂದು ದಾರಿಯೊಳಂಗದನ ಕಂಡರುಹಲವನಿರದೆ ॥
ಇಂದಿದೇನಿಂತಾದುದೆಂದೈ ।
ತಂದು ಲಕ್ಷ್ಮಣದೇವನಂಘ್ರಿಗೆ ।
ವಂದಿಸುತೆ ಸರ್ವಾಪರಾಧವ ಮನ್ನಿಸುವುದೆನಲು ॥ ೧೨೮ ॥

ಎಲ್ಲಿಹನು ಕಿರಿಯಯ್ಯ ನಿನ್ನವ |
ನಲ್ಲಿಗೊಯ್ಯುದು ನಮ್ಮನಿಂದೆನೆ |
ಬಲ್ಲಿದನೆ ನೀನಿತ್ತ ಬಿಜಯಂಗೈಯಬೇಕೆನುತೆ ||
ಮೆಲ್ಲನವನಾಕೋಶಮೂಲವ |
ನೆಲ್ಲವರಿಯುತೆ ಮನದೆ ಸುಗಿದ |
ಲ್ಲಲ್ಲಿ ರಕ್ಷಿಪುದೆಂದು ಯಾಚಿಸುತರಮನೆಯ ಸೇರಿ || ೧೨೯ ||

ಮೆರೆವ ಮಣಿಮಯಪೀಠವಿತ್ತಿದೊ |
ಕರೆದು ತಹೆನೆಂದಾಗಳಂತಃ |
ಪುರವ ಪೊಕ್ಕಲ್ಲರಸಿಯರ ಮೇಳದೊಳು ಮಂಡಿಸಿಹ ||
ಸುರೆಯ ಪಾನದಿ ಮದಿಸಿ ಸೊಕ್ಕಿಹ |
ಸರಸಿಜಾಕ್ಷಿಯರಂಗಸಂಗದೆ |
ಪರಮಸದ್ಗತಿಯೆಂಬ ಕಾಮಿನಿಪರ್ಣಶಾನಡಿಗೆರಗಿ || ೧೩೦ ||

ಕಾತ ಬಂದಿಹನೇಳು ನೃಪನಹ |
ಜಾತನಾತನ ಕೋಪಶಿಖಿಗಾ |
ವಾತ ನಿಲುವನು ನಿನ್ನ ಬರಹೇಳೆಂದು ಗರ್ಜಿಸುತೆ ||
ಭೂತನಾಥನ ತೆರದೆ ಮೆರೆವನ |
ದೇತೆರವೊ ನಮಗಿಂದು ಕಾಣೆನು |
ನೀತಿನಿಪುಣನೆ ಬೇಗನೇಳೆನೆ ಕೇಳಿ ಕಪಿವರನು || ೧೩೧ ||

ದಡದಡಿಸುತೆದೆ ಪಾರೆ ಕಾಲ್ಗಳು |
ತೊಡರುತಿರೆಯೊಡಬಲಕೆ ಹೊರುತೆ |
ನಡುಗುತಂಜಿಕೆಯಿಂದೆ ನಡೆಯುತಾಸಭಾಂಗಣಕೆ ||
ಕಡುಹುಕಾರರನಾಪ್ತಸಚಿವರ |
ನೊಡನೆ ಬರಿಸಿಂದಿದಕುಪಾಯವ |
ನುಡಿವುದೆನಲಾಪಾವಮಾನಿಯು ತಳುವದಿಂತೆಂದ || ೧೩೨ ||

ಅರಸ ಪೇಳುವುದೇನು ಕಳೆಯ |
ಲ್ವರಿಸರಿತು ಬಹೆನೆಂದು ನೀಂ ರಘು |
ವರನೊಳಾಡಿಯುಮಂತು ಗೈಯದೆಯಿಂತು ತಳುವುತಿರೆ ||
ನೆರೆವವನ ಕೋಪಾಗ್ನಿ ನೀತಾ |
ವಿರಹಚಿಂತಾವಾತರಭಸದಿ |
ನುರಿಯನುಗುಳುತ್ತಿಮ್ಮ ದಹಿಸದೆ ಸುಮ್ಮನಿಂತಿಹುದು || ೧೩೩ ||

ಕೊಟ್ಟ ಭಾಷೆಯ ಸಲಿಸಿ ನಿನ್ನನು |
ಪಟ್ಟದರಸನೆನಿಸಗಿ ನೆರೆತ |
ನ್ನಿಷ್ಟಸಾಧನವೊಡನೆ ನಿನ್ನಿಂದಪ್ಪುದೆಂದೆನುತೆ ||
ಬಿಟ್ಟ ಕಣ್ಣಿಂ ನಿನ್ನ ಬಟ್ಟೆಯ |
ನಿಟ್ಟಿಸುತ ಕಾದಿಪ್ಪ ನೃಪತಿಗೆ |
ಸಿಟ್ಟು ಬಪ್ಪುದಿದೇನು ಚೋದ್ಯವೆ ಬಗೆದು ನೋಡಲ್ಕೆ || ೧೩೪ ||

ಆದರಿನೀಗಳೆ ಲಕ್ಷ್ಮಣನ ಸ |
ನ್ನಿಧಿಗೆ ತಾರಾದೇವಿ ಸಾರ್ದರೆ |
ಚದುರತನದಿಂದವನ ಚಿತ್ತವ ತಿದ್ದಿದಾಬಳಿಕ ||
ಪದೆಪಿನಿಂ ನೀಂ ಪೋಗಿ ಕಾಣ್ಬುದು |
ಪದುಳವೆನಿಸುವುದೆಂದು ತಿಳಿಪ |
ಲ್ಕದು ವಿಧಾನವು ಯೋಗ್ಯವೆಂದರು ಮಿಕ್ಕಮಂತ್ರಿಗಳು || ೧೩೫ ||

ತೆರಳಿದನು ಸುಗ್ರೀವನಂತಃ |
ಪುರಕೆ ಕರೆದನು ತಾರೆ ಬಾರೆ |
ನ್ನಿರವನಾಲಿಸು ನಿನ್ನ ಕರಗತವೆನ್ನ ಜೀವನವು ||
ಅರಸನನುಜನ ಬಳಿಯ ಸಾರ್ದರೆ |
ಮರುಕವನು ಪುಟ್ಟಿಸುವ ಜಾಣ್ಮೆಯ |
ಸರಸವಚನದಿನಾಡಿಯಾತನ ಭೀತಿಯ ನೀಂ ಬಿಡಿಸು || ೧೩೬ ||

ಬರುವೆನಾಂ ಬಳಿಕಿನ್ನು ನಡೆಯೆಂ |
ದೊರೆಯೆ ಸೇರ್ದಳು ವೀರ ಮನವನು |
ಕರಗಿಸುವ ಜಾಣ್ನುಡಿಯ ಚದುರೆಯು ಲಕ್ಷ್ಮಣನ ಬಳಿಯ ||
ಅರಸ ಬಿಡುಬಿಡು ಕೋಪವಿದು ಪಾ |
ಮರರೊಳಿಪ್ಪೊಲು ತರವೆ ಕರುಣಾ |
ಕರನೆ ನಿನ್ನಿಂತಾಗಲಾಪಿನ್ನಾರ ಸೇರುವೆವು || ೧೩೭ ||

ಅರಿಯದಾತನು ಗೈದ ತಪ್ಪನು |
ಪರಮಪುರುಷನೆ ನೀನು ಮನ್ನಿಸಿ |
ಪೊರೆಯಬೇಕುದೆನುತ್ತೆ ಕೈಗಳ ಮುಗಿದು ಯಾಚಿಸಲು ||
ಕರಗಿತಾತನ ಹೃದಯವಾಕ್ಷಣ |
ಪರಿದುದುಬ್ಬರವಾದ ಕೋಪವು |
ಸರಸಿಜಾಕ್ಷಿಯ ಮನ್ನಿಸುತೆ ಸೌಮಿತ್ರಿಯಿಂತೆಂದ || ೧೩೮ ||

ತರಳೆಯಿಚಾಕರಿ ವಿನಯಗುಣ ನಿ |
ಮ್ಮರಸನಲ್ಲಿರೆ ಲೇಸದೆಸಿಪುದು |
ಪರಿಕಿಸಲ್ಕವನಲ್ಲಿ ಕಾಣೆವು ಲೇಶಮಾತ್ರವನು ||
ವರಿಸರಿತು ಮುಗಿವನಿತರೊಳು ತಾಂ |
ಬರುವೆನೆಂದಂದೊರೆದ ನುಡಿಯನು |
ಮರೆತು ಗಣಿಸದೆ ನಮ್ಮನೋರಂತುಬ್ಬಿ ಕೊಬ್ಬಿಕಸು ||೧೩೯||

ಕಿಡಿಸಿ ಧರ್ಮಾರ್ಥವನು ತನಗಾ |
ರೊಡೆಯರವರಿಗೆ ಹಿತವನೆಣಿಸದೆ |
ಕುಡಿದು ಮಧುವನು ಕಾಮದಿಂ ಪ್ರಭುಧರ್ಮವನು ನೀಗಿ ||
ನುಡಿದು ಭಾಷೆಯ ದಂಡಯಾತ್ರೆಗೆ |
ತೊಡಗಿದೆಮ್ಮನು ತಡೆದು ಕಡುಪಿಂ |
ಬಿಡದನರ್ಥವ ಗೈದನೀನಡೆ ನಿನಗೆ ಸಮ್ಮತವೆ ||೧೪೦||

ಪೇಳು ನೀನೆನಲಾಗಳೆಂದಳು |
ಕಾಲ ಮೀರಿದುದೆಂಬ ಚಿಂತೆಯು |
ತಾಳಲಾಗದು ಕೊರತೆ ನಿಮಗದರಿಂದಮೇನಹುದು ||
ಮೇಲೆ ಗಗನಕೆ ಹಾರಿ ಪೋಪರು |
ಕಾಲುಹೊಳೆಯನೆ ಕಡಲ ಹಾಯ್ವರು |
ವಾಲಧಿಯ ಭಟರೇನನೆಸಗರೊ ನಿನ್ನ ಕಿಂಕರರು ||೧೪೧||

ಒರೆಯಹನು ಪತ್ರವನು ವಾನರ |
ರರಸನೆಲ್ಲಾ ದೇಶದೊಳಗಿಹ |
ವರಕಪೀಂದ್ರರಿಗಿರದೆ ಬರುತಿಹರವರು ಪಡೆವೆರಸಿ ||
ಕರಡಿಯಬರ್ಗಡವೊಂದು ಮುಸುಬಗ |
ಕೋಡುಕೋಟಿಗಳೆಣಿಸೆ ಕಪಿಗಳು |
ಧರಣಿಯುಗಲದೆ ತುಂಬಿ ಬರುತಿವೆ ಗಣನೆಗಸದಳವು || ||೧೪೨||

ನೆರೆದ ಬಳಿಕಿವರೆಲ್ಲ ರೊಡನೆಯೆ |
ಅರಸನಲ್ಲಿಗೆ ಪೋಗಬೇಕೆಂ |
ದಿರುವನಲ್ಲದೆ ಬೇರೆ ಭಾವನೆಯಿಲ್ಲ ಕಪಿಪತಿಗೆ ||
ಬರುತುಮಿರ್ಪನು ನೋಡು ನಿನ್ನಯ |
ದರುಶನಕೆ ನೀಂಮುಳಿವೆಯಾದೊಡೆ |
ಕೊರಗುತಸುವನು ಬಿಡುವನದರಿಂ ಮುಂದೆ ಕೇಡಹುದು ||೧೪೩||

ಎಂದೊರೆವಸಮಯಕ್ಕೆ ಭಾಸ್ಕರ |
ನಂದನನು ಕಡುದುಗುಡಗೊಂಡೈ |
ತಂದು ವಿನಯದೆ ಘನವಮಹಿಮ ನಿನಗೇತಕೀಬರವು ||
ಕುಂದದಾರಾಘವನ ಕೃಪೆಯಿಂ |
ಬಂದುದೀಸಾಮ್ರಾಜ್ಯಮೆಂಬುದ |
ನಿಂದು ತಿಳಿಯದ ಮೂರ್ಖನೇ ನಾಂ ಮರೆಯೆನುಪಕೃತಿಯ || ೧೪೪ ||

ಅರಿದೆನಾಘನಮಹಿಮರಾಮನು |
ಶರದಿನೊಂದರಿನೇಳುಮರಗಳ |
ಕೊರೆದದಿನವೇ ತನ್ನ ಮೈತ್ರಿಯೊಳೇನು ಫಲಮಿವಗೆ ||
ಬರಿದೆ ನೆವವಿಟ್ಟೆನ್ನ ನಿಲ್ಲಿಸಿ |
ಧುರದೊಳಹಿತನ ಕೊಂದು ಸೀತೆಯ |
ತರುವನಲ್ಲದೆ ಮಹಾಣಶ್ರವನೆಂದೆಂಬ ಸಂಗತಿಯ || ೧೪೫ ||

ಅರಿಯಲೆನ್ನಿಂದೇಂಸಹಾಯವು |
ಪರಮದೈವಕೆ ಸೇವಿಸಲು ಕಪಿ |
ವರರ ನೆರವಿಸು ಕೂಡಿ ಬೆಂಬಲಕೊಲಿದು ಪೋಗುವೆನು ||
ಬರುತಿರುವರಿದೊ ನೋಡು ನಾನಾ |
ಗಿರಿಗುಹೆಗಳಿಂ ಭಟರು ನಾವಿ |
ನ್ನರಸನಲ್ಲಿಗೆ ಪೋಪೆವೇಳೆಂದೊಡಬಡಿಸಿ ತೆರಳೆ || ೧೪೬ ||

ಒಡನೆ ಬಂದುದು ಮಂತ್ರಿಮುಖ್ಯರ |
ಗಡಣ ಕೋಡಗಪಡೆಯು ಮರಗಳ |
ಬುಡವೆರಸು ಕಿತ್ತೆತ್ತಿ ಪಿಡಿವಾಲುತ್ತುಮೈದಿದುದು ||
ಜಡಪದಾರ್ಥಗಳೆಂತು ಚಲಿಪುವು |
ಗಿಡಗಳೇ ತಾವೈದುತಿಹುವಲೆ |
ಕಡುಪೊಸತಿದೆಂದೆನುತೆ ನೋಳ್ಪವರದ್ಭುತಂಗೊಳಲು || ೧೪೭ ||

ಬಂದರಾಸುಗ್ರೀವಲಕ್ಷ್ಮಣ |
ರಂದು ಕಂಡರು ರಾಮಚಂದ್ರನ |
ಮುಂದಕಾಸುಗ್ರೀವನೈತಂದೆರಗಿರಲು ಪದಕೆ ||
ಮಂದಹಾಸದೆ ತನ್ನ ಹಸ್ತಗ |
ಳಿಂದೆ ತೆಗೆದಾಲಿಂಗಿಸುತ್ತಾ |
ನಂದದಿಂ ಕುಳ್ಳಿರಿಸಿ ರಾಘವನೆಂದನವನೊಡನೆ || ೧೪೮ ||

ಧೀರ ಕಪಿವರ ನಿನ್ನ ಸಖ್ಯದ |
ಸಾರವಿಂದೆನಗೊದಗಿತೆಂದೇ |
ತೋರುತಿರ್ಪುದು ನಿನ್ನ ಕೋಡಗಪಡೆಗೆ ಪೇಳ್ಚಿದೆನು ||
ವಾರಿಧಿಯ ತೆರೆಯಂತೆ ನೆರೆದಿಹ |
ವೀರಭಟರನು ಕಳುಹಿಸೀಗಳೆ |
ಚೋರರಾವಣನಿರ್ಪನೆಲೆಯ ವಿಚಾರವೆಸಗುವುದು || ೧೪೯ ||

ಅರಿಯ ನಿಗ್ರಹಕಿದುವೆ ಸಮಯವು |
ತುರಿಪದಿಂದುಜ್ಜುಗಿಪುದೆನೆ ಕರೆ |
ದೊರೆದನಿನಜನು ಕಂಡಿಕೋಡಗಮುಖಪತಿವಳರ ||
ಭರದೆ ನೀಂ ದೆಸೆದೆಸೆಗೆ ನಡೆದ |
ಲ್ಲಿರುವ ಗಿರಿವನಪಟ್ಟಣಂಗಳೊ |
ಳರಸಿ ಸೀತಾದೇವಿಯುತ ನೆಲೆದಿಳಿದು ಬಂದರುಹಿ || ೧೫೦ ||

ಕೊಟ್ಟಿಹೆನು ನಾಂ ತಿಂಗಳವಧಿಯ |
ನಷ್ಟರೊಳು ನೀವರಸಿ ರಾಮನ |
ಪಟ್ಟದರಸಿಯ ಸುದ್ದಿವೇಳ್ವುದು ಕುಡುವೆನುಡುಗೊರೆಯ ||
ಕಟ್ಟಳೆಯ ದಿನವಡನು ವೀರ |
ಲ್ನಷ್ಟವಪ್ಪುವು ನಿಮ್ಮ ತಲೆಗಳು |
ತಟ್ಟನೆಲ್ಲಾ ಕಡೆಗೆ ತೆರಳಿಮೆನುತ್ತೆ ಬೆಸಸುತ್ತೆ || ೧೫೧ ||

ಕರೆದು ವಾಲಿಸು ಕುವರನನು ನೀ |
ನಿರದೆ ಜಾಂಬವದನಿಲಜಾದ್ಯ !
ವೆರಸಿ ತೆಂಕಣ ದಿಕ್ಕಿನಲ್ಲಿಹ ಸಕಲದೇಶಂಗಳ ||
ಚರಿಸುತಸುವುದೊದವಿದ ಭೋ |
ರ್ಗರೆವ ಶರಧಿಯ ದಾಂಟಿ ಹೊರಗಣ |
ಕರೆಯೊಳಿರ್ಪಾದ್ವೀಪವನು ಸೇರ್ದಲ್ಲಿ ಹುಡುಕುವುದು || ೧೫೨ ||

ಕೇಳಿಹೆನು ದಶಕಂಠನಾಮದ |
ಖೂಳನಲ್ಲಿಹನೆಂಬುದನು ಕೆ |
ಟ್ಟಾಳುಗಳು ಸಾಹಸಿಕರೆನ್ನುತೆ ನಿಮ್ಮನಾಕಡೆಗೆ ||
ಬೀಳುಕೊಟ್ಟಿಹೆನಿಂದು ನೀಂಗಳು |
ಮೇಲೆನಿಪ ಕುಲದವರು ಸಮರದೆ |
ಕಾಲನನು ಬೆದರಿಸುವ ಶೂರರು ನಿಮಗದೇನರಿದು || ೧೫೩ ||

ಹರಿಯುದಿತರರ ಕೈಯೊಳಿದು ಬಲು |
ಹರುಷಗೊಡುತೆ ರಾಮಕಾರ್ಯವ |
ಬಹುಗಿಸುವುದೆಂದೊರೆದು ಸೀತಾಪತಿಗೆ ಕೈಮುಗಿದು ||
ಅರಸ ಲಾಲಿಪುದೀಮರುತ್ಸುತ |
ಸುರುಪರಾಕ್ರಮಿ ನಿನ್ನ ಕಾರ್ಯವ |
ನಿರದೆ ಕೈಗೂಡಿಸುವನಿವನು ಕರೆದು ಮನ್ನಿಸನೆ || ೧೫೪ ||

ಮನಕದೊಪ್ಪಿತವಾಗಲರಸಂ |
ಗನಿಲಜನ ಕರೆದೆಂದನೆನ್ನಯ |
ವನಿತೆಯೆಲ್ಲಿಹಳೆಂಬುದನು ನೀಂ ತಿಳಿದಬಳಿಕಲ್ಲಿ ||
ಜನಕೆ ಗೋಚರವಾಗದಂದದೆ |
ವಿನುತಮಾದುಂಗುರವನಿದನಾ |
ಜನಕಜೆಗೆ ನೀಡನಳ ಸಂಶಯವಳಿವುದದರಿಂದೆ || ೧೫೫ ||

ಬಳಿಕ ತನ್ನಾಳೆಂದು ನಂಬಿಯೆ |
ಲಲನೆ ಪತಿಕರಿಸುತ್ತೆ ನಿನ್ನನು |
ಸಲುಗೆಯಿಂ ನುಡಿಯಿಪಳು ಕುರುಹನು ನೀನು ಕೊಳ್ಳೆನುತೆ ||
ಲಲಿತವಾದಂಗುಲಿಯ ಮುದ್ರೆಯ |
ನೊಲವಿನಿಂದಿತ್ತಾತೆಗನುವಿಂ |
ದುಲಿವುವಿದನೆಂದಂತರಂಗದ ಕೆಲವುಸಂಗತಿಯ || ೧೫೬ ||

ಕಿವಿಯೊಳೊರೆದೆಲೆ ನಿನ್ನ ಕಾರ್ಯವು |
ತವಕದಿಂ ನೆರವೇರಲಿನ್ನೆಂ |
ದವಿರಳಾಶೀರ್ವಾದವನು ಗೈದಿಂದೆ ತೆರಳೆನಲು ||
ಪವನನಂದನನಾಗ ಸಂತಸ |
ನವಿಗಡಲೊಳಾಳುತ್ತೆ ದೇವನೆ |
ತವಕಟಾಕ್ಷದ ಬಲವದಿದ್ದೊಡೆ ಕಾರ್ಯವೆನಿತರದು || ೧೫೭ ||

ನುಡಿದವಧಿ ಪೂರೈಪ ಮುನ್ನಮೆ |
ಹುಡುಕಿ ಕಾಣಿಸಿಕೊಂಡು ದೇವಿಯ |
ರಡಿಯ ಸುಕ್ಷೇಮವನು ನಾಂ ಬಂದೊರೆಯದಿರೆ ಬಳಿಕ ||
ನುಡಿಯಲೇನೀದೇಹವನು ನೆರೆ |
ಸುಡುವೆನಗ್ನಿಯೊಳಲ್ಲದೊಡೆ ಕಡಿ |
ದೊಡನೆ ಭೂತಂಗಳನು ತಣಿಸದೆ ಮಾಣೆನೆಂದೆರಗಿ || ೧೫೮ ||

ಸರಿಯುಲೆಲ್ಲರುವೊಡನೆ ರಾಮನ |
ಚರಣಕಭಿವಂದಿಸುತೆ ಮನದೊಳ್
ಸ್ಮರಿಸುತಾರಘುರಾಮಮಂತ್ರವ ಜಪಿಸುತೆಡೆವಿಡದೆ ||
ತೆರಳುತಲ್ಲಲ್ಲಿರುವ ವನಗಳೊ |
ಳರಸುತಾಯಾಭೂಧರಂಗಳ |
ನಿರದಡರುತಲ್ಲಲ್ಲಿ ಸೋದಿಸಿ ಕಾಣದವನಿಜೆಯ || ೧೫೯ ||

ಅಕಟ ಮುಂದಿನ್ನೇನು ಕಾರ್ಯವು |
ಯುಕುತಿಯಾವುದು ತೋರದಲೆ ಬಹು |
ವಿಕಳಮತಿಯಿಂದೊಪ್ಪುಗೊಂಡುದು ನಮ್ಮ ತಪ್ಪು ಗಡಾ ||
ಸಕಲವಾನರತತಿಯು ದಣಿದುದು |
ಸಕುತಿಗುಂದಿದೆವಾವು ಲೋಕ |
ಪ್ರಕಟವಾಯಿತು ಹೀನಬಲರಾವೆಂಬುದಿಂದಿನೊಳು || ೧೬೦ ||

ಗತಿಯದೇನೆಮಗೆಂದು ಚಿಂತಿಪ |
ನಿತರೊಳಾಗಳ್ ಕಂಡರಿದಿರೊಳ |
ಗತಿಭಯಂಕರಮಾದ ಕಗ್ಗತ್ತಲೆಯ ಗಹ್ವರವ ||
ಕ್ಷಿತಿಜೆಯಿಲ್ಲಿರವೇಳ್ಕುಮೆಂದೆನು |
ತತುಳಬಲರಾಬಿಲವನೊಳವುಗ |
ಲತಿವಿರಾಜಿತಮಪ್ಪ ಪುರವೊಂದಲ್ಲಿ ಕಾಣಿಸಿತು || ೧೬೧ ||

ಚಿತ್ತಕಚ್ಚರಿಯಾಗೆ ಬಳಿಸಾ |
ರ್ದತ್ತ ನೋಡುತ್ತಿರ್ಪ ಸಮಯದೊ |
ಳುತ್ತಮೋತ್ತಮೆಯಾಸ್ವಯಂಪ್ರಭೆಯೆಂಬ ತಾಪಸಿಯು ||
ಹತ್ತಿರಕೆ ನಡೆತಂದು ನುಡಿಸಿದ |
ಳಿತ್ತಣಿಂ ಬರವಾಯ್ತು ನಿಮಗೆ ನಿ |
ಮಿತ್ತವೇಂ ಬರಲಾರನುಜ್ಞೆಯು ಬಿತ್ತರಿಪುದೆಂದು || ೧೬೨ ||

ಕೇಳು ತಾಪಸಿ ನಾವಯೋಧ್ಯಾ |
ಭೂಲಲಾಮನ ರಾಮಚಂದ್ರಮ |
ನೋಲೆಕಾರರು ಪಯಣಗೊಂಡಿಹೆವಾತನರಸಿಯನು ||
ಖೂಳ ರಾವಣನೆಂಬ ದೈತ್ಯಕ |
ರಾಳನಿರದಪಹರಿಸಿಯೆತ್ತಲೊ |
ಕಾಲುದೆಗೆದನು ಪಾಪಿಯಾತನನರಸಬೇಕೆಂದು || || ೧೬೩ ||

ತೋರಲಿಲ್ಲಿಯುಮವನಿಸುತೆ ನಾಂ |
ದಾರಿಗಾಣೆವು ಮರಳಿಪೋಗಲು |
ಪಾರಗಾಣಿಪುದೆಮ್ಮ ನೀನೆಂದೆನುತೆ ವಿನಯದೊಳು ||
ಶೂರಮಾರುತಿಯೊರೆಯೆ ನೀವಾ |
ಹಾರಗೊಳ್ವುದೆನುತ್ತುಮವರಿಗೆ |
ಸಾರವಾದ ಫಲಂಗಳಂ ತಿನಲಿತ್ತು ತಣಿವೆಸಗಿ || ೧೯೪ ||

ತೆರೆದ ಕಣ್ಗಳ ಮುಚ್ಚಿಕೊಳಿ ನೀಂ |
ಪೊರಗೆ ಸಾಗಿಪೆನೀಗಳೆಂದವ |
ಳೊರೆಯಲಂತವರೆಸಗಲಾಕ್ಷಣವಬ್ಧಿಯೆಡೆಯೊಳಗೆ ||
ಗಿರಿಯದೊಂದರ ತಪ್ಪಲೊಳು ತಾಂ |
ಮೆರೆದರಚ್ಚರಿವಡುತುಮಲ್ಲಿಯು |
ಮರಸನರಸಿಯನರಸಿ ಕಾಣದೆ ಚಿಂತೆವೆರಸಿದರು || ೧೯೫ ||

ಏನಿದಕಟೆಂತಾಯ್ತು ನಮಗಾ |
ಭಾನುಜೇಶ್ವರನಿತ್ತ ಗಡುವು |
ತಾನದಾಗಲೆ ಕಳೆದುದಲೆ ಮುಂದೇನನೆಸಗುವೆವು ||
ಕ್ಷೋಣಿಜೆಯ ಕಾಣದೆಯೆ ಮರಳಲ್ |
ಪ್ರಾಣವುಳಿಯದು ರಾಮಕಾರ್ಯ |
ಕ್ಕೂಣೆಯವು ನಮ್ಮಿಂದೆ ಬಂದೊಡೆ ಬಳಿಕ ಬದುಕೇಕೆ || ೧೯೬ ||

ನಿರಶನವ್ರತದಿಂದಮೀಗಳು |
ಶರಧಿತಟದೊಳಗಸುವಿಡೀಗಲು |
ಕರುಣಿಪನು ಸದ್ಗತಿಯನೆಮಗಾ ರಾಮಚಂದ್ರಮನು ||
ತೆರನಿದೇಸರಿ ತಮಗೆನುತವರು |
ತೊರೆದುನಿದ್ರಾಹಾರಗಳನುರೆ |
ಪರಮರಾಮಧ್ಯಾನಪರರಾಗಲ್ಲಿ ಕುಳ್ಳಿರಲು || ೧೯೭ ||

ಕಂಡನಿವರನು ಪರ್ವತಾಗ್ರದಿ |
ಮಂಡಿಸಿಹ ಸಂಪಾತಿಯೆಂಬಾ |
ಚಂಡಭುಜಬಲಗೃಧ್ರರಾಜನು ಬಂದನಿವರೆಡೆಗೆ ||
ಕಂಡೆನಾಹಾರವನು ಬಹುದಿನ |
ಉಂಡು ನೀಗುವೆನಿಂದು ನಿಮ್ಮನು |
ಖಂಡಪರಶುವೆ ನನ್ನ ಪಸಿವನು ಕಳೆಯಲಟ್ಟಿಹನು || ೧೯೮ ||

ಎಂದೊರೆಯೆ ಕೇಳ್ದಾಗಳಂಗದ |
ನೊಂದಿ ಚಿಂತೆಯನಯ್ಯ ನೀಂ ಮನ |
ದಂದು ಮದಾರ್ತೆಯನು ಕೇಳ್ವೆ ರಾಮನಾಸತಿಯ ||
ಮಂದಮತಿ ರಾವಣನು ಕದ್ದೊ |
ಯ್ವಂದು ತಡೆದಜಟಾಯುವವನಿಂ |
ನೊಂದು ರಾಮಂಗರುಹಿ ಸಕಲಸನ್ನಳುವ ನೀಗುವನು || ೧೬೯ ||

ಎಮ್ಮೊಡೆಯನಿನಸುತನ ಸಖ್ಯವು |
ಸಮ್ಮದದೆ ರಾಮಂಗೆ ಸಮನಿಸೆ |
ನಮ್ಮನಟ್ಟಿದನಾತನವನೀಸುತೆಯನರಸಲ್ಕೆ ||
ಒಮ್ಮನದೆ ನಾವರಸಿ ಕಾಣದೆ |
ಹಮ್ಮಳಿದು ಕೊರಗುತ್ತೆ ಬಂದೆವು |
ನೀಮ್ಮನಂದಂದೆಮ್ಮನೆಲ್ಲರನುಳುಹು ಕೃಪೆಯಿಂದೆ || ೧೭೦ ||

ಎನುತುಮಂಗದನಾಡೆ ಕೇಳ್ದತಿ |
ಘನವಿಷಾದದೊಳಳ್ದು ವಿಹಗನು |
ತನಗದನು ಮತ್ತೊಮ್ಮೆ ಪೇಳ್ವುದು ವಿಶದವಪ್ಪವೊಲು ||
ಅನುಜನನು ರಾವಣನು ಕೊಂದನೆ |
ವಿನುತರಾಮನದಾರು ಪೇಳೆನೆ |
ಹನುಮನೊಲವಿಂ ನುಡಿದನಾಗಳೆ ನಡೆದ ಸಂಗತಿಯ || ೧೭೧ ||

ದಾಯು ತಪ್ಪಿತು ತಮ್ಮನಳಿದನೆ |
ಬಾಯ ಬಿಡಲಿನ್ನೇನು ಫಲ ತನ |
ಗಾಯತಿಕೆಯೆಲ್ಲಿಹುದು ಶತ್ರುವನಿಂದು ನಿಗ್ರಹಿಸೆ ||
ಕಾಯ ತಗ್ಗಿದುದಲ್ಲದೆರಕೆಯು |
ಪೋಯಿತಂದಾರವಿಯ ಕಿರಣದೆ |
ಹೇಯಮಾದೀದೇಹವಿದ್ದೇನಕಟ ಬಿದ್ದೇನು || || ೧೭೨ ||

ನೂರುಯೋಜನಮಿಪ್ಪುದಬುದಿಯು |
ಹಾರಿ ಬೇಗನೆ ಪೋಪರಾದೊಡೆ |
ಘೋರರಾವಣನಿರ್ಪ ಲಂಕೆಯ ಸೇರ್ವಿರೈ ನೀವು ||
ಶೂರರಾಕ್ಷಸರದರ ಸುತ್ತಲು |
ಸೇರಿ ಕಾದಿರ್ಪರು ನೀವದ |
ಮೀರಿ ಪೋದೊಡೆ ಕಾಣ್ಬಿರೈ ಶ್ರೀರಾಘವನ ಸತಿಯ || ೧೭೩ ||

ದೂರಮಲ್ತಿದು ನಮ್ಮ ದಿಟ್ಟಿಗ |
ಪಾರಶಕ್ತಿಯು ಧಾತೃನಿರ್ಮಿತ |
ವಾರುಮರಿಯುದ ವಸ್ತು ನಮ್ಮಯ ಕಣ್ಗೆ ಕಂಡಪುದು ||
ಧೀರರಿರ ನಿಮಗನಶನವ್ರತ |
ದಾರುಣವು ಸಲ್ಲುವುದೆ ರಾಮನ |
ನೀರೆಯನು ಕಂಡಪಿರಿ ಶರಧಿಯ ದಾಂಟಿ ನೀವೆಂದು || ೧೭೪ ||

ಆವಿಹಂಗಮನೊರೆದು ಪೋಗಲ |
ದೇವಿಚಿತ್ರವೊ ರಾಮಸುಹಿಮೆಯು |
ಸಾವು ತಪ್ಪಿತು ಶಕ್ತಿಯಿಮ್ಮಡಿಸಿದುದು ನಮಗಿಂದು ||
ದೇವಿಯರ ಸಂದರ್ಶನೋತ್ಸವ |
ಕಾವುದಿದಿರೆಮಗಣುವಿದಂಬುಧಿ
ನಾವೆಯಿಂದೇಂ ನಡೆವುದೆಂದರು ವೀರಕಪಿವರರು || ೧೭೫ ||

ಉಬ್ಬಿದರು ಸಂತಸದೆ ತಮಗಿದು |
ಹಬ್ಬವೆಂದರು ನೆಗೆದರಾಲುತೆ |
ಬೊಬ್ಬೆಗೈದರು ಪರ್ವತಂಗಳ ಗಬ್ಬವೊಡೆವುದೆನೆ ||
ಸಬ್ಬರಾಟವ ನೋಡುತಾಣತಿ |
ಯೊಬ್ಬೆವಿಾರುವರೆನುತುಮಂಗದ |
ನುಬ್ಬರದ ಕುಣಿತವನು ನಿಲಿಸಿದನಾರುಬಟೆಗೈದು || ೧೭೬ ||

ಮುಂದಣಾಹದನೇನು ಧರಣೀ |
ನಂದನೆಯ ನೆಲೆಯರಿತೆವಾವೀ |
ಸಿಂಧುವನು ನೆರೆ ದಾಂಟಿಯುವರನು ಕಾಣ್ಬತೆರನೆಂತು ||
ಇಂದು ನಮ್ಮೊಳಗಾವನೀಪ್ರತಿ |
ಬಂಧವನು ಮಿಗೆ ಕಳೆದು ಲಂಕೆಯ |
ನೊಂದಿ ಮರಳುವ ಸುಭಟನಾತಂಗಿದೆಕೊ ವೀಳೆಯವು || ೧೭೭ ||

ವೀರರಿರ ನಿಮಗೇನಸಾಧ್ಯವೆ |
ನೂರುಯೋಜನದನಿತೆ ಕಡಲಿದು |
ಧೀರಕಪಿಕುಲದಗ್ರಗಣ್ಯರಿಗೇನಿದತಿಶಯವು ||
ಕಾಲವಿದು ಸಾಹಸಕೆ ಪೌರುಷ |
ದೇರುಜೌವನದುಬ್ಬು ನಿಮ್ಮೊಳ |
ಗಾರಿಗುಂಟವರೆದ್ದು ಕೊಳ್ವುದು ವೀಳೆಯವನೆಂದ || ೧೭೮ ||

ಕೇಳಿದರು ಭಟರಂಗದನ ಕ |
ಟ್ಟಾಳುತನದಾನುಡಿಯು ತಮ್ಮ ವಿ |
ಶಾಲಭುಜಬಲದೊರೆಯನಿಕ್ಕುತುವಿರ್ದರೊಳಗೊಳಗೆ ||
ಹೇಳಿದರು ಗಜಗವಯಶರಭರು |
ತೋಳ ಬಲವಿನಿತಿನಿಸುತಮಗೆಂ |
ದಾಳಿಸಿದನದುಹಿದನು ಜಾಂಬವನಾಗ ತನ್ನದಟ || ೧೭೯ ||

ಹಿಂದೆ ಲೋಕತ್ರಯುಪನಂಘ್ರಿಗ |
ಳಿಂದಮಳೆಯುತ್ತಾತ್ರಿವಿಕ್ರಮ |
ನಿಂದಕಾಲದೊಳಾಮಹಾಂಗನ ಸುತ್ತಿದೆನು ಬಳಸಿ ||
ಬಂದುದೀವೃದ್ಧಾಪ್ಯದಶೆ ತನ |
ಗಿಂದು ನಾನೇಗೈವೆಸನಿಲ್ಲ |
ಕುಂದಸೊಂದದೆ ಹಾರುವೆನು ತೊಂಬತ್ತುಯೋಜನವ || ೧೮೦ ||

ಮುಂದಕೇಂತುಟೊ ಎಂಬ ಸಂಶಯು |
ವೊಂದುಬಾಧಿಸುತಿರ್ಪುದೆನಗೆನೆ |
ಲಿಂದು ತನ್ನನು ಕಳುಹಿ ನೋಡುವುದೆನುತುಮಂಗದನು ||
ಮುಂದುವರಿಯಲ್ಕಂಡು ಜಾಂಬವ |
ನಂದವಲ್ಲಿದು ರಾಜನೀತಿಗೆ |
ಕುಂದಹುದು ನೀಂ ಪೋಪುದೆಂದೊರೆದವನ ತಡೆಗೈದು || ೧೮೧ ||

ಬಾರ ಬಾರೈ ಮಾರುತನ ಸುತ |
ಮೇರುಗಿರಿಸಮಭುಜಬಲಾನ್ವಿತ |
ಬೀರಗಾಸೆಯ ಬಿಗಿಯುಲೇಳೈ ಸಕಲವಿಬುಧಸುತ ||
ತೋರು ನಿನ್ನ ವಿಶೇಷರೂಪವ |
ನಾರು ನಿನಗೆಣೆಯಹರು ರಾಮನ |
ಕಾರಿಯದ ಕೀರ್ತಿಯನು ಬೆಳಗುವನಾಗು ಲೋಕದಲಿ || ೧೮೨ ||

ನಿನ್ನ ದೆಸೆಯಿಂದವನಿತನುಜೆಯು |
ಸನ್ನುತಾಂಘ್ರಿಯು ಕುಶಲವರಿದಾ |
ವಿನ್ನು ರಾಮಂಗೆಮ್ಮ ಮುಖವನು ತೋರಿದಪೆವೆಂಬ ||
ಉನ್ನತಾಶೆಯೊಳೆಮ್ಮ ಹರಣವ |
ಮುನ್ನವೇ ಬಿಡದಾದೆವಿತರರು |
ಮನ್ನಿಸುವರಾರುಂಟು ರಕ್ಷಿಸಲೇಳು ಕಪಿಕುಲವ || ೧೮೩ ||

ಎಂದು ನುಡಿದಜಸೂನು ಕರದಿಂ |
ದೆಂದು ಸಿರವನು ತಡವಲಾರಘು |
ಸಂದನನ ಕಿಂಕರನು ತವಕದಿನೆದ್ದು ಕೈಮುಗಿದು ||
ಮುಂದಬಲನಾನಿನಿತಕರ್ಹನೆ |
ತಂದು ಕೃಪೆಯನು ತನ್ನನೀಪರಿ |
ಯಿಂದೆ ಮನ್ನಣೆಗೈದನಿಮ್ಮಾಶಿಷದ ಬಲವಿರಲು || ೧೮೪ ||

ಎಣಿಕೆಯುಂಟೇ ಮನಕೆ ಮೇಣಿದು |
ವನರುಹಾಕ್ಷನ ಪರಮಕಾರ್ಯವು |
ತನಗೆ ತಾನೇ ಸಾಧ್ಯವಪ್ಪುದು ಕೊರತೆಯಿಲ್ಲಿದಕೆ ||
ಇನನುದಯದೊಳಗಂಧಕಾರವ |
ದಣಿಗಿ ಪೋಪಂದದೊಳು ರಾಮನ |
ಸನ್ನಿಹದಾಳನು ಕಾಣಲೊಡನೆಯೆ ಬತ್ತದೇನಬುಧಿ || ೧೮೫ ||

ಸಿರದೊಳಾಂತೆನು ನಿಮ್ಮನುಜ್ಞೆಯ |
ಗುರುವರೇಣ್ಯನೆ ಪರಸಿ ಕಳುಹುವು |
ದೆರಗುವೆನು ನಿಮಗೆಂದು ವಿನಯದಿನಂದು ತಲೆವಾಗಿ ||
ಮೆರೆವ ವಿಳಯದ ರುದ್ರನಿವನೆನೆ |
ಸಿರವು ನಭವನು ತಾಗೆ ಬೆಳೆದನು |
ಭರದೆ ಸನಿಹದ ವರಮಹೇಂದ್ರಾಚಲವನಡರಿದನು || ೧೮೬ ||

ಶರಧಿ ಮೊರೆದುದು ಮುಂದೆ ತನಗಾ |
ರ್ಸರಿಸಮಾನರು ತನ್ನ ಕುವರಿಯೆ |
ಸಿರಿಯು ನನಗದರಿಂದೆ ಜಾಮಾತನಲಾಹರಿಯು ||
ಸುರರಿಗಮೃತವನಿತ್ತೆನೊಳ್ಮಣಿ |
ಯಿರುವುವೆನ್ನೊಳು ಸುರಕುಜಾದಿಗ |
ಳೊರೆಯಲೇನೆನ್ನ ದರಜನಿತವು ನೋಡಿಮೆಂಬವೊಲು || ೧೮೭ ||

ಇಂದಿರನ ವಜ್ರಾಯುಧದ ಭಯ |
ದಿಂದೆ ವಹಿಲದೆ ಬಂದು ಮರೆವೊ |
ಕ್ಕಂದು ಮೈನಾಕನನು ಭೂಧರನೆಂದು ಸಲಹಿನೆನು ||
ಇಂದು ತನ್ನಿಂ ಭೂಮಿ ಜೀವನ |
ವೊಂದುತೆನ್ನಯ ಗತಿಯು ಬಾಧಿಸು |
ಮೇದುಮುಳಿದದನೊದೆವುದೆನಲುಚ್ಚಲಿಸಿತಂಬುನಿಧಿ || ೧೮೮ ||

ನೋಡಿದನು ಪವನಜನು ಜಲಧಿಯ |
ಗಾಢಗರ್ವವನಿದು ಸಮೀರನ |
ರೂಢಿಸಿದ ಬಲದೆಸಕವಿಳೆಯಿಪೆಸೆಗೀಗಳಿದನೆಂದು ||
ಜೋಡಿಸಿದ ಕರದಿಂದೆ ತಂದೆಯ |
ಬೇಡುತಿರ್ದನು ತನ್ನ ಹರಿಬದ |
ಪಾಡದಾರದು ನಿನ್ನದೈಸಲೆಯುರಬನುಳಿಯೆನುತೆ ||೧೮೯||

ಅತ್ತ ಸುಗ್ರೀವಾಜ್ಞೆಯಿಂ ಸಡೆ |
ದೊತ್ತಿ ನಾನಾದಿಶೆಯೊಳರಸಿಯು |
ಮೆತ್ತಲುಂ ಜಾನಕಿಯ ಸಲೆಯನೆ ಕಾಣದುರೆ ಬಳಲಿ ||
ಚಿತ್ತದುಮ್ಮಳದಿಂದೆ ಗಡುಬವು |
ಹತ್ತಿರಾಯ್ತೆಂದಂಜಿ ಕಪಿವಂ |
ಶೋತ್ತಮರು ಪಿಂದಿರುಗಿ ಬಂದರು ಶರಣೆನುತನೆಡೆಗೆ ||೧೯೦||

ದೇವ ಭವದಾಜ್ಞಾವಲಂಬಿಗ |
ಳಾವಿಳಾಮಂಡಲದೆ ದೇಶಗ |
ಳಾವುವುಂಟವನೆಲ್ಲ ತಿರುಗಿದೆವಾಯ್ತು ನಿಷ್ಫಲವು ||
ದೇವಿಯರ ಸುದ್ದಿಯನೆ ಕಾಣೆವು |
ಕಾವುದೆಮ್ಮನೆನಲ್ಕೆ ಮನ್ನಿಸಿ |
ಪಾವಮಾನಿಯನಿದಿರುನೋಡುತುಮಿರ್ದನಿನಸುತನು ||೧೯೧||



ವಿದಿತಘನಕರ್ಣಾಟರಾಜ್ಯದ |
ಪದಕನೊಡೆಯನೆನಿಪ ಕೃಷ್ಣಭೂಪನ |
ಪದದ ಸೇವಕನೆನಿಪ ಚಿಕಲಿಂಗಾಖ್ಯಪಾರ್ಥಿವನು ||
ಪದೆದು ಕಿಷ್ಕಿಂಧಾಖ್ಯಕಾಂಡವ |
ನಿದನು ನುಡಿದನು ಭಾಮಿನೀಷ |
ಟ್ಪದಿಯೊಳಿದು ರಾಜಿಸುಗೆ ಸುಜನಗೊರ್ಲವನೊಡರಿಸುತೆ ||

## ಕಿಷ್ಕಿಂಧಾಕಾಂಡಂ ಸಂಪೂರ್ಣಂ.



# ಸುಂದರಕಾಂಡವು.

ಸೂ || ಧೀರಮಾರುತಿ ಪಾರಿ ಕಡಲನ |
ಪಾರವಲ್ಲೆಂದೆನಿಸಿ ಲಂಕೆಯ |
ಸೇರಿ ಕಂಡನಶೋಕವನಮಧ್ಯದೊಳು ಜಾನಕಿಯ ||

ಗಿರಿಯ ಶಿಖರದೆ ನಿಂದು ಹನುಮನು |
ಕರಯುಗಳವನು ಮುಗಿದು ರಾಮನ |
ಚರಣವಾರಿಜಗಳನು ನೆನೆಯುತೆ ದೇವ ರಾಘವನೆ ||
ತರಳನಾದೆನಗಿಂದು ಶಕ್ತಿಯ |
ನಿರದೆ ಕರುಣಿಸಿ ದಾಂಟಿಸೀಸಾ |
ಗರವನಿದು ನಿನಗೇನು ದೊಡ್ಡಿತೆ ದಿವ್ಯಮಹಿಮಂಗೆ || ೧ ||

ಸ್ಮರಿಸೆ ನಿನ್ನನು ಜನವು ಭವಸಾ |
ಗರವ ದಾಂಟುವುದೆನಲು ನಿನ್ನಯ |
ಹರಿಬಕಂಗೈಸಿರುವ ಕಿಂಕರಗಾವುದಸದಳವು ||
ಪರಿಕಿಸಲು ಶತಯೋಜನದವಿ |
ಸ್ತರದ ರತ್ನಾಕರವ ದಾಂಟದೆ |
ಯುರುವ ಕಜ್ಜವು ಕೆಟ್ಟಿತೆಂದನಲಾರಿಗಪವಾದ || ೨ ||

ಸತ್ವವೀವುದೆನುತ್ತೆ ಕಾಲ್ಗಳಿ |
ನೊತ್ತಿ ನೆಲನನು ಮೇಲೆ ಕುಪ್ಪಳಿ |
ಸುತ್ತೆ ಗಗನವ ಬಗಿವನೆನೆ ತೋಳ್ಗಳನು ಬೀಸೆಳೆದು ||
ಒತ್ತಿಕೊಂಡೈತರ್ಪ ಮೇಘದ |
ಮೊತ್ತಮೊತ್ತಗಳೊಳಗೆ ನುಗ್ಗುತೆ |
ಮತ್ತೆ ಪೊರಮಡುತಿನನ ತೆರದೊಳಗೊಪ್ಪಿದನು ನಭದೆ || ೩ ||

ಆದುದಿನ್ನೇನಸುರರಾಟವು |
ಮೋದವಾಂಪುದು ಸುರರ ಕೂಟವು |
ಮೇದಿನೀಸುತೆಯೊಡನೆ ಬೇಟವು ದಿತಿಜಪತಿಗಳಿವು ||
ಹೋದರರಿಗಳು ನಿಮ್ಮ ಮನದಾ |
ಖೇದವನು ಬಿಸುಡುವುದು ಹನುಮನು |
ಕಾದನಿದೊ ಸಾಗರವನೆಂದನು ಸುರಪನಮರಗ್ಗೆ || ೪ ||

ಹಿಂದೆ ತಾನಿಕ್ಷ್ವಾಕುವಂಶಜ |
ರಿಂದವೇಳ್ಗೆಯು ಪಡೆದೆನವರೊ |
ಳ್ಬಂದ ರಾಮನ ಕಾರ್ಯಕನಿಲಜನಿಂದು ಪೊಸಗಿಹನು ||
ಚಂದವಲ್ಲದು ಸುಮ್ಮನಿರ್ಪುದು |
ಕುಂದಳವು ತನಗೆಂದು ಸಾಗರ |
ನೆಂದು ಚಿಂತಿಸಿ ಕರೆದು ಮೈನಾಕಂಗೆ ನಿರವಿಸಿದ || ೫ ||

ಎದ್ದನವನಂಬುಧಿಯ ಮಧ್ಯದಿ |
ಹೊದ್ದಿದನೊ ಗಗನವನು ತಾನೆನ |
ಲುದ್ದವಾಗಿಯೆ ಬಳೆಯುತನಿಲಜನೈದುವಾಪಥದೆ ||
ಇದ್ದ ಪಲವುಂಬಗೆಯ ಫಲಗಳು
ಸಿದ್ಧಮಿರ್ಪುವು ಸೇವಿಸುತ್ತಿವ
ನುದ್ಧರಿಸು ಕೃಪೆಯಿಂದೆ ತನ್ನನೆನುತ್ತುಮರ್ಥಿಸಿದ || ೬ ||

ಸಮಯಮೀಗೆನಗಿಲ್ಲವೈ ನೀಂ |
ಕ್ಷಮಿಸು ಸತ್ಕೃತನಾದೆನವಿರಳ |
ಮಮತೆ ನಿನಗುಂಟೆನ್ನೊಳಿದಕಾನಹೆನು ಹಂಗಿಗನು ||
ವಿಮಲರಾಘವದೇವನಾಜ್ಞೆಯಿ |
ನಮಿತಕಾರ್ಯದೆ ಸಕ್ತನಾಗಿಹೆ |
ನಮಮ ಪೂಪವರೆಗಮುಚಿತವೆ ಬೇರೆ ಸುಖವೆನಗೆ || ೭ ||

ವೇಳೆಯಲ್ಲಿದು ಮರಳಿ ಬರ್ಪೆನು |
ಕಾಳಿ ಕೃಪೆಯನು ಮನ್ನಿಸೆಂದುರೆ |
ಯಾಲಿ ಜೊಬ್ಬಿರಿದಂಜನಾಸುತನಧಿಕವೇಗದೊಳು ||
ಮೇಲೆ ನಭದೊಳ್ಪೋಗುತಿರಲಿವ |
ನಾಳುತನವನು ತಿಳಿಯಬೇಕೆಂ |
ದಾಲಿಮೊಯ್ಯನು ಕಳುಹಲಿದಿರಿಸಿ ನಿಂದಳಾಸುರಸೆ || ೮ ||

ನಿಲ್ಲು ನಿಲ್ಲೆಲೆ ಕಪಿಯೆ ಮುಂದಿ |
ನ್ನೆಲ್ಲಿಗೈದುವೆ ನಿನ್ನ ರಭಸ |
ಕ್ಕಲ್ಲ ಠಾವಿದು ಕಮಲಸಂಭವನಿತ್ತ ವರವೆನಗೆ ||
ಇಲ್ಲಿಗೈತಂದರನು ನುಂಗೆಂ |
ದೊಲ್ಲೆನೆಂದೊಡೆ ತಪ್ಪದೀಬಾ |
ಯಲ್ಲಿ ಪುಗು ನೀನೆನ್ನ ಜಠರ್ಘಟಿಸಲ್ಕೆ ಕಂಡದನು || ೯ ||

ಮರುತನಾತ್ಮಜನಾಗಬಹುದೆಂ |
ದಿರದೆ ಬಳೆಯಲು ನೋಡಿಯದನನು |
ಸರಿಪ ವದನದೊಳೊಪ್ಪಲವಳಾಗಂಜನಾಸುತನು ||
ಇರದೆ ಯೋಜನದೊಂದರಳೆತೆಯು |
ಪಿರಿಯಕಾಯುವ ತೋರೆ ನಸುನಗು |
ತೆರಡುಯೋಜನದಗಲದಾಸ್ಯದಿನೊಪ್ಪಿದಳು ಸುರಸೆ || ೧೦ ||

ಪಿರಿಯಭೂತವಿದಮಮ ತನ್ನೀ |
ಪರಿಯು ಕೊಳ್ಳದು ಬೇರೆ ಹವಣಿದ |
ಕರಿವೆನೆನ್ನುತೆ ತಾಂ ಪಿಪೀಲಿಕೆಯನಿಸು ಮೆಯ್ಯಾಂತು ||
ಸುರಸೆಯಾಸ್ಯವ ಪೊಕ್ಕು ಬೇಗನೆ |
ಮರಳಿಯಿಾಚೆಗೆ ನಿನ್ನ ವರಕಿದೊ |
ಕೊರತೆಯಿಲ್ಲದ ತೆರನ ಗೈದಿಹೆನೆಂದನನಿಲಜನು || ೧೧ ||

ಬೆರಗನಾಂತಳು ಸುರಸೆ ತಾನಿವ |
ನರರೆ ನೋಡಲಮೋಘಸತ್ವನು
ಸುರರ ಕಾರ್ಯವು ಸುಲಭವಾಗಹುದಿವನದೆಸೆಯಿಂದೆ ||
ತೆರಳಲಿನ್ನಿವನೆನ್ನು ತಾಕ್ಷಣ |
ಪರಸಿ ಬೀಳ್ಕೊಳಲಾಗ ಮಾರುತಿ |
ಯಿರದೆ ಮೊದಲಂತಭ್ರಮಾರ್ಗದೊಳೈದಿದನು ಜವದೆ || ೧೨ ||

ಲೋಕದೊಳು ಸತ್ಕಾರ್ಯಸಿದ್ಧಿಗ |
ನೇಕವಿಘ್ನಗಳೆಂಬ ನಾಣ್ಣುಡಿ |
ಗೇಕೆ ಒಪ್ಪದು ಕೊಂತ ಸಿಂಹಿಕೆಯೆಂಬ ರಕ್ಕಸಿಯು ||
ಸಾಕುಮಾಡೈ ಗಮನವೆಲ್ಲಿಗೆ |
ನೂಕದಿಲ್ಲಿಂ ಮುಂದೆ ನಿಲ್ಲೆಂ |
ದಾಕಪೀಂದ್ರನ ನೆಳಲ ಪಿಡಿಯುತ್ತವನ ನಿಲಿಸಿದಳು || ೧೩ ||

ಬಂದುದೇ ಮತ್ತೀಗಲು ಜಾಂಬವ |
ರೆಂದ ನೆಳಲೆಳೆವಸುರಿಯಿಾಕೆಯು |
ಕೊಂದೊಡಲ್ಲದೆ ಮುಂದೆ ಪಯಣಕ್ಕಿಲ್ಲ ನೆಮ್ಮದಿಯು ||
ಇಂದುಪಾಯವದೇನು ನನಗಿಹು |
ದೆಂದು ಪವನಜನಿರಲು ಕದಲದೆ |
ತಿಂದು ತೇಗುವೆನೆನ್ನು ತವನನು ಪಿಡಿದು ನುಂಗಿದಳು || ೧೪ ||

ಸಮಯ ಸಿಕ್ಕಿತೆನುತ್ತೆ ಜಠರದೊ |
ಳಮಮ ಬಳೆದನು ಪವನತನಯನು |
ಕುಮತಿ ಬೀಳೆಂದುಲಿಯುತುದರವ ಭೇದಿಸಿದೊಡವಳು ||
ಗಮಿಸಿದಳು ಯಮನಾಲಯಕೆ ಬಳಿ |
ಕಮಿತಭುಜಬಲನಿರದೆ ಪೊರಮ |
ಟ್ಟಮಲಸಾಧ್ವೀಮಣಿಯ ಹುಡುಕುವ ಕಾರ್ಯಕನುವಾದ || ೧೫ ||

ಸಾರಿ ಪೋಗುತ್ತಾಗ ಕಂಡನು |
ಧೀರಮಾರುತಿ ಕಡಲಿನಾಚೆಯ |
ತೀರದಾಭೂಮಿಯನು ಮನದೊಳಗುಬ್ಬಿ ನಲಿದಾಡಿ ||
ಸಾರಸಾಕ್ಷಿಯನಿನ್ನು ತಾಂ ಕೆ |
ಣ್ಣಾರೆ ಕಾಣುವೆನೆಂಬ ಸಂತಸ |
ದೇರುಜವ್ವನಮಡರೆ ಸೇರ್ದನು ನಿಮಿಷದೊಳು ತಡಿಯ || ೧೬ ||

ಎಸೆದುದಿದಿರೊಳು ಗಗನವನು ಚುಂ |
ಬಿಸುವ ಶಿಖರಗಳಿಂದೆ ಬಗೆಬಗೆ |
ಸಸಿಯ ಸಾಲ್ಗಳನೊಂದುತೆಲ್ಲಿಯುಮಾವಕಾಲದೊಳು ||
ಕುಸುಮಗಳ ಪರಿಮಳದಿನೊಪ್ಪುತೆ |
ರಸವನೊಸರುವ ಫಲಗಳಿಂದ್ಮರೆ |
ರಸೆಗೆ ತೊಡವೆನಿಸಾತ್ರಿಕೂಟಾಹ್ವಯದ ಪರ್ವತವು || ೧೭ ||

ಅದರೊಳೆಸೆವುನ್ನತಿಯ ಶಿಖರದೊ |
ಳಿದು ವಿಚಾರಿಸಲಮರನಗರಿಯೊ |
ಪದುಮನಾಭನ ರಾಜಧಾನಿಯೊ ಪೇಳಲರಿದೆನಿಸಿ ||
ಹೃದಯರಂಜಕವಾಗಿ ರಾಕ್ಷಸ |
ರಧಿಪರಾವಣನಾವಗಂ ಭುಜ |
ದಿಟಿನಿಂ ರಕ್ಷಿಸುವ ಲಂಕಾನಗರಿ ಶೋಭಿಸಿತು || ೧೮ ||

ಆನಗರವನು ಕಂಡು ಪೊಕ್ಕಪೆ |
ನಾನೆನುತ್ತಣುರೂಪಿನೆಯ್ದಲು |
ಹೀನಕಪಿ ನಿನಗೇಕೆ ತೆಗೆ ಸುರಕೋಟಿಗಸದಳವು ||
ಈನಗರಿಯನು ಪುಗುವ ಬಲ್ಪತಿ |
ದೀನ ನಿನ್ನಿಂದಹುದೆ ನಡೆ ನಡೆ |
ಕಾನನಂಗಳೊಳರಸು ಪಣ್ಗಳನಿಲ್ಲಿ ದೊರೆಯುವವು || ೧೯ ||

ಎನುತೆ ಲಂಕಿಣಿಯೆಂಬ ರಕ್ಕಸಿ |
ಘನತರೋಜ್ಜ್ವಲರೋಷಭೀಕರಿ |
ಯನಿಲಜನ ಪಥಕಡ್ಡವಾಗೈತಂದು ಬೊಬ್ಬಿರಿಯೆ ||
ವನಿತೆ ತನಗಿಹುದೊಂದಭೀಷ್ಟವು |
ಕನಕಕಲಶಗಳಿಂದೆ ಮೆರೆವೀ |
ದನುಜನಗರಿಯ ನೋಡಬೇಕೆಂಬಿದನನುಗ್ರಹಿಸು || ೨೦ ||

ಕೋಪಕವಸರವಲ್ಲ ನೀನಾ |
ರೀಪರಿಯೊಳೇಕೆನ್ನ ದಂಡಿಪೆ |
ಕಾವು ನಿನಗಿಲ್ಲಿಹುದೆ ಲಂಕಾಪುರದ ಬಾಗಿಲೊಳು ||
ಪಾಪವೈತಹುದುಂಟೆ ಕೋತಿಯ |
ಚಾಪಲವ ಹಿಂಗಿಸಲು ಮನಸುರೆ |
ತಾಪವೀಯದೆ ಸಲಿಸು ಬಯಕೆಯನೊಲಿದು ನೀನೆಂದ || ೨೧ ||

ಆವಳೇಕಿಂತೆನ್ನ ದಂಡಿಪೆ |
ಕಾವಲೂಳಿಗವುಂಟೆ ನಿನಗೆಂ |
ಬೀವಿಚಾರದ ಪಾರಪತ್ಯವದೇಕೆಲೊ ಕಪಿ ನಿನಗೆ ||
ದೇವರಿಪುಗಣ ಸಾರ್ವಭೌಮನ |
ರಾವಣೇಶ್ವರನಾಜ್ಞೆಯಿಂ ಪುರ |
ಕಾವಳೇಡುಂ ಬಾರದಂದದ ಕಾವು ತನಗಿಹುದು || ೨೨ ||

ಅರಿಯಲಾನಧಿದೇವಿ ಲಂಕಾ |
ಪುರಿಗೆ ಲಂಕಿಣಿಯೆಂಬರೆನ್ನನು |
ಸರಕುಗೆಯ್ಯದೆ ತನ್ನ ನೀನಿಂದೈದಿದೊಡೆ ಬಳಿಕ ||
ಮರಣವಲ್ಲದೆ ಕಪಿಯೆ ಗತ್ಯಂ |
ತರವು ನಿನಗೆಲ್ಲಿಯದು ಕೊಳ್ಳೀ |
ಕರದ ಸಂಭಾವನೆಯನೆನುತಪ್ಪಳಿಸಲನಿಲಜನು || ೨೩ ||

ಸರಿಯ ಸಂಭಾವನೆಯನೀಯದೆ |
ಸರಿಯಲೆನ್ನನುದಾರನೆಂಬರೆ |
ಸರಸರಿಂತಿದನೊಪ್ಪಿಕೊಳ್ಳೆಂಡಾಗಳುರವಣಿಸಿ ||
ಸರಿಸದೊಳು ದೃಢಮುಷ್ಟಿಯಿಂಡನು |
ಸರಿಸಿ ತಿವಿಯಲು ನೊಂದು ತಾನೋ |
ಸರಿಸಿ ಬಿದ್ದಳು ನೆಲದೆ ನೆನೆದಳು ಪೂರ್ವಸಂಗತಿಯ || ೨೪ ||

ಅಂದು ವಿಧಿ ತನಗಿತ್ತ ವರವಳ |
ಟ್ಟಿಂದು ಕೊನೆಮುಟ್ಟಿದುದು ವಾನರ |
ನಿಂದೆ ತನಗಿಂತಾಯ್ತು ಪರಿಭವವಸುರರೇಳಿಗೆಯು ||
ನಂದಿಪೋದುದು ದೈವಗತಿಗಿ |
ನ್ನೆಂದುಫಲವೇನೆಂದು ಮಾರುತ |
ನಂದನನೆ ಬಾರೆಂದು ನುಡಿದಳು ವಿನಯದೊಡಗೂಡಿ || ೨೫ ||

ಕಪಿಯದೊಂದೈತಂದು ನಿನ್ನನು |
ಕುಪಿತಭಾವದೊಳೆಂದು ಪೊಯ್ವುದೊ |
ಸಪರಿವಾರದಶಾಸನಂಗಂದಪುದು ಲಯಸಮಯ ||
ತಪನಕುಲಜನ ರಾಣಿಗೊಲಿದಿವ |
ನಪಮೃತಿಗೆ ತುತ್ತಹನು ದಿಟವಿದು |
ಕಪಟವಲ್ಲೆಂದಜನು ಪೂರ್ವದೊಳುಸಿರಿಹನು ತನಗೆ || ೨೬ ||

ಹರಿಕುಲೋತ್ತಮ ನಿನ್ನ ಬರವಿದು |
ಬರಿದೆ ಪೋಗದು ರಿಪುಕುಲಕ್ಷಯ |
ವರಿಯಲಪ್ಪುದು ಪೊಕ್ಕು ನೀನೀಪುರಿಯ ನಿರ್ಭಯದೆ ||
ಚರಿಸುತಿಷ್ಟವನೆಲ್ಲ ಸಾಧಿಸಿ |
ಪರಮಕಲ್ಯಾಣವನು ಪೊರ್ದೆಂ |
ದೊರೆದು ಬೀಳ್ಕೊಡಲಾಗ ಮುಂದಣ ಪಯಣಕನುವಾದ || ೨೭ ||

ಶರದದಂಬುದನಿವಹದಂದದೆ |
ಮೆರೆವ ಭವನಗಳಿಂದೆ ರಿಪುಗಳಿ |
ಗರಿದೆನಿಸುವುನ್ನತಿಯ ಕೋಟೆಗಳಿಂದೆ ಶೋಭಿಸುವ ||
ಪರಿಪರಿಯ ರಿಪುಹನನಯಂತ್ರವಿ |
ಸರದಿನಸದಳವೆನಿಸುತೆಸೆದಿಹ |
ಪುರವನೀಕ್ಷಿಸುತಂಜನಾಸುತನಾಂತು ವಿಸ್ಮಯವ || ೨೮ ||

ಸಾಲುಮನೆಗಳ ಮೇಲೆ ನಿಂದು ವಿ |
ಶಾಲವೀಧಿಗಳನು ನಿರೀಕ್ಷಿಸು |
ತಾಲಿಸುತೆ ಪುರದಸುರರಾಡುವನುಡಿಯ ರಾತ್ರಿಯೊಳು ||
ಮೇಲೆನಿಪ ಸಾಮಂತಭೂಮಿಪ |
ರಾಲಯಂಗಳನೆಲ್ಲ ಶೋಧಿಸು |
ತಾಲಕುಮಿಗಾವಾಸಮಂದಿರವೆನಿಸಿ ರಂಜಿಸುವ || ೨೯ ||

ಅರಮನೆಯ ಕಂಡಧಿಕಸಂಭ್ರಮ |
ಸರಸಿಯೊಳು ಮಿಾಯುತ್ತೆ ರಘುಕುಲ |
ದರಸನರಸಿಯ ಕಾಣ್ಬೆನೆಂಬುತ್ಸವಕೆ ಮನಗೊಟ್ಟು ||
ಭರದಿನಲ್ಲಲ್ಲರಸಿ ಕಾಣದೆ |
ಮೆರೆಯುವಂತಃಪುರವ ಪೊಕ್ಕ |
ಲ್ಲರಸಿಯರ ಮಧ್ಯದೊಳು ಹುಡುಕಿದನಿರದೆ ಜಾನಕಿಯ || ೨೦ ||

ನೋಡಿದೊಡೆ ಮನುಮತನ ಖಾಡಾ |
ಖಾಡಿಗೆಳೆಯರೆ ಜನದ ಮನವನು |
ಕೂಡಿದರೆ ಸುರಲೋಕಸುಖಗಳನೀಯರೇನಿವರು ||
ಗಾಡಿಕಾತಿಯರಂಗವಟ್ಟವ |
ನಾಡೆ ಪೊಗಳಲ್ಕಾದಿಶೇಷನ |
ಪಾಡೆ ತೆಗೆಯೆನಲೊಪ್ಪಿದರು ಮಲಗಿದರ್ ಸುದತಿಯರು || ೨೧ ||

ಅವರ ಮಧ್ಯದೊಳಮಲತಾರಾ |
ನಿವಹ ಬಳಸಿದ ಚಂದ್ರನಂದದೆ |
ಪವಡಿಸಲ್ಲಾಲೋಕದೊಡೆತನ ತನಗೆ ಸೇರ್ದುದಕೆ ||
ನಿವಿಡವಾದಿವೆ ಸಾಧನಂಗಳು |
ಪವನಜನೆ ನೀಂ ನೋಡು ಮನವಳು |
ಕುವೊಡೆ ಪೆಸರಾರೆಂದು ತೋರ್ಪಂತುಗ್ರಭುಜಗಳನು || ೨೨ ||

ಹರಹಿ ಪರಿಮಳಪೂರ್ಣಪುಷ್ಪದ |
ಸರದಿನೊಪ್ಪುತೆ ದಿವ್ಯರತ್ನಾಂ |
ಬರದ ಹೊದಿಕೆಯ ಹೊದೆದು ರಾರಾಜಿಸುವ ಮಂಚದಲಿ ||
ಒರಗಿ ನಿದ್ರಿಸುತಿರ್ಪ ರಕ್ಕಸ |
ರರಸನನು ಕಂಡಂಜನಾಸುತ |
ನರರೆ ರಾವಣನಿವನು ತಪ್ಪದೆನುತ್ತುಮಿಾಕ್ಷಿಸಿದ || ೨೩ ||

ಅಹುದು ಪುಸಿಯಲ್ಲಿವನೆ ಸಾಹಸ |
ಮಹಿತರಾವಣನಕ್ಕುಮಲ್ಲದೊ |
ಡಿಹುದೆ ಮಿಕ್ಕರಿಗೀಯಸಾಧಾರಣದ ಬಲುದೋಳು ||
ಆಹಹ ರಜತಾಚಲವನೆತ್ತುವ |
ಮಹಿಮೆಯಿವಕೇನೆಂದೆ ನಮಗಿವ |
ನಹಿತನಾಗಿಹನಿವನ ಜೈಸುವ ಬಗೆಯು ನಮಗೆಂತು || ೨೪ ||

ನೋಡಲೀತನ ಬಳಿಯೊಳೊರ್ಪಳು |
ಗಾಢಕಾಂತಿಯುಂ ಸೊಕ್ಕಿ ಮಲಗಿಹ |
ಳಾಡಲೇನಿವಳಾದಿಲಕ್ಷ್ಮಿಯೊ ರತಿಯೊ ಭಾರತಿಯೊ ||
ರೂಢಿಗಸದಳವಾದ ರೂಪಿಂ |
ದೇಡಿಸುತ್ತಿಹಳಿತರವಧುಗಳ |
ನೀಡನೀಕೆಗೆ ಕಾಣೆನೆಲ್ಲಿಯುಮಹಹ ಮೂಜಗದೆ || ೩೫ ||

ಅರಿವಳು ಲಾವಣ್ಯವತಿ ಸುಕು |
ಮಾರಿಯೀಕೆಯು ನೋಡಿ ಸಂಶಯ |
ವಾರಿನಿಧಿಯೊಳು ಮುಳುಗುತೇಳುತುಮಿರ್ಪುದೆನ್ನ ಬಗೆ ||
ನೀರೆ ಸರ್ವಾಭರಣಭೂಷಿತೆ |
ಚಾರುಲಕ್ಷಣಪೂರ್ಣೆಯಿವಳೆನ |
ಗಾರಘೂದ್ವಹನರಸಿಯೆಂಬಾಭ್ರಾಂತಿಯಿತ್ತಪಳು || ೩೬ ||

ಶಿವಶಿವೇನಜ್ಞಾನವಿಂತೆನ |
ಗವನಿಜಾತೆಯು ನೀಚನಹ ದಾ |
ನವನ ಪಕ್ಕವ ಸೇರಿಯೀಪರಿ ಸುಖದೆ ನಿದ್ರಿಪಳೆ ||
ಇವಳ ನೋಡಲ್ಕಹಹ ಮಧುಪಾ |
ನವನು ಗೈದತಿಮದವನಾನುತೆ |
ವಿವಿಧಭಾವದೊಳೊರಗಿದೀತನ ಭೋಗದರಸಿ[illegible] || ೩೭ ||

ಖರೆಯುವಿದು ತಪ್ಪಲ್ಲ ರಾಘವ |
ಸರಸಿ ತಾನಿವಳಲ್ಲ ದನುಜನ |
ಸಿರಿಗೆ ಸೋಲುವಳಲ್ಲವಿನಿಸುಂ ಮನದೆ ಹುಳುಕಿಲ್ಲ ||
ಪರಮಪಾತಿವ್ರತ್ಯಧರ್ಮಕೆ |
ಕೊರತೆಯೈದುವ ಸಮಯದಸುವನು |
ತೊರೆವಳಲ್ಲದೆ ಹೇಸಿಕೆಗೆ ತನುವಿತ್ತು ಜೀವಿಸಳು || ೩೮ ||

ಗೈವೆನೇನನು ಮುಂದೆ ಪುರದೊಳೆ |
ಗಾವಠಾವಿನೊಳಿರ್ಪಳೋ ರಾ |
ಜೀವಮುಖಿ ನಾನರಿಯೆನಂತಃಪುರದೊಳಿಲ್ಲವಳು ||
ಭಾವಿಸಲ್ಕಿರೆ ನಿದ್ರಿಸುತ್ತಿಹ |
ಭಾವೆಯರನೀಕ್ಷಿಸಿದ ಪುರುಷಂ |
ಗಾವರಿಸುವುದು ಪಾಪವೆಂಬುದು ಸುಪ್ರಸಿದ್ಧವಲಾ || ೩೯ ||

ವನಿತೆಯರ ನೋಡಿದೊಡೆ ಪುರುಷಂ |
ಗನಿತಕೇನಘವೊದವಿಸುವುದೆ |
ಮನಸೊಳವನನು ಸೋಂಕೆ ಬಿಡದದು ಶಾಸ್ತ್ರಮರ್ಮವಿದು ||
ತನಗೆ ನೋಳ್ಪೊಡೆ ಬೊಮ್ಮಚರಿಯದ |
ವಿನುತಸುವ್ರತಮಿರ್ಪ ಕಾರಣ |
ಮನಕೆ ಚಲನೆಯುದಿಲ್ಲಮಿಲ್ಲವು ಪಾಪಲೇಪನವು || ೪೦ ||

ಬೆದರೆನವರಿಂದಿದಕೆ ತನಗಿಕ |
ಟೊದವಿಹುದು ಮತ್ತೊಂದು ಭೀತಿಯು |
ಪದುಮನಾಭನ ರಾಣಿಯೇನಾಗಿಹಳೊ ತಾನೆಂದು ||
ಬೆದರಿ ದುಷ್ಟನ ಪರಿಗೆ ಸಾವುದೆ |
ಪದುಳವೆಂದೇನಸುವ ತೊರೆದಳೊ |
ಸುದತಿಯೆಲ್ಲಿಹಳೇಕೆ ಕಾಣಿಸಳಕಟ ತನಗಿಂದು || ೪೧ ||

ಆಕೆವಾಳರನೇಕರಿರ್ದೊಡ |
ಮಾಕಕುತ್ಸ್ಥಜನವರೊಳಾಯ್ದಿಂ |
ತೇಕೆ ಕಳುಹಿದನೆನ್ನನೆನಗೇಕಿತ್ತನುಂಗುರವ ||
ಸಾಕಿದಾತನ ಹರಿಬವನು ಬಲು |
ಜೋಕೆಯಿಂ ಸಾಧಿಸುವ ಶಕ್ತಿ ಎ |
ವೇಕವುಂಟಿವಗೆಂಬ ಭರವಸೆಯುಲ್ತೆ ಮನದೊಳಗೆ || ೪೨ ||

ಇಂತು ತನ್ನನು ನಂಬಿದೊಡೆಯಂ |
ಗೆಂತು ನಾನುಪಕಾರಿಯೆನಿಪುದು |
ಕಂತುಸನ್ನಿಭನರಸಿ ಗೋಚರೆಯಾದೊಡಲೆ ತನಗೆ ||
ಚಿಂತಿಸಿದೊಡೇಂ ಫಲವು ನಿಶೆಯಾ |
ದ್ಯಂತ ಜಾರಿದ ಬಳಿಕಮುದಯಾ |
ನಂತರದೆ ತನ್ನಿಂದಮಪ್ಪುದೆ ನಗರಶೋಧನೆಯು || ೪೩ ||

ಇರುಳು ಕಳೆಯದ ಮುನ್ನವೆಲ್ಲೆಡೆ |
ಯರಸಿ ನೋಡುವೆನೆನುತುಮಲ್ಲಿಂ |
ಸರಿದು ಕಂಡುದ್ಯಾನವನಗಳ ಸಾರುತಾಬಳಿಗೆ ||
ಸುರಭಿಸುಮಕುಲದಿಂದೆ ತುಂಬಿದ |
ಸುರಗಿಪಾದರಿಯುಸುಗೆಸಂಪಗೆ |
ಮರಗಳೆಸೆದಿರ್ಪೊಂದುವನವನು ಪೊಕ್ಕು ಕಾಣಂ ಬಳಿಕ || ೪೪ ||

ಮೆರೆವ ಶಿಂಶುಪೆಯೆಂಬ ಘನತರ
ತರುವದೊಂದನು ಕಂಡು ಮೇಲ |
ಕ್ಕಿರದೆ ಲಂಘಿಸಿಯುಗ್ರಭಾಗವ ಸೇರ್ದು ಕುಳ್ಳಿರುತೆ ||
ತಿರುಗಿ ನಾಲ್ದೆಸೆಗಳೊಳು ರಾಘವ |
ನರಸಿಯೆಲ್ಲಿಹಳೆನ್ನುತೀಕ್ಷಿಸು |
ತಿರುವ ಸಮಯದೆ ರಾಮ ರಾಮೆಂಬುಲಿಯು ಕೇಳಿಸಿತು || ೪೫ ||

ಹಿಗ್ಗಿದನು ಮನದೊಳಗೆ ರೆಂಬೆಯು |
ನೆಗ್ಗಿ ತೆನೆ ಕುಣಿದಾಡುತಮೃತದ |
ಸುಗ್ಗಿ ಕರ್ಣಕ್ಕಹುದು ಲಭಿಸಿತಸ್ಸಿನಪುಣ್ಯವಿದೊ ||
ಸಗ್ಗಸೊಗಕೆಣೆಯಿಹದ ಸೌಖ್ಯ |
ನೊಗ್ಗುಗೂಡಿಸುತಿತ್ತರಾರೆಂ |
ದಗ್ಗಳಿಯುದಗ್ರಣಿಯು ಪವನಜನೀಕ್ಷಿಸಿದನೆಂದು || ೪೬ ||

ಒಲಿದು ಕೇಡನು ಶಿಂಶುಪಾಕರು |
ತಲದೆ ರಾಮಾ ರಾಮ ರಾಮೆಂ |
ದುಲಿಯುತೇಕಾಂಬರವನುಟ್ಟರೆಕೊರಗಿ ಕೃಶೆಯಾಗಿ ||
ನೆಲದೆ ಮಂಡಿಸಿ ದುಃಖಿಸುತ್ತಿಹ |
ಲಲನೆಯೊರ್ವಳನಹಹ ಕಾನೀ |
ಜಲಜಮುಖಿಯಾಸೀತೆಯಾಗಿರವೇಳ್ಕು ಮೆಂದೆನುತೆ || ೪೭ ||

ಮೆಲ್ಲನಿರದೀಕ್ಷಿಸುತೆ ಧರಣೀ |
ವಲ್ಲಭನ ರಘುರಾಮಚಂದ್ರನ |
ವಲ್ಲಭೆಯೆ ನಿಜವಿವಳು ಮನ್ಮನಕೀವಳತಿಮುದವ ||
ಖುಲ್ಲರಕ್ಕಸಿಯರಿದೊ ಸುತ್ತಲು |
ಘುಲ್ಲಣೆಯ ಗೈಯುತ್ತುವಿರ್ಪರು |
ನಿಲ್ಲಿಸುವೊಡಿದಕೇನುಪಾಯವೆನುತ್ತೆ ಚಿಂತಿಸಿದ || ೪೮ ||

## ಮೊದಲನೆಯ ಸಂಧಿ ಸಂಪೂರ್ಣಂ.



# ಎರಡನೆಯ ಸಂಧಿ.

ಸೂ || ಕಾಮಿರಾವಣನುಕ್ತಿಗಂಜಿದ |
ಭೂಮಿಜೆಯಕಂಡಾಂಜನೇಯನು |
ರಾಮಮುದ್ರಿಕೆಯಿತ್ತು ಪೇಳ್ದನು ದೌತ್ಯಸಂಗತಿಯ ||

ಪರಿಪರಿಯುಪಾಯಗಳನನಿಲಜ |
ನೊರೆಯನಿಕ್ಕುತ್ತಿರ್ಪಸಮಯ |
ಕ್ಕರುಣನುದಯದೊಳೆದ್ದು ರಾವಣನಂಗಜಾಶುಗದ ||
ಪರಿಬವಣೆಗೆದೆಗೊಟ್ಟು ಮಡಿಸಿದ |
ಕರಿಯೊ ಎನಲವನಯನುಳಿದಾ |
ಧರಣಿನಂದಿನಿಯಿರ್ಪಶೋಕೋದ್ಯಾನದೆಡೆಗಾಗಿ || ೧ ||

ಸುತ್ತಲೈತರಲಖಿಳಸತಿಯರು |
ಚಿತ್ತಜಾತನಪಳಿವ ಸೊಬಗನು |
ಬಿತ್ತರಿಸುತವರಿಯರಮಧ್ಯದ ಸುರಪನಂತೆಸೆದು ||
ಕತ್ತುರಿಯಗಂಧವನು ತನುವಿಂ |
ಗೊತ್ತಿಪರಿಮಳಪುಷ್ಪಮಾಲೆಯ |
ನುತ್ತಮಾಂಗದೆ ಧರಿಸಿ ನಡೆತರುತಿರ್ದನೊಲವಿನಲಿ || ೨ ||

ದೂರದೊಳೆ ಕಂಡಿವನ ಬರವನು |
ಮಾರುತಾತ್ಮಜನೆಲೆಯ ಮರೆಯನು |
ಸಾರಲವನಿಜೆ ರಾವಣೇಶ್ವರನೆಂದು ಭಯದಂದು ||
ತೋರಲಾಗದೆನುತ್ತುಮುದರವ |
ನೂರುಯುಗಳದಿನೊಡನೆ ಮರೆಗೈ |
ದಾರು ತನಗಿಲ್ಲಿಹರು ಗತಿಯೆಂದಾರಿ ಬಾಯಾರಿ || ೩ ||

ಮೊರೆವ ಬಿರುಗಾಳಿಯಲಿ ಸಿಲುಕಿದ |
ತರುಣಕದಳೀತರುವಿನಂದದೆ |
ಸುರವಿರೋಧಿಯ ಬರವಿಗಬಲೆಯು ನಡುಗಿ ಕಡಬಡಿಸಿ ||
ಪರಮಸತ್ಯವ್ರತನೆ ರಘುಕುಲ |
ಶರಧಿಸೋಮನೆ ರಾಮಚಂದ್ರನೆ |
ಮರೆಯದೆನ್ನನು ಸಲಹಿಕೊಳ್ಳೆಂದೆರಗಿ ನುತಿಸಿದಳು || ೪ ||

ಬಂದನಾಗಳೆ ದಾನವೇಂದ್ರನು |
ಮುಂದೆ ನಿಂದನು ಮಾಸೆಯನು ಬೆರ |
ಳಿಂದೆ ತಿದ್ದುತ್ತಿಂತು ನುಡಿದನು ಸೀತೆ ಮತ್ಪ್ರೀತೆ ||
ಬಂದಿಹೆನು ನಿನಗಾಗಿ ಮನ್ಮಥ |
ನಿಂದೆ ಪೀಡಿತನಾಗಿ ರಾತ್ರಿಯು |
ದೊಂದುಯುಗಕೆಣೆಯಾಗೆ ನೂಂಕಿದೆನವನ ಕಣೆ ತಾಗೆ || ೫ ||

ಒಲಿದು ಬಂದಿಹ ತನ್ನನೀಗಳೆ |
ಸಲುಗೆಯಿಂ ತಕ್ಕೈಸಿ ನಿನ್ನಯ |
ವಿಲಸದಂಗಾಲಿಂಗನಾಯುತಸುಖವ ಕರುಣಿಸುತೆ ||
ಲಲನೆಯರಿಗಸದಳದ ರಾವಣ |
ನೊಲುಮೆಯಮೃತಾಬ್ಧಿಯೊಳು ಮಾಯುತೆ |
ಜಲಜಸಖನುದಯಕ್ಕೆ ಮುನ್ನಿಳಿಪತನುತಾಪವನು || ೬ ||

ಏಳು ನೀನೇಳರಸಿ ನಿನ್ನಯ |
ತೋಳಮಾಲೆಯನೆನ್ನ ಕೊರಲೊಳು |
ಮೇಳವಿಸಿ ವರಕುಂಕುಮಾಂಕಿತತನುವ ಬಿಸುಪಿನಲಿ ||
ಕಾಳಿಜದ ಕಡುನೋವ ನಿಲಿಸಿ ಕೃ |
ಪಾಳುಭಾವವ ಬೀರಿ ತನ್ನಯ |
ಮೇಲೆ ನಿನಗಿರ್ಪಾಸೆಯೇರಿಸು ಕನಕಕಲಶವನು || ೭ ||

ಎಂದು ನುಡಿಯಲು ದಾನವಾಧಿಪ |
ನಿಂದುಮುಖಿ ಪಡಿಮಾತನಾಡುವು |
ದಂದವಲ್ಲವು ಪರಮಸಾಧ್ವೀಮಣಿಗೆ ಪೆರನೊಡನೆ ||
ಇಂದು ತಾನದರಿಂದೆ ತೃಣವಿದ |
ನೊಂದ ಪಿಡಿದಿದರೊಡನೆ ಭಾಷಿಪೆ |
ನೆಂದು ಥಟ್ಟನೆ ತೆಗೆದುಕೊಂಡಳಕೆಂದಳೀಹದನ || ೮ ||

ತೃಣವೆ ಕೀಳೆಂದೆಣಿಸಿ ನಿನ್ನನು |
ಗಣನೆಮಾಡದ ಸತಿಯರಲ್ಲೀ |
ಬಣಗುನುಡಿಗಳು ಶೋಭಿಪುವೆ ಫಡ ತೆರಳು ಪಥವಿಡಿದು ||
ದನುಜರಿಗೆ ಕೀಳ್ನುಡಿಯೆ ಸಹಜವು |
ತನಗೆನೋವಿದರಿಂದಮಿಲ್ಲವು |
ಶುನಕ ಬಗುಳಲು ಹಾನಿಯುಪ್ಪುದೆ ವಿಮಲವಹ ದಿವಕೆ || ೯ ||

ಜಡನೆ ನಡೆನಡೆ ನಿನ್ನ ಭವನ |
ಕ್ಕೆಡಹಿ ಬೀಳದಿರಂಧನಂದದೆ |
ಬಡವಗೇಕಕಟಾನೆಯೆಂಬಾನುಡಿಯ ಕೇಳ್ದರಿಯಾ ||
ತಡೆಯುದಿದು ತೊಲಗೆಂದು ಗಜರಿಸಿ |
ನುಡಿವ ಸತಿಗಸುರೇಂದ್ರನೆಂದನು |
ಕಡೆಗೆ ತನ್ನನು ಬಡವನೆಂದೇ ಬಗೆದೆಯೇನೆಲೆಗೆ || ೧೦ ||

ಸುರಪನನು ನೆರೆ ಬಡಿದು ಸಗ್ಗದ |
ತರುವುಮಂ ಪೇಣ್ ತುರುವ್ರಮಂ ಸಲೆ |
ತರಿಸಿ ತನ್ನರಮನೆಯೊಳಿರಿಸಿಹ ಭಟನು ಬಡವನಲೆ ||
ಮೆರೆವ ಕೈಲಾಸವನು ಶಶಿಶೇ |
ಖರನು ಚೀರಿಡಲೆತ್ತಿ ತೋಳ್ಗಳಿ |
ನಿರದೆ ಪುಟಚೆಂಡಾಡಿದಾಬಲುಭಟನು ಬಡವನಲೆ || ೧೧ ||

ಸಾಕುಸಾಕೆನಿಸಾಕುಬೇರನ |
ನೂಕಿ ಬಡಿದವನುರುವಿಮಾನವ |
ನಾಕೆವಾಳಿಕೆಯಿಂದೆ ತಂದಾಭಟನು ಬಡವನಲೆ ||
ನಾಕಿನಾಥನು ಬೊಮ್ಮನಂತು ಪಿ |
ನಾಕಿವಿಷ್ಣುಗಳಾವನಾಜ್ಞೆಯ |
ನೇಕಭಾವದೆ ಸಲಿಸಲಾಪಟ ಭಟನು ಬಡವನಲೆ || ೧೨ ||

ತರುಣಿ ನಿನ್ನ ವಿವೇಕವೆನಗ |
ಚ್ಚರಿಯ ಬೀರುವುದಿದಕೆ ನಗುವೆನೆ |
ಒರದೆ ಕೆಟ್ಟಪಳೆಂದು ಮರುಗುವೆನೇನು ಮನದೊಳಗೆ ||
ಅರಿಯದಂಗನೆಗೊರೆದು ಬುದ್ಧಿಯ |
ಸರಿಪಡಿಪ ವೃದ್ಧೆಯರು ಸನಿಹದೊ |
ಳಿರದ ಬಳಿಕೇನವಳವಸ್ಥೆಯನೊರೆವುದವನಿಯೊಳು || ೧೩ ||

ಒರೆವನೇನನೊ ಕಾಮುಕತ್ವದಿ |
ನರಿಯದವಳೊಡನೆಂದುಬಗೆವೆಯ |
ಪರಿಕಿಸಲು ಯೌವನದ ಸೊಬಗದು ನೋಡೆ ಚಂಚಲವು ||
ಪರಿದುಪೋದಾ ನದಿಯ ಜಲ ಪಿಂ |
ದಿರುಗದಂದದೆ ಕಳೆದ ಹರೆಯವು |
ಮರಳಿ ಬಾರದು ಲಲನೆ ನೀನಿದನರಿವುದೊಳ್ಳಿತಲೆ || ೧೪ ||

ರಾಮರಾಮಾಮನುತೆ ನೀಂ ನಿ |
ಸ್ಸೀಮನಾಗಿರುವವನ ನೆನೆಯುತೆ |
ಕೋಮಲಾಂಗವನಿದನು ಕೊರಗಿಪುದಂದವೇ ನಿನಗೆ ||
ಭೂಮಿಯಾಸೆಯ ತೊರೆದು ದುರ್ಗವ |
ಭೂಮಿಯಲಿ ಪಗಲಿರುಳು ತೊಳಲುತೆ |
ಭಾಮಿನಿಯನೀಗಾಡಿದಾಕುಲಜನರನು ಬದುಕಿಹನೆ || ೧೫ ||

ಕ್ಷೋಣಿಯೊಳು ಬದುಕಿರಲು ಮಿನ್ನಾ |
ಪ್ರಾಣಿಯಿಂದೇನಹುದು ಲಂಕೆಯ |
ಕಾಣುವಾಬಗೆಯೆಂತು ದಾಂಟುವುದೆಂತು ಬಲುಗಡಲ ||
ಏಣಲೋಚನೆಯಿನಿತನರಿಯದೆ |
ಕೇಣದಿಂ ನೀಂ ಕೆಟ್ಟುಪೋಗದೆ |
ರಾಣಿಯೆನಿಸೀಸಾರ್ವಭೌಮಂಗಾಳು ಲೋಕಗಳ || ೧೬ ||

ಎಂದು ದಶಶಿರನಾಡೆ ಮನದೊಳು |
ನೊಂದು ಸತಿ ಕೋಪಿಸುತೆ ನುಡಿದಳು |
ಹಂದೆ ನೀನೀತೆರದೊಳಾಡಲು ಮುಂದಿಯೊಪ್ಪುವುದೆ ||
ಅಂದು ತನ್ನೊಡೆಯನನು ವಂಚಿಸಿ |
ತಂದು ತನ್ನನು ಬಾಯ್ಗೆ ಬಂದಂ |
ತಿಂದು ಗಳಹಿದೊಡೇನು ಪೌರುಷದಂದವಿದು ನಿನಗೆ || ೧೭ ||

ನಿಲಿಸುನಿಲಿಸಾ ನಿನ್ನ ಬಾಯನು |
ಕಲಿಕುದೆಲ್ಲವ ಗಳಹಿ ಕೆಡದಿರು |
ಹಲವು ನಿನ್ನೀತಲೆಗಳಿವನುಳುಹಿಸುವುಪಾಯವನು ||
ತಿಳಿದ ಮಂತ್ರಿಗಳಿಂದಮರಿಯುತೆ |
ಮಲಿನಹೃದಯವನಿದನು ತೊಳೆಯುತೆ |
ಸಲಹುನೀನೆಂದೆರಗುತೆನ್ನರಸಂಗೆ ಸಲಿಸೆನ್ನ || ೧೮ ||

ಸರಳನೆನ್ನಯ ಪತಿಯು ನಿನ್ನಯ |
ದುರುಳತನವನು ಮರೆದು ಮನ್ನಿಸಿ |
ಪರಕೃಪಾರಸದಿಂದೆ ಸನೆಯಿಸಿ ಪಾಲಿಪನು ನಿನ್ನ ||
ಶರಣಮಾರ್ಗವಿದೊಂದೆ ಗತ್ಯಂ |
ತರವು ನಿನಗಿದನುಳಿಯೆ ಕಾಣೆನು |
ಹರಿಹರಾದ್ಯರ ಮರೆಯ ಪುಗಲುಂ ಬದುಕುವುದನಿನ್ನು || ೧೯ ||

ಮತ್ತೆ ಕೇಳಿದು ಸತ್ಯವೆಲೆ ನಿನ |
ಗುತ್ತರವನಿನ್ನೀಯೆನೆನ್ನುತೆ |
ಮತ್ತಕಾಶಿನಿಯುಡ್ಡ ಮೊಗಮಿಡಲಾಗ ರಾವಣನು ||
ಮಿತ್ತುವಿನ ಸೆರಗೆಳೆವನೋ ಎನ |
ಲೆತ್ತಿ ಖಡ್ಗವ ಸನಿಹಕೈತರ |
ಲೊತ್ತಿನೊಳಗಿಹ ಕಾಪಿನಸುರಿಯರಾಗದಾಗಡೆನೆ ||೨೦||

ನೋಡಿದನು ಕಡು ಮುಳಿದು ನೀವಿಂ |
ತಾಡಬಹುದೇನೀಕೆ ನಾಡಿನ |
ಗಾಡಿಕಾತಿಯೆನುತ್ತೆ ಬಗೆದಿರ ನಿಮ್ಮ ಮನದೊಳಗೆ ||
ಜೋಡಿಸುತೆ ಮಾಯೆಯನು ಬಗೆದಂ |
ತಾಡಿಸುತ್ತಿಹಳೆನ್ನ ನೀಂಗಳು |
ಬೇಡಿದುದರಿಂನಿಮ್ಮ ವಚನದಿನಿವಳ ಬಿಟ್ಟಿಹೆನು || ೨೧ ||

ಗಡುಬವಿತ್ತಿಹೆನೊಂದುತಿಂಗಳ |
ನೊಡಬಡಿಸಿ ನೀವಿವಳನದರೊ |
ಳ್ಬಿಡದೆಯೊಪ್ಪಿಸಲೆನಗೆ ಪಡೆವಿರಿ ಪಾರಿತೋಷಿಕವ ||
ತಡೆದಿರಾದೊಡೆ ನಿಮ್ಮ ನಿವಳೊಡ |
ನಡಿಗೆಮನೆಯೊಳಗೈದೆ ಬೇಯಿಸಿ |
ಯಡಗನಾರೋಗಿಸುವೆನೆಂದರಮನೆಗೆ ತೆರಳಿದನು || ೨೨ ||

ನೆಮ್ಮಿ ತರುಶಾಖೆಯನು ಹನುಮನು |
ಸುಮ್ಮನೀಕ್ಷಿಸಿ ಖಲನ ಚೇಷ್ಟೆಯ |
ನುಮ್ಮಳಿಸುತಿರಲಸುರಿಯರು ಬಳಸುತ್ತೆ ಸೀತೆಯನು ||
ಹಮ್ಮನುಳಿಯಿನ್ನಬಲೆ ಕೆಡದಿರು |
ನಮ್ಮ ಮಾತನು ಕೇಳು ರಾಮನ |
ನೆಮ್ಮಿ ಬದುಕುವೆನೆಂಬ ದುರ್ಬುದ್ಧಿಯನು ನೀನುಳಿಯ || ೨೩ ||

ದೇವದಾನವಯಕ್ಷಕಿನ್ನರ |
ರಾವನಾರ್ಭಟಿಗಂಜಿ ನಿಜರಾ |
ಜೀವಮುಖಿಯುರ ತಂದು ವಿನಯದಿನಿತ್ತು ಬದುಕಿಹರೊ ||
ಭಾವಲೀಲೆಗಳಿಂದೆ ಮನ್ಮಥ |
ನಾಪಚೆನ್ನಿಗನೆನಿಸಿ ಮೆರೆವಾ |
ರಾವಣೇಶ್ವರನೊಡನೆ ಕೂಡುತೆ ಸುಖದೆ ನೀಂ ಬಾಳು || ೨೪ ||

ಕೇಳುನವಿರ್ಮಾನುಡಿಯ ನಿನ್ನಯ |
ಚಾಳಿಯಿದು ನಮಗೊಪ್ಪಡಹಹಾ |
ಮೇಳನವು ದನುಜೇಶನೊಡನದು ನಿನಗೆ ವಿಷವಾಯ್ತೆ ||
ಆಳಿದನ ಮಾತಿರಲಿ ಕೇಳವ |
ನೊಳಿಗದಭಟರೆಮ್ಮ ಕೂಡಿದೊ |
ಡೇಳುಜನುಮದ ಪಾಪವೆಮ್ಮನು ನೀಗಿ ತೊಲಗುವುದು || ೨೫ ||

ನಮಗಮಿಂತಹ ಪುಣ್ಯಮೆಲ್ಲಿಯು |
ದಮುಮ ನೀನೇ ಧನ್ಯೆಯಸುರರ |
ರಮಣನೇ ತಾನೊಲಿದು ನಿನ್ನನು ಸೇರಲಿಚ್ಛಿಪನು ||
ಕುಮತಿ ನೀನಿದಕೊಪ್ಪಿ ಬರ್ಪೆಯೊ |
ಯಮನಪಾಳಯದತ್ತ ಪೋಪೆಯೊ |
ತಮಗಿವೆರಡರೊಳೊಂದನೊರೆವುದು ಬೇಗ ನೀನೆನುತೆ || ೨೬ ||

ಗದರಿಗರ್ಜಿಸಿ ಮತ್ತೆ ನಾನಾ |
ವಿಧದ ಹಿಂಸೆಯ ನೀಯತೊಡಗ |
ಲ್ಕದನು ಕಂಡಾವೃದ್ಧೆಯೊರ್ವಳ್ ತ್ರಿಜಟೆಯೆಂಬವಳು ||
ಸದರವಿದು ನಿಮಗಿವಳೊಳುಚಿತವೆ |
ಸುದತಿಯಿವಳಾರಾಮಚಂದ್ರನ |
ಹೃದಯವಲ್ಲಭೆಯಿವಳುದ್ಭುತವನೊಂದನೊರೆವಪೆನು || ೨೭ ||

ಇರುಳ ಕೊನೆಯೊಳಗೊಂದುಕನಸನು |
ಪರಮಸಂಭ್ರಮವಾಗೆ ಕಂಡೆನು |
ಮೆರೆಯುವಾಕಾಶದಲಿ ಜಾನಕಿಯೊಡನೆ ರಘುವರನು ||
ಧರಿಸಿ ಧವಳಾಂಬರವ ಪಾಂಡುರ |
ಕರಿಯನೇರಿ ಸುಪುಷ್ಪಮಾಲೆಯು |
ಕೊರಲೊಳೆಸೆಯಲ್ಕುತ್ತರದ ದೆಸೆಗಾಗಿ ಪೋಪುದನು || ೨೮ ||

ಒಡನೆ ಕಂಡೆನು ವಿಗಡರಕ್ಕಸ |
ಗಡಣದೊಡನೆಮ್ಮೊಡೆಯನಂಗಕೆ |
ತೊಡೆದು ತೈಲವ ರಕ್ತವರ್ಣದ ಪುಷ್ಪಗಳ ಧರಿಸಿ ||
ಬಿಡದೆ ಗರ್ದಭವೇರಿ ತೆಂಕಣ |
ಕಡೆಗೆ ತೆರಳುತ್ತಲ್ಲಿ ಗೋಮಯ |
ವಿಡಿದಮಡುವೊಳು ಮುಳುಗಿ ಮೇಲಕ್ಕೇಳದಿರ್ದುದನು || ೨೯ ||

ಅಳಿದರೆಮ್ಮ ಪರೆಲ್ಲರವರೊಳ |
ಗುಳಿದನೊರ್ವ ವಿಭೀಷಣನು ನೆರೆ |
ಬೆಳುಗೊಡೆಯು ನೆಳಲಿನೊಳು ರತ್ನಾಂಬರದೆ ಶೋಭಿಸುತೆ ||
ಅಳಲುಗಡಲೊಳು ಮುಳುಗಿದಸುರರ |
ಲಲನೆಯರ ಸಂತೈಸುತೊಪ್ಪಿದ |
ನೆಳೆಯ ಕೇಸರನೇಳಿಸುವವೊಲ್ಸಿಂಹಪೀಠದೊಳು || ೩೦ ||

ಕನಸಿದೀಕೆಗೆ ಮುಂದೆಯೊದವುವ |
ಘನಶುಭಂಗಳ ಸೂಚಿಪುದು ನೀಂ |
ಮನಕೆ ತಂದಿದನಿನ್ನು ಮುಂದಾದೊಡೆಯುಮಳಲಿಸದೆ ||
ವಿನಯವನು ತೋರುತ್ತೆ ವನಿತೆಯು |
ನನುಸರಿಸಿಕೊಂಡಿರ್ಪರಾದೊಡೆ |
ಮನುಕುಲೇಶನು ನಿಮ್ಮ ಪಾಲಿಪನೆಂದಳಾ ತ್ರಿಜಟೆ || ೩೧ ||

ಇನಿಯನೆಡೆಯುಳಿದಿರ್ಪುದಲ್ಲದೆ |
ಮನುಜರೆಂಬರ ಸೆಲೆಯು ಕಾಣದೆ |
ಘನಸಮುದ್ರದ ಮಧ್ಯದೇಶದೊಳಸುರರೆಡೆಯಲ್ಲಿ ||
ತನಗೆ ಹಿತರಾವರ ಕಾಣುವೆ |
ನೆನಿಪ ಭವವನೆಯಿಲ್ಲದಿರ್ಪ |
ವನಿತೆಯನು ಬಗೆ ನೋಯಲಾತಿದೊಡೆಂತು ಸೈರಿಪನು || ೩೨ ||

ಖುಲ್ಲ ರಾವಣನೊರೆದ ಕೀಳ್ನುಡಿ |
ಭಲ್ಲೆಯುದವೋಲೆದೆಗೆ ನಾಂಟಿರೆ |
ಹುಲ್ಲಿಗುಂ ಕಡೆಯೆನಿಸ ರಕ್ಕಸಿವಿಂಡು ಜೇವರಿಸಿ ||
ಜೆಲ್ಲಸುಡಿಗಳನಾಡಿ ಬೆದರಿಸಿ |
ಕೊಲ್ಲಲೈತರಲಾಗ ಸಹಿಸದೆ |
ವಲ್ಲಭನ ನೆನೆನೆನೆದು ಹಲುಬಿದಳಿರದೆ ಜಾನಕಿಯು || ೩೩ ||

ಶಮವು ಮನದೊಳಗಡಸಿ ಬುದ್ಧಿ |
ಭ್ರಮೆಯನೊದವಿಸೆ ಮೆಲ್ಲನೇಳು |
ತ್ತಮಮ ತನಗಿನ್ನೇಕೆ ಬದುಕೆನುತಾಗ ಶಿಂಶುಪೆಯು ||
ನಮಿತಶಾಖೆಗೆ ತನ್ನ ಕಂಠವ |
ನಮರಿಸುತ್ತಿರೆ ಕೇಶಪಾಶದಿ |
ನಮಿತಬಲನಾಹನುಮನೀಕ್ಷಿಸಿ ರಾಮರಾಮೆನಲು || ೩೪ ||

ಬೆಚ್ಚಿದಳು ಲಲಿತಾಂಗಿ ತನ್ನಯ |
ಮೆಚ್ಚಿನಿನಿಯನ ಪೆಸರ ಕೇಳ್ದೊಡ |
ನೆಚ್ಚರಿಕೆ ಮನಕೊದವಲುಳಿದೊಡನಾತ್ಮಹತ್ಯೆಯನು ||
ಸಚ್ಚರಿತೆಯೆಂದೆನಗೆ ಹೃದಯದೊ |
ಳುಚ್ಚಪೀಠವನಿಸ್ತು ತನ್ನನೆ |
ನೆಚ್ಚಿದರಸಂಗೆರಡಬಗೆದಂತಾಗುತಿರ್ದದಲಾ || ೧೫ ||

ಏನಿದಚ್ಚರಿ ತನ್ನ ಪುಣ್ಯವು |
ಭಾನುಕುಲಪನ ದಿವ್ಯನಾಮವು |
ಹೀನಭಾಗ್ಯೆಗದೆಂತು ಲಭಿಸಿತ್ತಾರು ಪಠಿಸಿದರು ||
ಮಾನವರಿಗರಿದೆನಿಸುವೀಲಂ |
ಕಾನಗರಿಯನು ಪೊಕ್ಕು ಪರನು |
ಜ್ಞಾನಸಾಧನನಪ್ಪ ರಾಮನ ಭಜಿಸುವವರಿಹರೆ || ೧೬ ||

ಇರುವೊಡಂತಹನೊರ್ವಪುರುಷನು |
ದುರುಳತನಕೀಬುಂಟೆ ಲಂಕೆಯೊ |
ಳರಿಯಲಭ್ರದ ನುಡಿಯಿದಾಗಿರಸೇಳ್ಕುಮಿಂದಲ್ತೆ ||
ಸುರರು ತನ್ನಯ ಮರೆವೆಯನು ಪರಿ |
ಹರಿಸಲೀಯುಪಕೃತಿಯ ಗೈದರು |
ಕರವಮುಗಿವೆನೆನುತ್ತೆ ನೋಡಿದಳಾಗಳಾಗಸವ || ೧೭ ||

ಸಮಯವೆಂದನಿಲಜನುತಾನಾ |
ದ್ರುಮದಿನಿಳಿದನು ಸೀತೆಯಿದಿರೊಳು |
ವಿಮಲೆ ನತಜನಪಾಲೆ ಸದ್ಗುಣಮಾಲೆ ಶುಭಶೀಲೆ ||
ಕಮಲೆ ಪಾರ್ವತಿ ಶಚಿ ಸರಸ್ವತಿ |
ನಮಿಸುವೀಶ್ರೀರಾಮದೂತನ |
ಮಮತೆಯಿಂ ನೀಂ ಬಿಡದೆ ರಕ್ಷಿಪುದೆಂದು ನಮಿಸಿದನು || ೧೮ ||

ಬಳಿಕವರುಹಿದನಿಂತಯೋಧ್ಯೆಯ |
ನಿಳೆಯರಮಣನು ದಶರಥೇಂದ್ರನು |
ನಲವಿನಿಂ ಪಾಲಿಸುವ ಸಮಯದೊಳವನ ಕಿರಿಯರಸಿ ||
ಕಳುಹಿದಳು ತಾಂ ಹಿರಿಯನಾದೊಡ |
ವೊಲಿದು ನಿಮ್ಮಯ ಪತಿಯನಡವಿಗೆ |
ಚಲದೆ ನಿಲಿಸಿದಳಣುಗಭರತನನೆಸೆವರಾಜ್ಯದಲಿ || ೧೯ ||

ಭರತನೊಪ್ಪದೆ ಚಿತ್ರಕೂಟದೊ |
ಳಿರುವ ನಿಮ್ಮೆಡೆಗೈದಿ ಕರೆದೊಡೆ |
ಬರುವೆನವಧಿಯು ಮುಗಿದನಂತರವೆಂದೊಡಂಬಡಿಸಿ ||
ಪರಮಧಾರ್ಮಿಕ ರಾಮನಾತಂ |
ಗಿರದೆ ಪಾದುಕೆಯಿತ್ತು ಕಳುಹಿಸಿ |
ಗಿರಿಯನಿಳಿದಾದಂಡಕಾವನದತ್ತ ಸಾರಿದನು || ೪೦ ||

ಖಳವಿರಾಧನ ಕೊಂದು ಋಷಿಗಳಿ |
ಗೊಲಿದು ರಾಕ್ಷಸಕುಲವನಳಿಯಿಪ |
ಚಲದ ಭಾಷೆಯನಿತ್ತು ಶರಭಂಗಾಶ್ರಮವ ಪೊಕ್ಕು ||
ತಳುವದಲ್ಲಿಂ ಮುಂದಗಸ್ತ್ಯರ |
ನಿಳಯದೊಳಗಾತಿಥ್ಯಮಂ ಕೊಂ |
ಡೆಳಸಿ ನೆಲಸುತೆ ದಂಡಕಾವನದಲ್ಲಿ ಸುಖದಿನಿರೆ || ೪೧ ||

ಬಂದಳಲ್ಲಿಗೆ ಶೂರ್ಪಣಖೆ ಕಾ |
ಮಾಂಧೆಯಾಗುತ್ತಿವಳ ಶಿಕ್ಷಿಪು |
ದೆಂದು ರಾಘವನೊರೆಯೆ ಲಕ್ಷ್ಮಣನವಳ ಮೂಗರಿಯೆ ||
ಮಂದಮತಿಗಳನೇಕರಾಕ್ಷಸ |
ರೊಂದುಗೂಡುತ್ತೈದಲವರನು |
ತಿಂದು ತೇಗಿದುವಂದು ರಾಮಾಸ್ತ್ರಗಳು ಬಗೆ ತಣಿಯೆ || ೪೨ ||

ಕೇಳಿ ತಂಗಿಯ ಮಾನಭಂಗವ |
ಖೂಳರಾವಣ ಯತಿಯ ರೂಪನು |
ತಾಳಿ ವಂಚಿಸಿ ರಾಘವರನಾರೆ ನಿಮ್ಮನೆಳೆದುಯ್ದ ||
ಲೋಲಭಾವದಿನಿತ್ತಲೈತರೆ |
ಪಾಳುಮನೆಯೊಳ್ನಿಮ್ಮ ಕಾಣದೆ |
ತಾಳಲಾರದೆ ಬನದೊಳಸ್ತವರಳಲಿ ಮಿಗೆ ತೊಳಲಿ || ೪೩ ||

ತೆರಳುತಲ್ಲಿಂ ಮುಂದೆ ಸಿರುಕಿಸಿ |
ಪರಿದರೆಕ್ಕೆಯ ಪರಜಟಾಯುವ |
ನರಿದರವನಿಂ ನಿಮ್ಮನಸುರನು ಕದ್ದ ಸಂಗತಿಯ ||
ಬಳುತುಮಲ್ಲಿಂದುರುಕಬಂಧನ |
ತರಿದು ಮುಂದಿಹ ಋಶ್ಯಮೂಕದ |
ಗಿರಿಯನವನಿಂ ಕೇಳ್ದು ಸುಗ್ರೀವನಲಿ ಸಖ್ಯವನು || ೪೪ ||

ಅನಲನಿದಿರೊಳು ಬೆಳಸಿ ವಿಕ್ರಮ |
ವನಧಿಯುಹ ವಾಲಿಯನು ಕೊಂದವ |
ನನುಜಸುಗ್ರೀವಂಗೆ ಕಿಷ್ಕಿಂಧಾಧಿಪತ್ಯವನು ||
ಮನುಕುಲಾಧಿಪರಿತ್ತು ನಿಮ್ಮನು |
ವನವನಂಗಳೊಳ್ಳೈದೆ ಹುಡುಕಿಸ |
ಲನುವಿನಿಂದಾಣತಿಯನೆಸಗಲು ಬಳಿಕ ರವಿಸುತನು || ೪೫ ||

ಕರೆದು ಮಂತ್ರಿಗಳೆನಿಪ ನಮ್ಮನು |
ಪರಿಪರಿಯೊಳಾದರಿಸಿಯರಸು |
ತ್ತರಸಿಯೆಲ್ಲಿಹಳೆಂಬ ಸುದ್ದಿಯನರಿದು ತಿಂಗಳೊಳು ||
ಒರೆವುದೆಂದಪ್ಪಣೆಯನೀಯು |
ಲ್ತಿರಳಿತ್ತೊಡನೆಯೆ ಪಲವು ಕೋಟಿಯ |
ವರಕಪೀಂದ್ರರ ಪಡೆಯು ನಾನಾದೇಶಗಳ ಕಡೆಗೆ || ೪೬ ||

ಇತ್ತ ದಕ್ಷಿಣದಿಶೆಗೆ ಪಯಣಗೊ |
ಳುತ್ತ ಯುವರಾಜಾಂಗದನು ತಾಂ |
ಮತ್ತೆ ಜಾಂಬವದಾದಿಕಪಿವರರಾನುಮೈದಿದೆವು ||
ಸುತ್ತಿದೆವು ದಿಗ್ದೇಶವೆಲ್ಲವ |
ನೆತ್ತಲುಂ ಕಾಣದೆಯೆ ಮನಬೇ |
ಸತ್ತು ಜೀವವ ನೀಗಿದಪೆವೆಂದನಶನವ್ರತದೆ || ೪೭ ||

ಇರುವ ನಮ್ಮನು ನೋಡಿ ಪಕ್ಷಿಗ |
ಳರಸನಾಸಂಪಾತಿ ಕನಿಕರ |
ವೆರಸಿ ಪೇಳಿದನಿತ್ತ ನೀವಿಲ್ಲಿರುವ ಸಂಗತಿಯು ||
ಹರುಷವಾಂತೆವು ಮನದೆ ಬಳಿಕಿರ |
ದರೆಗಳಿಗೆಯಲಿ ಕಡಲ ಸೇರ್ದು |
ತ್ತರಿಸಲರ್ಹತೆಯಾರಿಗುಂಟೆಂಬುದನು ನಿರ್ಧರಿಸಿ || ೪೮ ||

ಎಲ್ಲರಭಿಮಾನಿಸುತೆ ಪೋಗೆಂ |
ದಿಲ್ಲಿಗೆನ್ನನು ಕಳುಹೆ ಬಂದೆನು |
ಖುಲ್ಲೆ ಲಂಕಿಣಿ ತಡೆಯೆ ಕೆಡಹಿದೆನವಳ ಬಾಗಿಲಲಿ ||
ನಿಲ್ಲದೂರೊಳು ಪೊಕ್ಕು ರಕ್ಕಸ |
ಮಲ್ಲರಾಲಯಗಳಲಿ ಹುಡುಕು |
ತ್ತೆಲ್ಲು ಮರೆಯದೆ ನಿಮ್ಮನೀಬನದತ್ತ ಸಾರ್ದೆನು || ೪೯ ||

ಬಂದು ತಾನಿಂದಿಲ್ಲಿ ನಡೆದುದ |
ನೊಂದುಮಂ ಬಿಡದಂತೆ ನೋಡ |
ಲ್ಸಂದಿತೆನ್ನಯ ಮನಕೆ ನಂಬುಗೆ ದೇವಿ ನೀವೆಂದು ||
ಸಂದೆಗಕೆ ತೆರಪುಂಟೆ ಸಾಧ್ವೀ |
ವೃಂದಚೂಡಾಮಣಿ ಸಮಸ್ತಾ |
ನಂದಕಾರಿಣಿ ರಾಮಚಂದ್ರನ ರಾಣಿ ನೀವಲ್ತೆ || ೫೦ ||

ಎನುತು ಮಿದಿರಲಿ ಕರವ ಜೋಡಿಸಿ |
ಹನುಮ ನಿಂದಿರಲವನಿತನುಜೆಯು |
ಮನದೆ ಬೆದರಿದಳಮಮ ರಾಕ್ಷಸಮಾಯೆಯೆಂದೆನುತೆ ||
ಮನುಜಸಾಮಾನ್ಯನಿಗೆ ಮೀರಿದ |
ಘನಸುಭಾಷಿತವಿದನು ಕೋಡಗ |
ವೆನಿತು ಕಲಿತೊಡನೊರೆಯಲಹುದೇ ಚೋದ್ಯವಿದು ಜಗದೆ || ೫೧ ||

ನುಡಿವುದಿದು ನಾವೆಂದರಣ್ಯದೆ |
ನಡೆಯಿಸಿದರೀತಿಗಳನಿನಿಸುಂ |
ಬಿಡದಪರಿಯಲಿ ತಿಳಿದಬಗೆಯೆಂತಕಟ ಕಪಿಗಿದಕೆ ||
ಕಡಲನೆಂತಿದು ದಾಂಟಿ ಬಂದುದು |
ಬಡವಲೀಮುಖಕೆಂತಿದಪ್ಪುದು |
ತಡಿಯ ತಾಣದ ನಾವೆಯಂತಿಹುದೆನ್ನ ಬುದ್ಧಿಯಿದು || ೫೨ ||

ಅರಿದೆಲ್ಲಿಂದೇತಕೆಂಬ ವಿ |
ಚಾರವೀಗಂತಿರಲಿ ಕಾಂತನ |
ಚಾರುಸಂಕೀರ್ತನವ ಗೈಯುತ್ತೆನಗೆ ತೋಷವನು ||
ಬೀರುತಿರ್ಪುದರಿಂದೆ ಘೋರಾ |
ಕಾರಕಾಲನೆ ಆಗಲಿಂದುಪ |
ಕಾರವನು ಗೈದಾಪ್ತನೆನಗಿವನೆಂದು ಭಾವಿಪೆನು || ೫೩ ||

ಅರಿಯೆನೇತಕೊ ತನ್ನ ಮನದೊಳು |
ಹರುಷ ಪೆರ್ಚುತ್ತಿರ್ಪುದೀಕಪಿ |
ಯರಿವೊಡಾಶ್ರೀರಾಮದೂತನೆ ಆಗವೇಳ್ಕುಮಲೆ ||
ಬರಿದೆ ಲಭಿಸುವುದೆಂತು ಮುದಮಿದು |
ಪರಿಕಿಸುವೆನಿದನೆನ್ನುತಾಸರ |
ಸಿರುಹಸಂಭವೆಯುಂದಿರದೆ ನುಡಿಸಿದಳಾಕಪೀಂದ್ರನನು || ೫೪ ||

ಎಲವೊ ನೀನಾರುಸಿರು ನಿಜವನು |
ಹಲವುತಲೆಗಳ ಮರಸಿ ಬಂದಿಹ |
ಖಳನೊ ಮೇಣವನನುಚರನೊ ನೀನೇತಕಲೆಯುತಿಹೆ ||
ಕೆಲಸವೇಂ ನಿನಗೆನ್ನ ಸನಿಹದೊ |
ಳಲಸದೆಲ್ಲ ಮನೊರೆವುದೀಗಳೆ |
ಕುಲದ ಬೇರನು ಸುಡುವ ಕೃತ್ಯವ ಬಗೆಯದಿರು ಮನದೆ || ೫೫ ||

ದನುಜ ನೀನಲ್ಲದೊಡೆ ತಳುವದೆ |
ಮನದ ಸಂದೇಹವನು ತೊಲಗಿಸಿ |
ನನಗೆ ನಂಬುಗೆ ಪುಟ್ಟುವಂತಹ ಬಗೆಯನೆಸಗುವುದು ||
ವನದ ವಾನರ ನೀನು ನಿನ್ನೊಳು |
ಮನುಜಪತಿಗಳಿಗೆಂತು ಮೈತ್ರಿಯು |
ವಿನುತಶಾಸ್ತ್ರಾರ್ಥದಲಿ ಕೋವಿದನಾಗಿ ತೋರುತಿಹೆ || ೫೬ ||

ಲೋಕದೊಳು ಕಂಡರಿಯದಿನಿತು ವಿ |
ವೇಕ ನಿನಗೆಲ್ಲಿಂದೆ ಬಂದುದು |
ಸಾಕು ನೀನದನೊರೆಯಲೆನಗೆಂದವನಿಜೆಯು ನುಡಿಯೆ ||
ನೂಕಬೇಕಲೆ ಸಂಶಯವನೀ |
ಲೋಕನಾಥನ ಸತಿಯ ಮನದಿಂ |
ದೀಕೆಗಿನ್ನೆನ್ನನುವನರುಹುವೆನೆಂದು ಪವನಜನು || ೫೭ ||

ತಾಯೆ ಕೇಳೌ ನಮ್ಮದಿಳೆಯೊಳ |
ಗಾಯತವು ಕಪಿಕುಲವು ಲೋಕ |
ನ್ಯಾಯವಿಡಿದು ವಿವೇಕಮಾರ್ಗದೊಳಾವು ಚರಿಸುವೆವು ||
ಕಾಯಮಾತ್ರದೆ ಕಪಿಗಳಲ್ಲದೆ |
ಹೇಯಗುಣಗಣವುಳ್ಳರಲ್ಲವು |
ದಾಯಗಿಡದಿಹುದೆಮ್ಮೊಳಾರ್ಯರ ಸತ್ಕುಲಾಚರಣೆ || ೫೮ ||

ಕೆಲವರೆಮ್ಮವರೊಳಗೆ ಸುರಪತಿ |
ಜಲಜಮಿತ್ರಬ್ರಹ್ಮದೇವಾ |
ನಲರಿನುದಯಿಸಿದವರು ತಾನಾಮರುತನಿಂದೊಗೆದೆ ||
ಹಲವುವೇದಾಗಮಪುರಾಣಗ |
ಳೊಳಗೆ ಪರಿಚಯವುಂಟು ನಮಗಿಂ |
ದಿಳೆಯ ಜನದೊಳು ಸಲುಗೆ ತಪ್ಪಿತು ಬಾಲಮಾತ್ರದಲಿ || ೫೯ ||

ಕೊರತೆಯಲ್ಲಿದು ನಮಗೆ ದೇಶದ |
ಪರಿಗೆ ತಕ್ಕಂತಿಹುದು ಚಲಿಸುವೊ |
ಡರಿದು ಮಿಕ್ಕಿನ ಸಾಧನಂಗಳ ಬಲದೊಳಡವಿಯಲಿ ||
ತರುಗಳೆಡೆಗುಡದಂತೆ ನಭವನು |
ತರುಬುವೋಲ್ಬೆಳೆಯುತ್ತೆ ನಿಂದಿಹು |
ವೆರಲ ಸಂಚಾರಕ್ಕಮಸದಳವೆಮ್ಮ ವಿಪಿನವದು || ೬೦ ||

ಮನಕೆ ತೋರಿದ ರೂಪನೊಂದುವ |
ಘನತರೋನ್ನತವಾಗೆ ಬಳೆಯುವ |
ತನುವ ಸಂಕೋಚಿಸುವ ಕೌಶಲವುಂಟು ತನ್ನೊಳಗೆ ||
ಇನಕುಲಾಧಿಪನರಿದಿದೆಲ್ಲವ |
ನವಲನಿದಿರೊಳು ನಮ್ಮ ಮೈತ್ರಿಯ |
ನನುಗೊಳಿಸಿಯಿಂತೆನ್ನ ಕಳುಹಿದ ನಮಲೆ ನಿಮ್ಮೆಡೆಗೆ || ೬೧ ||

ರಕ್ಕಸರು ಮಾಯಾವಿಗಳು ಬಲು |
ದಕ್ಕಡಿಗರಂತವರ ಗೆಲುವೊಡೆ |
ತಕ್ಕರೀಕಪಿಭಟರು ಖುಲ್ಲರ ಮರ್ಮಭೇದವನು ||
ಇಕ್ಕೆಯೆಲ್ಲವನರಿವರಿವರೆಂ |
ದಕ್ಕರಿಂ ಶ್ರೀರಾಮಚಂದ್ರನು |
ಧಿಕ್ಕರಿಸದಲ್ಪಜ್ಞರೆನಿಸಿದ ನಮ್ಮ ಸಲಹುವನು || ೬೨ ||

ಚಿತ್ತವಿಪುದೆಲೆ ತಾಯೆ ಬಿನ್ನಪ |
ಮತ್ತದೊಂದಿಹುದಂದು ನಿಮ್ಮನು |
ಮತ್ತನಹ ರಾವಣನು ಕೊಂಡೊಯ್ವಾಗಳಂಬರದೆ ||
ಉತ್ತಮಾಭರಣಗಳ ಕಳೆದೆ |
ಮ್ಮತ್ತ ಜಾರಿಸಿ ರಾಮನೈತರೆ |
ಬಿತ್ತರಿಪುದೆನ್ನೀಯವಸ್ಥೆಯನವನೊಳೆಂದೆನುತೆ || ೬೩ ||

ಗಿರಿಯ ಶಿಖರದೊಳಿರ್ದ ನಮಗಂ |
ದಿರದೆ ತೋರೆಯಿಟ್ಟುದನು ಚಿತ್ತಕೆ |
ತರುವುದಾ ನಾವಂದು ತಿಳಿದರೆ ನಿಮ್ಮ ಚರಿತವನು ||
ದುಪುಳನನು ಪಿಡಿದೊಡನೆ ಪಿಂಗೈ |
ಮುರಿಯ ಕಟ್ಟಿಯೆ ರಾಮಚಂದ್ರನ |
ಚರಣದಿದಿರೊಳಗಿರಿಸುತಿರ್ದವು ನುಡಿದು ಫಲವೇನು || ೬೪ ||

ಅರಸನ್ನೈಕರಲಾವು ನಿಮ್ಮಯ |
ಮೆರೆವ ತುಡುಗೆಯನೀಯಲೀಕ್ಷಿಸಿ |
ಕುರುಹಿಡುತ್ತಡನಾಗ ನಿಮ್ಮನು ನೆನೆದು ಶೋಕಿಸುತೆ ||
ಕರೆಕರೆದು ಸುಗ್ರೀವನೊಡಲಾ |
ಗಿರುವ ನಮ್ಮೆಲ್ಲರಿಗೆ ತೋರಿಸಿ |
ಪರಿಪರಿಯೊಳುಮ್ಮಳಿಸಲಿತ್ತೆವು ಧೈರ್ಯವನು ವಿಭುಗೆ || ೬೫ ||

ಲೋಕ ಮೆಚ್ಚಲು ನಮ್ಮ ಸೇರ್ದಿಂ |
ದೇಕದೃಢತೆಯಿನಿರ್ದು ಕಾಲವ |
ನೂಕುತಿರ್ಪನುದಾರಗುಣಮಣಿಹಾರ ರಘುವೀರ ||
ಆಕಕುತ್ಸ್ಥಜನಾಜ್ಞೆಯಿಂದೀ |
ನಾಕಜಾರಿಯ ನಗರಿಗೈದಿ ವಿ |
ವೇಕದಿಂ ಶೋಧಿಸುತೆ ಕಂಡೆನು ನಿಮ್ಮ ಪದಯುಗವ || ೬೬ ||

ತಾಯೆ ನೀವಿದನೊಪ್ಪಿ ಕೊಳ್ವುದು |
ರಾಯನಿತ್ತನು ಕುರುಹನಿದ ಮನ |
ದಾಯನವ ಕೆಲಕೊತ್ತಿ ತನ್ನನು ಬೇರೆ ಭಾವಿಸದೆ ||
ಕಾಯಬೇಕೌ ಭೃತ್ಯನೆನ್ನನ |
ಪಾಯವೆನ್ನಿಂದಿಲ್ಲವೆನ್ನುತ |
ಜೇಯಮಾರುತಿಯಿತ್ತನಾಶ್ರೀರಾಮಮುದ್ರಿಕೆಯ || ೬೭ ||

ಕಂಡಳವನಿಜೆ ಕಾಂತನಾಮಾ |
ಖಂಡಸೌಭಾಗ್ಯಾಬ್ಧಿಯೆನಿಸುವ |
ಪುಂಡರೀಕಾಂಬಕನ ಸುರುಚಿರಮುಂಗುಲೀಯಕವ ||
ಚಂಡಭಾಸ್ಕರರಮಿತಕೋಟಿಯು |
ನಂಡಲೆವ ಕಿರಣಗಳ ಪಸರಿಸಿ |
ತಾಂಡವವನಾಡುತ್ತೆ ರಂಜಿಪಮೂಲ್ಯದುಂಗುರವ || ೬೮ ||

ಕೊಂಡು ಕರಗಳೊಳದನು ತವಕದಿ |
ಮಂಡೆಗಿರಿಸಿ ಕಕುತ್ಸ್ಥಕುಲಮಾ |
ರ್ತಾಂಡನನೆ ಕಣ್ಣಾರೆ ಕಂಡಂತಾಗಲಿದಿರಿನಲಿ ||
ತಂಡತಂಡದೆ ಬಾಷ್ಪಜಲ ಮುಂ |
ಕೊಂಡು ದಿಟ್ಟಿಗೆ ಮಂಜನೀವುದ |
ಕಂಡು ಪೀತಾಂಬರದ ಸೆರಗಿಂದದನು ವಾರಿಸುತೆ || ೬೯ ||

ಅರಸ ನೀನಿಂದೇತಕಬಲೆಯು |
ದುರುಳನೆಡೆಯೊಳು ಬಿಸುಟು ತೊಳಲುವೆ |
ತರವೆ ನಿನಗಿದು ನೋಡಿದಾಜನ ನಗದೆ ನಾಚಿಸದೆ ||
ಮೆರೆವ ತೋಳ್ಗಳ ಸತ್ವಮುಡುಗಿತೆ |
ಅರಸಿಯೊಳಗಭಿಮಾನ ಸಡಿಲಿತೆ |
ಧರೆಯೊಳರ್ಕಾನ್ವಯಯಶೋಲತೆಗೊದವಿತೇ ಕೊರತೆ || ೨೦ ||

ನೀರ ನಿನ್ನನು ಕಾಣದಾನಿರ |
ಲಾರೆನೆಂಬುದ ಮನಕೆ ತಾರದೆ |
ಘೋರರಾಕ್ಷಸರೂರೊಳೊರ್ವಳನೆನ್ನನುಳಿದಕಟ ||
ಶೂರಲಕ್ಷ್ಮಣನೊಡನೆ ಘನಕಾಂ |
ತಾರವಾಸದೆ ಸುಖದೊಳಿರ್ಪೆಯ |
ನೀರೆಗೊದವಿದ ಮಾನಹಾನಿಯುದಾರದಿದನುಸಿರ || ೨೧ ||

ದೇವಿಯಿರ್ಪಳು ಜೋಕೆ ಬಳಿಯೊಳು |
ಕಾವಲಿರ್ಪುದೆನುತ್ತೆ ಲಕ್ಷ್ಮಣ |
ದೇವಗಾಣತಿಯಿತ್ತು ನೀಂ ಬೆನ್ನಟಿ ಹರಿಣವನು ||
ಆವನಾಂತರಕತ್ತ ತೆರಳ |
ಲ್ಕಾವಮಾಯೆಯೊ ಕಾಣೆನವನನು |
ಹೇವಳಿಸುತಟ್ಟುತ್ತೆ ರಾವಣನೊಡನೆ ಜಾರಿದಳು || ೨೨ ||

ಸ್ತ್ರೀಯವಲ್ಲದ ವಸ್ತುವವಳ |
ನ್ಯಾಯವೃತ್ತಿಯ ಬಳಸಿ ಕೆಟ್ಟಳು |
ಸಾಯಲವಳೆಂತಾಸುಮೆನ್ನುತ್ತೆನ್ನ ನೀಗಿದೆಯ ||
ರಾಯ ರಾಘವ ನಿನ್ನ ದರುಶನ |
ವಾಯಿಕುಳಿಗಾಶಬರಿಗಂ ಸು |
ಶ್ರೇಯವಿತ್ತುದೆನಲ್ಕೆ ನಿನ್ನನೆ ಸರ್ವಕಾಲದೊಳು || ೨೩ ||

ಕಾಯಮಾನಸಗಳೊಳು ಪೂಜಿಸು |
ವೀಯನಾಥೆಗೆ ಪಾಪಲೇಪನ |
ದಾಯಸವು ಸಮನಿಪುದೆ ನೀನಿದ ಮರೆವುದೇ ಪತಿಯೆ ||
ಹೇಯಮಾದತ್ಯಲ್ಪಮಾರ್ಗದೊ |
ಳೀಯಿಳಾತ್ಮಜೆ ಚರಿಸಬಲ್ಲಳೆ |
ರಾಯ ಮೇಣ್ಕೊಲು ಜೀವಿತೇಶನೆ ನಿನ್ನ ನಂಬಿಹಳು || ೨೪ ||

ಇಂತು ಹಲವಂದದಲಿ ಚಿತ್ತದೆ |
ಚಿಂತೆಗೆಡೆಗೊಟ್ಟವನಿಜಾತ್ಮಜೆ |
ಪಿಂತೆಯೊಡವೆಯನಾರುಮರಿಯದತೆರದೊಳೆಸೆದುದನು ||
ಎಂತು ತಾನಿವನರಿದ ಬಗೆಯಿದ |
ರಂತರವ ಪರಿಕಿಸಲು ನಾಂ ಏಪಿ |
ನಾಂತರದೆ ಕಂಡೈವರೊಳಗಿವನೊರ್ವನೆಂದೆನುತೆ || ೭೫ ||

ನಂಬಿತೆನ್ನಯ ಹೃದಯ ನಿಶ್ಚಯ |
ವಿಂಬುಗೊಂಡುದು ಪವನಸುತ ನೀ |
ನಂಬುಧಿಯ ದಾಂಟಲ್ಕೆ ತಳೆದಾಕೃತಿಯ ತೋರ್ಪುದೆನೆ ||
ಅಂಬರವ ಮುಟ್ಟುವೊಲು ಬಳೆಯು |
ತ್ತಂಬ ನೀಂ ನೋಡೆಂದು ನಿಂದಿರೆ |
ಕುಂಭಿನೀಸುತೆ ಹೆದರಿ ಕಣ್ಗಳ ಮುಚ್ಚಿದಳು ಕರದೆ || ೭೬ ||

ಬೇಡಬೇಡೈ ಹನುಮ ಸಾಕಿದ |
ನೋಡಲಾರೆನು ನಿನ್ನ ಮೊದಲಿನ |
ರೂಢಮಾದಾರೂಪನಾನುತ್ತೆನಗೆ ಸಂತಸವ ||
ನೀಡು ನೀನೆನಲೊಡನೆ ಪೂರ್ವದ |
ರೂಢರೂಪವನಾಂತು ಕೈಗಳ |
ಜೋಡಿಸುತೆ ಪದಕೆರಗಲವನಿಜೆ ಪರಸಿಯೇಳೆಸುತೆ || ೭೭ ||

ಮೆಚ್ಚಿದೆನು ಲೇಸಾಗಿ ನಿನ್ನಯ |
ಸಚ್ಚರಿತಕಾನಿಂದು ಲೋಕದೊ |
ಳಚ್ಚರಿಯ ಸಾಹಸವು ನಿನಗುಂಟೆಂದು ಮತ್ಪತಿಯು ||
ನಚ್ಚುತೀಘನಕಾರ್ಯಕಟ್ಟಿದ |
ನಚ್ಚುಮೆಚ್ಚಿನ ಕಿಂಕರನೆ ನೀಂ |
ನಿಚ್ಚಮುಂ ಜಯವಾಂತು ಮೆರೆಯೆಂದೊರೆದಳಬ್ಜಮುಖಿ || ೭೮ ||

## ಎರಡನೆಯ ಸಂಧಿ ಸಂಪೂರ್ಣಂ.



# ಮೂರನೆಯ ಸಂಧಿ.

ಸೂ || ಮರುತನಣುಗನಶೋಕವನವನು |
ಮುರಿದು ತರಿದಕ್ಷಯಕುಮಾರನ |
ನಿರದೆ ಸಿಲ್ಕಿದನಿಂದ್ರಜಿತ್ತುವಿನಜಮಹಾಶರಕೆ ||

ಕ್ಷೇಮವೇನೈ ಪತಿಗೆ ಪೇಳೈ |
ಪ್ರೇಮಸೋದರಲಕ್ಷ್ಮಣನು ಸು |
ಕ್ಷೇಮಿಯೇ ಸುಗ್ರೀವದೇವನು ಕುಶಲದಿಂದಿಹನೆ ||
ಭಾಮಿನಿಯನರಸೆನ್ನು ತಾಮು |
ತ್ಸ್ವಾಮಿಯೇ ನಿನಗಾಜ್ಞೆಯಿತ್ತನೆ |
ತಾಮರಸದಳನಯನನೇನೆಂದನದನುಸಿರು || ೧ ||

ಕಾಂತನೇನೆನಗಾಗಿ ಸಂತತ |
ಚಿಂತಿಸುತೆ ಕಂಗೆಟ್ಟು ದೇಹದೆ |
ಕಾಂತಿಗುಂದುತೆ ಕೃಷ್ಣಪಕ್ಷದ ವಿಧುವವೋಲ್ಸವೆದು ||
ಸಂತಸವ ಪರಿದಿಕ್ಕಿ ಮಿಹಿರಕು |
ಲಾಂತಕಾರಿಣಿಯೆಂದು ತಿಳಿಯದೆ |
ಭ್ರಾಂತಿಗೆದೆಗೊಟ್ಟೆನ್ನನೇನಕಟೀರಸುವನೆ ಬನದೆ || ೨ ||

ಸುಡುಸುಡೆನ್ನಯ ಬಾಳನಿಂದೆ |
ನ್ನೊಡೆಯನಿಂತಳಲುತ್ತೆ ಬಳಲು |
ತ್ತಡವಿಯಲಿ ತಡಬಡಸಿ ಬೆಂಡಾಗುತ್ತೆ ಬೇಸರಿಸಿ ||
ಎಡಹಿ ಬೀಳುತ್ತಿರ್ಪ ಸಮಯದೊ |
ಳಿಡೆಯೊಳಿರ್ದುಪಚರಿಸುವೃದನುಳಿ |
ದೊಡಲೊಳಸುವನು ಪಿಡಿದು ಜಠರವ ಹೊರೆಯುತಿರ್ಪೆನಲಾ || ೩ ||

ಏನು ಹದನಿನ್ನೆನಗೆ ಮುಂದಿ |
ನ್ನೇನು ಗತ್ಯಂತರವು ನೀನಿ |
ನ್ನೇನುಪಾಯವನೆಂಬೆಯನುಸರಿಸುವೆನು ನಾನದನು ||
ಜ್ಞಾನಿ ನೀನೆಂದರಿಯುತಿವಳತಿ |
ದೀನೆಯಾಗಿಹ ಸೀತೆಯರ್ಥಿಪ |
ಳೇನನೊರೆವೈ ಮುಂದೆ ಬುದ್ಧಿಯನೆಂದಳಿಂದುಮುಖಿ || ೪ ||

ಕೇಳಿದನು ಮಾರುತಿಯು ರಘುಕುಲ |
ಮೌಳಿಯಂಗನೆಯೆಂದ ನುಡಿಯನು |
ಕೋಳುವೋದುದು ಸತಿಯ ಚಿತ್ತವು ತಿದ್ದಬೇಕೆಂದು ||
ಸೋಲಲಾಗದು ತಾಯೆ ಧೃತಿಯನು |
ಮೇಳವಿಸುವುದು ಮನದೆ ದಾನವ |
ಕಾಲಭೈರವನೆನಿಪ ರಾಘವನಿಹನು ಕುಶಲದೊಳು || ೫ ||

ಎಂದುಮಗಲದೆ ರಾಮಚಂದ್ರನ |
ನೊಂದಿ ಸೇವಿಪ ಲಕ್ಷ್ಮಣನು ಸುಖ |
ದಿಂದಮಿರ್ಪನಮಂದಸತ್ವನು ವಾನರೇಶ್ವರನು ||
ಮುಂದಿಮಾರ್ಬಲದೊಡನರೋಗಿಯ |
ದೊಂದುಚಿಂತಾಮಾತ್ರಮಿವದಿರ |
ನಂದಗಿಡಿಸಿಹುದೆತ್ತಲೇನಾಗಿಹರೊ ನೀವೆಂದು || ೬ ||

ಕಾಮಮೋಹಾದಿಗಳ ನೆರೆ ತುಳಿ |
ದಾಮಹಾತ್ಮನು ರಾಮ ನಿಮ್ಮಯ |
ನಾಮವೊಂದನೆ ತಾನು ಪಗಲಿರುಳೆನ್ನದನವರತ ||
ಪ್ರೇಮದಿಂದುಲಿಯುತ್ತೆ ರಿಪು ನಿ |
ರ್ನಾಮನೆಂತಹನೆಂದು ಕಪಿಕುಲ |
ದಾಮಹೋನ್ನತರೊಡನುಪಾಯವ ಚಿಂತಿಸುತ್ತಿಹನು || ೭ ||

ತಾಯೆ ನಿಮಗಿನ್ನೇಕೆ ಚಿಂತೆಯು |
ವಾಯುತನುಜನು ನಿಮ್ಮ ನೆಲೆಯನು |
ರಾಯರಾಘವಗರುಹಿ ಬೇಗದಿನಾತನನೆ ತಹನು ||
ಮಾಯವಪ್ಪರು ದನುಜರೆಲ್ಲರು |
ತೋಯಜಾಕ್ಷನ ಕಣೆಯ ಮೊನೆಯೊಳ |
ಗಾಯತವು ದುಷ್ಕೃತಕೆ ಫಲವಿದು ತಪ್ಪದಾಗುವುದು || ೮ ||

ಎಂದು ಫಲವೇನಿನ್ನು ಭೂಪತಿ |
ಯಂದು ನಿಮ್ಮನು ಕಂಡು ಬಾರೆಂ |
ದೆಂದಕಾಲದೊಳೊಯ್ಯಲಾಜ್ಞೆಯನೀವುದೆನ್ನದೆಯೆ ||
ಮಂದಮತಿಯಿಂ ಬಂದು ನಿಮ್ಮಾ |
ದಂದುಗವ ಕಣ್ಣಾರೆ ಕಂಡಾ |
ನಿಂದು ನಿಮ್ಮನು ಬಿಟ್ಟುಮಿಳ್ಳಿಯೆ ಮರಳಿ ಪೋಪೆನಲಾ || ೯ ||

ಆದುದಾಯಿತು ತಾಯೆ ನಾನಿಂ |
ದಾದಯಾಳುವ ಬೇಡಿ ತಿಳುಹುವೆ |
ನೀದುರಾತ್ಮನ ಪುರದೆ ನೀವಿನ್ನಿಹುದು ಮತವಲ್ಲ ||
ಮೇದಿನೀಸುತೆ ನೀವು ನಿಮಗೆ ವಿ |
ರೋಧವಿನಿತುಮದಿಲ್ಲ ಸುತನೆಂ |
ದಾದರಿಸುತೆನ್ನಿಭುಜಾಗ್ರವನೇರಲೀಕ್ಷಣವೆ || ೧೦ ||

ದೇವರಾಮನ ಬಳಿಯ ಸೇರಿಪೆ |
ನಾವಭೀತಿಯುಮಿಲ್ಲ ಸತ್ಯವು |
ದೇವಿ ಬಿಜಯಂಗೈವುದೆಂದೆನಲದಕೆ ಜಾನಕಿಯು ||
ಕೋವಿದನೆ ನೀನೆಂದ ನುಡಿಗಳು |
ಭಾವಕರ್ಪಿತಮಾದುವಾದೊಡೆ |
ಭೂವಿನುತನಹ ಪತಿಯು ಜಸಕಿಂದೂಣೆಯವ ತಹುವು || || ೧೧ ||

ಹನುಮ ನೀನೆನ್ನಳಲನೀಕ್ಷಿಸಿ |
ಯನಿತಕೀಪರಿ ನುಡಿವುದೇನೈ |
ಮನುಕುಲಾಧಿಪನಂತರಂಗದ ಬೇಗೆಗಿದು ಸಮವೆ ||
ಇನಿಯನಂತಃಕರಣದೊಳಗೇ |
ನೆನಿತುಬಗೆಯಳಲಿರ್ಪುದದರಿಂದಿ |
ರಿನೊಳು ನನ್ನಳಲಿನನ ಮುಂದಿಹ ಮಿನುಗುವುಳುವಲ್ತೆ || ೧೨ ||

ಶೂರನಾಗಿಹ ಪತಿಯು ತನ್ನಯ |
ನಾರಿಯನು ಪರಪುರುಷನೊರ್ವನು |
ಚೋರತನದಿಂದಪಹರಿಸಿ ಕೊಂಡೊಯ್ದೊಡಾಗಿರದೆ ||
ನೀರೆಯನು ಬಿಡಿಸಿದೊಡೆ ಸಾಕಾ |
ವೈರಿಯಿಂದೆನಗೇನೆನುತೆ ನಿ |
ಸ್ಸಾರವಿಕ್ರಮನೆನಿಸುತಾತನ ಸುಳುಹಿ ಸೈರಿಪನೆ || ೧೩ ||

ಖಳನ ಬೆನ್ನಂಟಿಕ್ಕಿ ಬೀಳಿಸಿ |
ಪಳಿದು ಮುಂದಲೆವಿಡಿದು ಖಡ್ಗವ |
ಸೆಳೆದು ಜಳಪಿಸಿ ಕೊರಲಿಗೇರಿಸಿಯರಿದರಿದು ಕುಣಿದು ||
ಬಳಿಯ ಮುಂದಿಗೆ ತೋರಿ ಪೌರುಷ |
ದಳವನಾಕ್ರೋಶವನು ಹಿಂಗಿಸಿ |
ಲಲನೆಯನು ಕೈಕೊಳ್ಳನಲ್ಲದೆ ಬರಿದೆ ಬಿಟ್ಟಪನೆ || ೧೪ ||

ಲೋಕನಾಯಕ ರಾಮಚಂದ್ರಮ |
ನೇಕವೀರನುಮಸಮಧೀರನು |
ಮೇಕಪತ್ನೀವ್ರತನುಮೆನಿಸುತೆ ತನ್ನ ಮಡದಿಯನು ||
ಸೋಕಲೆಳಸಿದ ನೀಚರಾವಣ |
ನಾಕವಾಳ್ವನವಂ ಕೃಣೀಕರಿ |
ಸೇಕಬಾಣದಿನವನ ಕೊಲ್ಲದೆ ತೃಪ್ತನೆಂತಹನು || ೧೫ ||

ಅರಸನಭಿಮತವೇನದೆಂಬುದ |
ನರಿಯದೀಘನಕಾರ್ಯದೊಳು ಮುಂ |
ಬರಿಯಬಾರದು ಸ್ವೈರಿಸಿದೊಡೆ ವಿಶೇಷಫಲವುಂಟು ||
ಅರಿತವಂಗಿದನರುಹವೇಳ್ಕುಮೆ |
ಪರಮಕರುಣಿಯೆ ಬೇಗ ತೆರಳೆ |
ನ್ನರೆಯನೊಡನಾಂ ಪಡುವ ಕಷ್ಟಂಗಳನು ಬಿಡದರುಹು || ೧೬ ||

ಕರೆದುತರೆ ನೀಂ ಪತಿಯನೆನ್ನಯ |
ಸೆರೆಯ ಬಿಡಿಸಿದ ತೆರದೊಳಹುದೆನ |
ಲರಿದನನಿಲಜನೀಕೆ ಸಾಧ್ವೀಮಣಿಗಳಗ್ರಣಿಯು ||
ಕೊರತೆಯಪ್ಪುದು ತನ್ನ ಸೋಂಕಲು |
ಪರಮಪಾತಿವ್ರತ್ಯಗುಣಕೆಂ |
ದೊರೆವಳಿಡು ತಾಂ ಸಾಧುವಹುದಿಂತಾಗಬಹುದೆಂದು || ೧೭ ||

ತಾಯೆ ನಿಮ್ಮಾಜ್ಞೆಯನು ರಾಘವ |
ರಾಯನಾಜ್ಞೆಯಿದಂತೆ ಬಗೆದೀ |
ವಾಯುಜನು ತಪ್ಪದೆಯೆ ಮಾಳ್ಪನು ನುಡಿಯನನೃತವನು ||
ತೋಯಜಾಕ್ಷಿಯೆ ಧೈರ್ಯದಿಂದಿಹು |
ದಾಯಸವ ಮನಕೀಯಲಾಗದ |
ಮೇಯಸತ್ವನ ರಾಮಚಂದ್ರನ ಬೇಗದಿಂ ತಹನು || ೧೮ ||

ಇಂದು ನೀವೆನಗೀವುದಾ ಕುರು |
ಪೊಂದನದರಿಂದಾನು ನಿಮ್ಮನು |
ಬಂದು ನೋಡಿದ ಬಗೆಯ ನಂಬುತೆ ಮನದೆ ರಘುವರನು ||
ಒಂದಿ ತೋಷವನೈದೆ ಮನ್ನಿಸಿ |
ಮುಂಡೆ ಭರದಿಂದೈದಿನಿಮ್ಮಾ |
ಬಂಧನವನಸುರೆ ಬಿಡಿಸಿ ತೋಷವನಿತ್ತಪನು ನಿಮಗೆ || ೧೯ ||

ನೋಡಿ ಕುರುಪನೆನಲ್ಕೆ ಹನುಮನ |
ಗಾಢಭಕ್ತಿಗೆ ಮೆಚ್ಚಿ ಜಾನಕಿ |
ಖೋಡಿಯಿಲ್ಲೆಲೆ ಮಗನೆ ನಿನ್ನಯ ನುಡಿಗೆ ಮೆಚ್ಚಿದೆನು ||
ಬೇಡಿದುದನಿತ್ತಪೆನು ನಿನಗಿದೊ |
ನೋಡೆ ನೀನಿದನೊಡೆಯಗಾತನು |
ನೋಡಿದೊಡನೆಯೆ ನಿನ್ನ ಮೆಚ್ಚುತ್ತೆನ್ನ ನೆನೆಯುವನು || ೨೦ ||

ಕುರುಹನಿದೊ ಕೊಳ್ಳೆಂದು ಸೀರೆಯ |
ಸೆರಗಿನಾತುದಿಗಂಟಸಡಲಿಸಿ |
ಮೆರೆವ ಚೂಡಾಮಣಿಯ ರತ್ನಾಗ್ರಣಿಯ ಬಹುಘೃಣಿಯ ||
ಹೊರಗೆ ತೆಗದಿದನೊಲಿದು ನನ್ನಯ |
ಪರಿಣಯೋತ್ಸವದಲ್ಲಿ ತಾತನು |
ಪರಸಿಯುಂದೆನಗಿತ್ತನೊಯ್ದಿದನೀವುದರಸಂಗೆ || ೨೧ ||

ಪಿಂತೆ ಮಂದಾಕಿನಿಯ ತಡಿಯೊಳ |
ಗಂತರಂಗದೊಳಿರ್ಪ ಸಮಯದೊ |
ಳಂತರಾತ್ಮಕನೆನ್ನ ತೊಡೆಯನೆ ನೆಮ್ಮಿ ಮಲಗಿರಲು ||
ಅಂತಕನ ಸತಿಗಳಿಪಿದಂಗೇ |
ನಂತವಿಲ್ಲದೆ ಬದುಕದೆಲ್ಲೆಂ |
ಬಂತೆ ಕಾಕಾಸುರನು ನನ್ನನು ಕೆಣಕಲಂದಿರದೆ || ೨೨ ||

ಅರಸನಧಿಕಕ್ರೋಧವಾನುತೆ |
ಭರದೊಳಲ್ಲಿರ್ದೊಂದು ದರ್ಭೆಯ |
ನುರುವಿರಂಚಾಸ್ತ್ರವನು ಗೈದಸನೆಸೆಯಲವನೋಡಿ ||
ಮೆರೆವ ಮೂಜಗಗಳನು ಸುತ್ತು |
ತ್ತಿರದೆ ಕೊನೆಯೊಳು ಶರಣನೊಂದ |
ಲ್ಕರುಣದಿಂದುಳುಹಿದನು ಮರೆಯದೆ ಪೇಳು ನೀನದನು || ೨೩ ||

ಎಂದು ನೀಡಲು ಕೊಂಡು ಹನುಮನು |
ಮುಂದೆ ತಾನಿನ್ನೊಂದನರ್ಥಿಪೆ |
ನಿಂದು ತನ್ನನು ಪಸಿವು ಮಿಗೆ ಬಾಧಿಸುವುದೀವನದೆ ||
ಚಂದದಿಂ ಜೋಲ್ದಿಸೆವ ಪಣ್ಗಳೊ |
ಳೊಂದೆಂದನಾಂ ಸವಿಯಲಾಜ್ಞೆಯ |
ನೊಂದಪೇಕೆಂದಿಸೆನು ಕರುಣಿಸಿ ತಾಯೆ ನೀವೆನಲು || ೨೪ ||

ಶಿವಶಿವೇನೀವ್ರತವು ತಕ್ಕುದೊ |
ಹವಣೆಸಿರಲುತ್ಕಟದ ಕಾರ್ಯವು |
ಭುವನದೊಳಗಿನ್ನುಂಟೆ ಭಕ್ತರು ನಿನ್ನವಂದಿಗರು ||
ಪವನಜನೆ ನೀನಿನ್ನು ತಡೆಯದೆ |
ಸವಿದು ಹಣ್ಗಳನೊಂದಿ ತೃಪ್ತಿಯು |
ನವನಿಪನ ಬಳಿಗೈದಿ ಬೇಗದಿನವನ ಕರೆತಹುದು || ೨೫ ||

ನಿನಗೆ ಮಾರ್ಗದೊಳಕ್ಕೆ ಶುಭಗಳು |
ವಿನುತಗುಣ ನೀಂ ಪೋಗಿ ಬಹುದೆಂ |
ದಿನಕುಲೇಂದ್ರನ ರಾಣಿ ಬೆಸಸಲು ಭಕ್ತಿಯಿಂದೆರಗಿ ||
ವನವ ಪೊಕ್ಕಲ್ಲಿರ್ಪ ಪರಿಪರಿ |
ಯಿನಿದುಪಣ್ಗಳಸಕ್ತಿಯಿಂ ಕೊಂ |
ಡೆಣೆಯುರಂ ಭುಂಜಿಸುತೆ ತರುಗಳ ನೆಳಲ ಬಳಿಸಾರ್ದು || ೨೬ ||

ಮನದೊಳಾಲೋಚಿಸಿದನೆಂದಾ |
ನಿನಿತು ದೂರಕೆ ಕಷ್ಟದಿಂ ಬಂ |
ದನಿಮಿಷಾರಿಗಳಾರು ಮೇಣವರದಟದೆಂತಿಹುದು ||
ಎನಿಪುದನು ತಿಳಿಯದೆಯೆ ಪೋಪುದು |
ತನಗಯುಕ್ತವಿದದರಿನೀಗಳೆ |
ಕೆಣಕಿ ಕಲಹಕ್ಕವರನೆಳೆದಪೆನೆನ್ನುತನಿಲಜನು || ೨೭ ||

ರಕ್ಕಸರು ತಾಂ ಮಿಕ್ಕುಪಾಯಕೆ |
ದಕ್ಕರಿವರಿಗೆ ಕೊನೆಯುಪಾಯವೆ |
ತಕ್ಕುದದರಿಂದೀಗಳೀವುದ್ಯಾನವನು ಮುರಿಯೆ ||
ಉಕ್ಕುವಾಕೋಪದೊಳು ರಾವಣ |
ನೆಕ್ಕತುಳರೆನಿಪವರ ಕಳುಪುವ |
ನೊಕ್ಕಲಿಕ್ಕಲ್ಕವರನೊಡನೆಯೆ ರಥಿಕರೈತಹರು || ೨೮ ||

ಅಂದು ತಾನವರಿಂದೆ ಗಾಯವ |
ನೊಂದಿ ಮೈಮರೆದಂತೆ ಮಲಗಿರೆ |
ಬಂಧಿಸಿಯೆ ಕೊಂಡೊಯ್ವರೆನ್ನನು ರಾವಣನ ಬಳಿಗೆ ||
ಸಂದು ಸಿಕ್ಕುವುದೆನಗೆ ನಾಂ ಬಗೆ |
ಬಂದ ತೆರದೊಳಗವರ ಶಕ್ತಿಯ |
ನಂದ ಮಿಗಲರಿಯುವೆನು ಬಳಿಕಮೆನುತ್ತೆ ಬಿಡದೆಳ್ದು || ೨೯ ||

ಸುರಕುಜಗಳ್ಕೈದಿಹುವು ಸುರಪನ |
ಮೆರೆವ ನಂದನವನದೆ ದನುಜೇ |
ಶ್ವರನ ವನದೊಳಗಿಹುವು ಸಾಸಿರಕುಜಗಳಂತಹುವು ||
ಅರರೆ ಭಾಪುರೆ ಭಾಪು ದಶಕಂ |
ಧರನೆ ನಿನ್ನಯ ಸಿರಿಗೆ ಸರಿಯದ |
ನರಿಯೆನೆಂದಾರಾಮಚರಣವ ಭಜಿಸುತಾರ್ಭಟಿಸಿ || ೩೦ ||

ತರುಗಳನು ಕೀಳುತ್ತೆ ಬುಡದೊಡ |
ನುರುಳಿಸುತ್ತಪ್ಪಳಿಸಿ ನೆಲದೊಳು |
ನಠನರೆನ್ನಲು ರೆಂಬೆಗಳ ಮುರಿಮುರಿಯುತೆಸೆಯುತ್ತೆ ||
ಮೆರೆವ ಶೃಂಗಾರಾಲಯಂಗಳ |
ನಿರದೆ ಪತ್ತುತೆ ಬಲಿದ ಮುಷ್ಟಿಯಿ |
ನೆರಗಿ ಕೆಡಹುತೆ ಚರಣದಿಂ ತುಳಿತುಳಿದು ಪುಡಿಗೈದು || ೩೧ ||

ಆಲಿದನು ಸುಮ್ಮಾನದೊಳು ದಶ |
ಮೌಳಿ ನಿನ್ನಯ ನಂದನವ ಕೇ |
ಡಾಳಿ ಹನುಮನು ರಾಮದೂತನು ಪಾಳುಗೈದಪನು ||
ಕೊಳುವೋಗದ ಮುನ್ನ ಬಲುಗೈ |
ಯಾಳುಗಳ ನಿಂದಟ್ಟಿ ರಕ್ಕಸು |
ವೇಳೆ ಮುಂಚಿದ ಬಳಿಕ ಕಳುಹಲ್ಫಲವದೇನೆನುತೆ || ೩೨ ||

ಹಾವಳಿಯನಿದ ಕಂಡು ಬೆವರುತೆ |
ಕಾವಲಿರ್ದವರಕಟ ತಮಗಿ |
ನ್ನಾವಗತಿಯೆಂದೆನುತೆ ಪೇಳ್ದರು ಕಾಲ್ಗೆ ಬುದ್ಧಿಯನು ||
ರಾವಣೇಶ್ವರನೋಲಗಕೆ ಬಂ |
ದಾವಶೋಕಾರಾಮಪಾಲಕ |
ರೋವುದೆಮ್ಮನು ಕೃಪೆಯಿನೆಂದಡಗೆಡೆದರಿದಿರಿನಲಿ || ೩೩ ||

ವಿಗಡಕಪಿಯೊಂದೈದಿ ನಮ್ಮನು |
ಬಗೆಗೆ ತಾರದೆ ರೋಷವಾನು |
ತ್ತಗರುಚಂದನಕಲ್ಪತರುಗಳನೆಲ್ಲ ಮುರಿದೊತ್ತಿ ||
ಜಗವ ನುಂಗುವ ಕಾಲರುದ್ರನ |
ನಗುವ ರೂಪಿಂದೆಸೆವುದಿದರಿಂ |
ದಗಲಿತೈಸಿರಿ ನಿನ್ನ ಮೆಚ್ಚಿನಶೋಕವನದೆಡೆಯ || ೩೪ ||

ರಾಮದೂತನು ತಾನು ಹನುಮ |
ನ್ನಾಮವಿದಿತನು ವನವ ಮುರಿಯ |
ಲ್ಕೇಮವಾಂತಾನಿಲ್ಲಿಗೈದಿಹೆನೆಂದು ಕೂಗುವುದು ||
ಸ್ವಾಮಿಯಿಂತಹ ಕಪಿಯ ಕಾಣೆವು |
ಭೀಮವಿಕ್ರಮವಾಂತು ಮೆರೆವುದು |
ಪಾಮರರು ಕಂಡನಿತನರಿಪಿದೆನೆಂದರವರಂದು || ೩೫ ||

ಮಾತು ಹಿಂಚಿತ್ತಸುರಭಟತತಿ |
ಯಾತುಕೊಂಡೆಂಬತ್ತು ಸಾಸಿರ |
ವೇತಕೆಮ್ಮನು ಬರಿಸಿದೈ ಜೀಯತಾಜ್ಞೆಯೀವುದೆನೆ ||
ಕೌತುಕದ ಕಪಿಯೈದಿತುಪವನ |
ಕೇತ್ರರದೊಳಂ ಬಿಡದೆ ಬಂಧಿಸಿ |
ಘಾತಿಸದೆ ತಹುದೆನ್ನ ತಾಣತಿಯಿತ್ತ ದನುಜಪತಿ || ೩೬ ||

ನಾನು ತಾನೆಂದೆನುತೆ ದನುಜರ |
ಸೇನೆ ಜವದಿಂ ವಿವಿಧಶಸ್ತ್ರವಿ |
ತಾನವನು ಕೈಕೊಂಡಶೋಕವನಕ್ಕೆ ತೆರಳಿದುದು ||
ಏನಮಾಡಲು ಬಲ್ಲರೆನ್ನನು |
ಹೀನಬಲರಿವರೊಳ್ಳಿತಾಗಲಿ |
ಮೌನವನು ನಟಿಸುತ್ತುಮಿರ್ದನೆನುತ್ತೆ ಮಾರುತಿಯು || ೩೭ ||

ಎವೆಯ ಮಿಡುಕದೆ ಸುಮ್ಮನಿರ್ಪುದ |
ನವರು ಕಂಡರು ಕಾಹಿನವರೀ |
ಶವಕೆ ಭಯಪಟ್ಟೋಡಿದರೆ ತಾವಹಟೆ ಬಲ್ಲಿದರು ||
ಹವಣಿಸುವುದೇನಿದಕೆ ಬೇಗದೊ |
ಳವಚಿ ಕೊರಲನು ಬಿಗಿದು ಪಿಡಿದೀ |
ಗಿವನನೊಪ್ಪಿಪೆವೆಮ್ಮ ದಣಿಗೆಂದೊಡನೆ ಬಳಸಿದರು || ೩೮ ||

ಧರಣಿಜಾದೇವಿಯ ಹಸಾದವ |
ನಿರದೆ ರಾವಣ ಬಯಸಿ ಹರಕೆಯ |
ಕುರಿಗಳೆನಿಸಿದ ನಿಮ್ಮನಿಂದಟ್ಟಿದನು ಬಲಿಗೆಂದು ||
ದೊರೆವುದೈ ನಿಮಗೀಗಳೇ ಸುರ |
ಪುರದ ಸೌಖ್ಯವು ನಿಮ್ಮ ದಶಕಂ |
ಧರನಿಗಾಬಳಿಕಹುದು ನೀವೆ ಮೇಲುಗೈಯೆನುತೆ || ೩೯ ||

ಮುರಿದು ಮೆಯ್ಯನು ಕೆರೆಯುತೊಡಲನು |
ಕಿರಿದು ಪಲ್ಗಳ ಗುರ್ರುಗುರ್ರೆಂ |
ದಿರದೆ ಪುಟನೆಗೆದೆದ್ದು ಹೊಯ್ದನು ಕೆಲಬಲನು ಕರದೆ ||
ಮರವನೊಂದನು ಕೊಂಡು ಬಿಕ್ಕರ |
ನಿರಿಯೆ ಮಾರುತಿಯವರು ಬೆದರು |
ತ್ತಿರದೆ ಕಪಿ ಸಾಮಾನ್ಯವಲ್ಲೆಂದಾಗಳೊಗ್ಗುಡಿಸಿ || ೪೦ ||

ಮೆರೆವ ನಿಖಿಲಾಯುಧಗಳಿಂದುರೆ |
ಬೆರಸಿ ಹೊಯ್ದೊಡೆ ನಗುತೆ ಪವನಜ |
ನೆರಗಿ ಬಂಡೆಗಳಿಂದಮವರನು ಜೊಟ್ಟುಗುಟ್ಟುತ್ತೆ ||
ದುರುಳರಿರ ನಿಮ್ಮಲ್ಲಿ ಕೇರನು |
ಕರುಣದಿಂದುಳುಹಿದೆನು ನೀವಿ |
ಲ್ಲರದೆ ಭರದಿಂ ಪೋಗಿ ದೂರುವುದಸುರಪತಿಗಿದನು || ೪೧ ||

ಎನುತೆಯಾಡಿದಮಾತು ಹಿಂಚಿತು |
ದನುಜಪತಿಗೀವಾರ್ತೆ ಮುಂಚಿತು |
ಕನಲಿಯೊಡನೆಯೆ ಜಂಬುಮಾಲಿಯನಟ್ಟೆ ರಣಕವನು ||
ಅನಲಕಣಗಳನುಗುಳ್ವ* ಕಣೆಗಳ |
ನನಿಲಜನ ಮೇಲೆಚ್ಚೊಡಾತನು |
ಮನಕೆ ತಾರದೆ ಕರದಿನವನಡಗಟ್ಟೆ ಹೊರೆಸೂಂಕಿ || ೪೨ ||

ಅಲಿ ಕಿತ್ತಾವನದಬಾಗಿಲ |
ಆಳಿಮುಂಡಿಗೆಯಡನು ತಿರುಗಿಸಿ |
ತೋಳುಕಾಲಿದೆಗಳನು ಗುರಿಗೈದಪ್ಪಳಿಸಲಾಗ ||
ಬಾಳದಕ್ಕರ ಮಸುಳಿತಸುರನು |
ಕಾಲನೂರಿಗೆ ಪಯಣಗೋಡನು |
ಕೇಳಿದನು ರಾವಣನು ತನ್ನಯ ಮಂತ್ರಿಸುತನಳಿವ || ೪೩ ||

ತಾಳಿ ರೌದ್ರಾವೇಶವನು ರಿಪು |
ಶೂಲಿಯೆನಿಪಕ್ಷಯಕುಮಾರಂ |
ಗೂಳಿಗಂಗುಡಲವನು ಜೀಯೆಂದೆರಗಿ ಪಿತಸಡಿಗೆ ||
ಲೀಲೆ ಮಿಗಿಲೆನೆ ತೆರಳಿತಾಂಲಯ |
ಕಾಲಯಮನವೊಲೆಸೆವ ಭಟವರ |
ಮೌಳಿಹನುಮನ ಕಂಡು ಬೆಚ್ಚುತೆ ಮಂಗನಲ್ಲೆಂದು || ೪೪ ||

ಘಡಘಡೆಲೊ ನೀನಿಂದು ರಕ್ಕಸ |
ಪಡೆಯು ಪಾರಣೆಗೆಂದು ನಡೆತಂ |
ದಡವಳನ ಕೈಗಿಂತು ಸಿಲ್ಕದೆ ಬರಿದೆ ತಡಗೈದೆ ||
ತೊಡೆದುದಲೆ ನಿನ್ನಾಯುವೀದಿನ |
ಬಿಡಿಸಿಕೊಳ್ವವರಾರೊ ಕಾಣೆನು |
ಕಡಿದು ನಿನ್ನನು ತನ್ನ ಬಾಣಸದೆಡೆಗೆ ಕಳುಹುವೆನು || ೪೫ ||

ಕೀಶಮಾಂಸವ ಸವಿಯಬೇಕೆಂ |
ಬಾಶೆಗೇರಿಪೆನೀಗ ಕಲಶವ |
ನೀಶಠೌಘವೆ ದೂತನೊಯ್ವುದು ನಿನ್ನನಡುವನೆಗೆ ||
ಲೇಶವುಂ ಪುಸಿಯಿಲ್ಲವೆಂದಾ |
ಕ್ರೋಶದಿಂದಂಬುಗಳನೆಚ್ಚೊಡೆ |
ಕೇಶಗಳ್ಕಿಲವುದಿರೆ ಮಾರುತಿ ರೋಷವನು ನಟಿಸಿ || ೪೬ ||

ಎರಗಿದನು ಮಣಿರಥಕೆ ಕಟ್ಟಿದ |
ತುರಗದೊಡನದು ಕೆಡೆಯಲವನಿಯೊ |
ಳರರೆ ಕಪಿ ಸಾಮಾನ್ಯವಲ್ಲೆಂದಸುರಪತಿಸೂನು ||
ಇರದಡರ್ದನು ನಭವನಲ್ಲಿಂ |
ಸುರಿಸಿದನು ಕಣೆವಳೆಯನನಿಲಜ |
ನರಿಯಲೇನಸಮರ್ಥನೇ ಬಿಡದೇರ್ದನಂಬರವ || ೪೭ ||

ಅತುಲಬಲಯುತನಾಂಜನೇಯಂ |
ಗತಿಶಯವೆ ರಿಪುವಿಜಯವಸುರನ |
ಗತಿಯು ಬಣ್ಣಿಪರಾರು ಬಿಳ್ದನು ಭೂಮಿಗಸುವಳಿದು ||
ಜತೆಯೊಳಿರ್ದವರಿದನು ತಾಂಕೆಂ |
ಡತಿಜವದೊಳೋಡಿದರು ನಿಶಿಚರ |
ಪತಿಗೆ ನಿಮ್ಮಯ ಕುವರನಳಿದನೆನುತ್ತೆ ತಿಳಿಪಿದರು || ೪೮ ||

ಅದ್ದಿದನು ದುಃಖಾಂಬುನಿಧಿಯಲಿ |
ಬಿದ್ದು ಹೊರಳಿದನಿಳೆಯು ಮೇಲೊಡ |
ನೆದ್ದು ಪುತ್ರನ ನೆನೆದು ಮಿಗೆ ಹಮ್ಮೈಸಿಯಸುರೇಂದ್ರ ||
ಕ್ರುದ್ಧನಾಗುತೆ ತನ್ನ ಬೆಸಸಂ |
ಶ್ರದ್ಧೆಯಿಂ ಕೈಕೊಂಡು ನಡೆಯಿಪ |
ಮುದ್ದಿನಣುಗಂಗಿಂದ್ರಜಿತ್ತುವಿಗೆಂದನೀಹದನ || ೪೯ ||

ತಿಳಿಯಲಸದಳವಾಗಿ ತೋರ್ಪೀ |
ಪ್ರಳಯಕೇಂಕಾರಣವೊ ಬಗೆಯಲ್ |
ಕಳೆದುಪೋಪಂತಿಹುದು ರಾಕ್ಷಸಕುಲದ ಪೇರದಟು ||
ಬಲುಹಿನಿಂದದನುಳುಹಿ ನೆಲೆಗೊಳಿ |
ಪಳವು ನಿನಗಿಂದಲ್ಲದಾರಿಗು |
ಮಿಳೆಯೊಳಸದಳಮದರಿನೈದುವದೀಗ ಬನದೆಡೆಗೆ || || ೫೦ ||

ಕೋತಿಯದು ನಾಡಾಡಿಯಲ್ತೆ ವಿ |
ಜಾತಿಯಾಗಿರ್ಪಂತೆ ತೋರ್ಪುದು |
ಭೀತಿಗೆಡೆಗುಡದೆಚ್ಚರಿಕೆಯಿಂ ತೊಡಗು ಕಾಳೆಗವ ||
ಖ್ಯಾತಿಯಾಂತಮರರ್ಕಳನು ಪುರು |
ಹೂತಸಹಿತರಸಟ್ಟಿ ಜಯಿಸಿದ |
ರಾತಿಭೀಕರನೆಂದು ಮೈಮರೆದಿರದೆ ಕಾದುವುದು || ೫೧ ||

ಪೋಗು ಜಯಸಿರಿಗೊಡೆಯನಾಗೆಂ |
ದಾಗಳಾಶೀರ್ವದಿಸಿ ಕಳುಪ |
ಲ್ಬೇಗವೇರ್ದನು ರಥವ ಪಾಂಡ್ಬುಳಕಾಗ ಕೈವೀಸಿ ||
ಆಗಲೆಡಳ್ಳಿಕು ಕಪಿಯು ಸತ್ರೋ |
ದ್ಯೋಗವನು ತನ್ನಲ್ಲಿ ತೋರಲಿ |
ಸಾಗಲಟ್ಟುವೆನಂತಕನ ಬಳಿಗೆಂದು ಗರ್ಜಿಸುತೆ || ೫೨ ||

ಎತ್ತಲಿಹುದಾಕಪಿಯು ಬೇಗದೊ |
ಳತ್ತ ಹರಿಸೈ ರಥವನೆನ್ನು |
ತ್ತೊತ್ತಿ ಸಾರಥಿಗಿರದೆ ಬೆಸನಿತ್ತಲ್ಲಿಗಿರದೈದಿ ||
ಇತ್ತಲಿತ್ತಲು ನಿನಗೆ ಮಿತ್ತುವು |
ಹತ್ತಿರೈದಿಕು ತಿಮ್ಮ ನೀನಿ |
ನ್ನೆತ್ತಲಡಗುವೆಯೆನ್ನುತಂಬುಗಳಿಂದೆ ಬಿಡದಿಸಲು || ೫೩ ||

ನೋಡಿದನು ಮಾರುತಿಯು ತಾನೀ |
ಗಾಡಿಗಮಕದ ಪೀರನಾರೆಂ |
ದೌಡುಗಚ್ಚುತ್ತುಗ್ರಕೋಪಾಟೋಪಮಯನಾಗಿ ||
ಕೂಡೆ ಬಳೆಯುತ್ತಂಬರಂಬರ |
ವಾಡತೊಡಗಿದನವನ ಕಣೆಗಳೊ |
ಳಾಡಲೇನಿರವೀಂದ್ರಜಿತ್ತದ ಕಂಡು ಬೆರಗಾಗಿ || ೫೪ ||

ಅಮವು ಸಾಹಸಿಯೆಹುದು ತಪ್ಪ |
ಲ್ಲಮಿತಬಲವೀವಾನರಂಗಿಹು |
ದಮರರೊಳಗಂ ಕಂಡುಕೇಳಿದುದಿಲ್ಲವಿನ್ನಿತದಟ ||
ಕ್ರಮದೆ ಕಪಿಯಿಡನಖಿಲಭೀಕರ |
ವಿಮಲಸುಬ್ರಹ್ಮಾಸ್ತ್ರದಿಂ ಬಿಗಿ |
ದಮರ್ದಬಂಧನವೆರಸು ಜನಕಂಗೊಪ್ಪಿಸುವೆನೆನುತೆ || ೫೫ ||

ಚಳಕದೊಳು ತೂಣೀರದಿಂದದ |
ನೆಳೆದು ನೆರೆಯಭಿಮಂತ್ರಿಸಿಯೆ ಬಿಡೆ |
ಪಳಿವನೊಂದಿಸಲಾಗದಜಗಿತ್ತಿಹೆನು ಭಾಷೆಯನು ||
ಸಿಲುಕುವೆನು ಮೂಗಳಿಗೆಯನ್ನೆಗ |
ಮಲುಗೆನಾದುದರಿಂದಮಿದಕಿಂ |
ದಳುಕದೊಡನಾಂ ಸೋಲ್ವುದುಚಿತವೆನುತ್ತೆ ಪವನಜನು || ೫೬ ||

ನೆಲದೊಳೊರಗಿರೆ ಕಂಡು ದನುಜನು |
ಭಳಿರೆ ಬಿಳ್ದುದು ಕೋತಿ ರಜ್ಜುವ |
ನೆಳವಡಿಸಿ ಬಿಗಿವುದೆನುತಾಜ್ಞೆಯನೀಯಲಸುರರ್ಗೆ ||
ಬಳಿಗೆ ಬಂದರು ಮುಟ್ಟಲಂಜಿದ |
ರಳವುಗೆಟ್ಟರು ರಾಜನಾಜ್ಞೆಯ |
ಬಲುಹನೆನೆದರು ಬಳಿಕ ಕಟ್ಟಿದರೇತೊ ಕಷ್ಟದಲಿ || ೫೭ ||

ಸುಮ್ಮನಿರಲಾಹನುಮನಲುಗದೆ |
ಕೆಮ್ಮದರು ಕೇಕರಿಸಿದರು ಬಲು |
ಹೆಮ್ಮೆವಾತುಗಳೆತ್ತಲಡಗಿದುವೆಂದು ಮೂದಲಿಸಿ ||
ಹಮ್ಮುಮೆರೆಯದು ರಕ್ಕಸರ್ಕಳೊ |
ಳೆಮ್ಮನಾರೆಂದರಿದೆ ಬಾಬಾ |
ತಿಮ್ಮ ಬಾರೆಂದೆಳೆದು ತಂದರು ದನುಜಪತಿಯೆಡೆಗೆ || ೫೮ ||

ಮೂರನೆಯ ಸಂಧಿ ಸಂಪೂರ್ಣಂ.



# ನಾಲ್ಕನೆಯ ಸಂಧಿ.

ಸೂ || ಬಾಲಕಿಕ್ಕಿದಬೆಂಕಿಯಿಂ ಲಯ |
ಕಾಲನೆನೆ ಲಂಕೆಯನು ಬೇಯಿಸಿ |
ಯಾಲಿ ಕಡಲನು ಮರಳಿ ದಾಂಟಿದನನಿಲನಂದನನು ||

ಬಂದನೊಡನಿರದಿಂದ್ರಜಿತ್ತುವು |
ತಂದೆಯಡಿಗಳಿಗೆರಗಿ ತಂದೆಯೆ |
ತಂದೆನಿದೊ ನಾಂ ಕಪಿಯನೊಪ್ಪಿಸಿಕೊಳ್ಳುದಿಂದೆನಲು ||
ಬಂಧನಕ್ಕೊಳಗಾಗಿ ಮುಂಗಡೆ |
ನಿಂದು ತನ್ನನೆ ನಿಟ್ಟಿಸುತ್ತಿಹ |
ಕುಂಧುವಡೆಯದ ಕಪಿಯ ನೋಡಿದನಾಗ ರಾವಣನು || ೧ ||

ಈತ ನೋಡಲಭೀತ ಸತ್ವೋ |
ಪೇತನೆಮ್ಮವರೀತನನು ದಿಟ |
ಕೋತಿಯೆಂದೇ ಬಗೆದು ಕೆಟ್ಟರು ಮೊದಲು ಚಿಂತಿಸದೆ ||
ರೀತಿಗಳನೀಕ್ಷಿಸಲು ವಾನರ |
ಜಾತಿಗೊಪ್ಪುವ ನಡೆಗಳಿಲ್ಲವು |
ಮಾತನಾಡಿಸಲರಿಯಬಹುದೆಂದಾಪ್ರಹಸ್ತನನು || ೨ ||

ಕರೆದು ದನುಜಾಧಿಪನು ಬೆಸಸ |
ಲ್ಕೆರಗಿ ಜೀಯೆನುತೆದ್ದು ಮಂತ್ರೀ |
ಶ್ವರನು ವಿನಯದಿನವನ ನುಡಿಸಿದನಾರೆಲೈ ನೀನು ||
ಬರವದೆಂತಾಯ್ತಿಲ್ಲಿಗಾರನು |
ಚರನು ನೀನಿಂದೆಮ್ಮ ವನವನು |
ಮುರಿದ ಕಾರಣವೇನು ವಿಸ್ತರದಿಂದಮೊರೆಯೆಂದು || ೩ ||

ಕೇಳಿದನು ಪವನಜನು ಸಚಿವನು |
ಪೇಳಿದುದನೆಲ್ಲವನು ದಾನವ |
ಮೌಳಿಯತ್ತಲು ತಿರುಗಿಯಿಾಪರಿಯೆಂದನವನೊಡನೆ ||
ಆಲಿಸೈ ದನುಜೇಂದ್ರ ದುಷ್ಟ |
ವ್ಯಾಳಗಾರುಡಮಣಿಯು ರಾಘವ |
ನಾಳುಗಳಿಗವನಿಜೆಯ ನೆಲೆಯರಿಯಲ್ಕೆ ಬೆಸಸೀಯೆ || ೪ ||

ಪಾವನಾತ್ಮಕನಾಜ್ಞೆಯನು ಸಂ |
ಭಾವಿಸುತೆ ನಲವಿಂದೆ ರವಿಸುತ |
ನೇಮವೀಯಲನಂತಕಪಿಕುಲದಗ್ರಗಣ್ಯರಿಗೆ ||
ಭೂವಲಯದೊಳಗಿರ್ಪ ಪಲವುಂ |
ಠಾವುಗಳೊಳವರರಸುತಿರ್ಪರು |
ಪಾವಮಾನಿಯು ತಾನುಮಾವುದ್ದೇಶದಿಂದೀಗ || ೫ ||

ಬಂದೆನಿಲ್ಲಿಗಶೋಕವನದೊಳ |
ಗಿಂದುಮುಖಿಯಸುರಿಯರ ಮಧ್ಯದೆ |
ಕಂದಿ ಕುಂದಿರ್ಪುದನು ಕಂಡಿತ್ತಾಕೆಗಭಯವನು ||
ಹಂದೆ ರಕ್ಕಸನಾವನೀಯರ |
ವಿಂದಲೋಚನೆಗಿಂತು ಕಷ್ಟವ |
ತಂದನೋ ತಾನವನ ನೋಡಲೆಬೇಕು ನಾನೆಂದು || ೬ ||

ಮುರಿದೆನಾರಾಮವನು ನಿನ್ನವ |
ರಿರದೆ ಕೈಮಾಡಲ್ಕೆ ಸವರಿದೆ |
ನರಿಯಲೇನಪರಾಧವೆನ್ನೊಳಗೊರೆಯು ನೀನದನು ||
ಸುರಪಜಿತ್ತೆಚ್ಚ ಜಶರವ ಧಿ |
ಕ್ಕರಿಸದಂಗೀಕರಿಸಿ ನಿನ್ನ ಯ |
ವರೆಗೆ ಬಂದೆನು ಕಂಡೆನೊಂದಿದೆನಿಷ್ಟವನು ಮನದ || ೭ ||

ನನ್ನ ಕಾರ್ಯವದೆಲ್ಲ ಮುಗಿಯಿ |
ತ್ತಿನ್ನು ಮರಳುವೆನರಸನಲ್ಲಿಗೆ |
ಸನ್ನುತಾಂಗಂಗಿಲ್ಲಿ ನಡೆದುದನರಿಕೆಮಾಡುವೆನು ||
ನಿನ್ನ ಮತವೇನುಸಿರು ನೀನೇಂ |
ಮುನ್ನಿನಂದದೆ ಹಟವ ಸಾಧಿಪೆ |
ನೆನ್ನು ವಾತನೊ ಮೇಣು ಶರಣಾಗತನೊ ರಾಮಂಗೆ || ೮ ||

ಮಾಡಬಾರದ ಕೃತ್ಯವೆಸಗಿದ |
ಕೇಡುಗನು ಕಾಕಾಸುರನು ಕೈ |
ಜೋಡಿಸುತೆ ಶರಣೆಂದಮಾತ್ರಕೆ ಮನ್ನಿಸಿದನರಸ ||
ಖೋಡಿಯುಳಿದವನಂತೆ ಶರಣವ |
ಬೇಡಿ ಧರಣೀತನುಜೆಯನು ನೀಂ |
ದೂಢಿಮೆಚ್ಚುವ ತೆರದೊಳಿತ್ತೊಡೆ ಕಾವನಾಕರುಣಿ || ೯ ||

ರಾಮನಾರೆಂದರಿವೆ ಸಾಕ್ಷಾ |
ನ್ಮಾಮನೋಹರನಾತನೊಲವಿಗ |
ನೇ ಮಹಾಕೃತಿಯಾತನೊಬ್ಬವಿಲ್ಲದನೆ ತಾನಕೃತಿ ||
ನೇಮದಿಂ ಶ್ರುತಿಯರಿತವನು ವೇಣ್ |
ಸಾಮವೇದವಿಶಾರದನು ನೀಂ |
ಭೂಮಿಯೊಳು ಜಸವಾಂತ ನಿನಗಿಂತೇಕೆ ದುರ್ಬುದ್ಧಿ || ೧೦ ||

ವಾಲಿಯಾ ತೋಳ್ಗಳಲಿ ಸಿಲ್ಕು |
ಯ್ಯಾಲೆಯಾಡಿದೆ ನೀನು ರಾಮನು |
ಲೀಲೆಯಿಂದಮೆ ಕೊಂದನವನನು ಕೇಳ್ವು ನೀನರಿಯ ||
ಶೂಲಿಮೆಚ್ಚಲು ತಪವನೊಡರಿಸಿ |
ಕಾಲಪಾಶಕೆ ಸಿಲುಕದಂದದ |
ಮೇಲುವರಗಳ ಪಡೆದಗರ್ವವು ನಾಡೆ ಪಾಳಹುದು || ೧೧ ||

ಸುರರ ದನುಜಾದಿಗಳ ದೆಸೆಯಿಂ |
ಹರಣವಳಿಯದ ವರವ ಪಡೆದೈ |
ಮರೆತೆ ಗಡ ವಾನರರನಡವಿಯ ಬಡಮೃಗಗಳೆಂದು ||
ಬರುವನೈ ಸುಗ್ರೀವ ಕಪಿಬಲ |
ವೆರಸಿ ನಿನ್ನನು ಕೊಲಲು ಗಳಿಸಿದ |
ವರಗಳವು ನಿಷ್ಫಲವು ನೀನಿನ್ನುಳಿವುದಸದಳವು || ೧೨ ||

ಅರಸಿಯನು ಕಳ್ಳಂಕೆಯಿಂದಪ |
ಹರಿಸಿದವನನು ತನ್ನ ಕರದಿಂ |
ದರಿವಭಾಷೆಯು ರಾಮಚಂದ್ರಂಗದರಿನುಳುಹಿದೆನು ||
ಧರೆಯೊಳಧಮಾಧಮರುಮೊಸಗದ |
ದುರಿತಕೆಳಸಿದ ನಿನ್ನನೀಕ್ಷಿಸಿ |
ತರಿಯೆ ತವಕಿಪುದೆನ್ನ ಮನವಾಳ್ದಂಗೆ ಬೆದರುವೆನು || ೧೩ ||

ನುಡಿದು ಫಲವೇನೆಂದು ತೆರಳ |
ಲ್ಸಡೆಗರಿಪ ಮಾರುತಿಯ ನಿರುಕಿಸಿ |
ಕುಡಿಯುಮೀಸೆಯು ಕುಣಿಯೆ ವೀರಾವೇಶವಾವರಿಸೆ ||
ಕಿಡಿಯನುಗುಳ್ವ*ಕ್ಷಿಗಳು ಮರಳ |
ಳ್ಸಿಡಿಲು ಬೊಬ್ಬಿಡುವಂತೆ ಗರ್ಜಿಸಿ |
ಮುಡುಹುಗಳ ತಿರುಹುತ್ತುಮೆಂದನು ಮಂತ್ರಿಗಸುರೇಂದ್ರ || ೧೪ ||

ಏಸರದು ತಾನೀಸ್ಪೃಗಾಧವು |
ವೀಸುನಾಲಗೆಯುಂಟೆ ನೀನುಂ |
ಸೈಸಿದಾಬಗೆಯೆಂತು ಬಿಡವಿದನಿಲ್ಲೆ ಕಡಿಪ್ಪದೆನೆ ||
ಏಸಲೇ ಅಹುದಹುದಿದೇಂದಾ |
ಸಾಸಿಯನು ಪಿಡಿಯಲ್ಕೆ ಪೋಪರ |
ನಾಸಭಾಮಧ್ಯದ ವಿಭೀಷಣನಾಗದಾಗದೆನೆ || ೧೫ ||

ಏತಕಾಗದು ಮರಣದಂಡನೆ |
ಪಾತಕಿಗೆ ಸಲ್ಲುವುದು ನೀಂ ಸಹ |
ಜಾತನಾಗಿಯುಮೆನಗೆ ದುಷ್ಟನ ಶಿಕ್ಷೆಗಡರಹುದೇ ||
ನೀತಿಗಿದು ಕುಂದಲ್ಲವೆಂದವು |
ರಾತಿಭೀಕರನೆನೆ ವಿಭೀಷಣ |
ಸೋತವೊಲ್ ಕ್ಷಣಮಿರ್ದು ಬಳಿಕಿಂತೆಂದನಣ್ಣಂಗೆ || ೧೬ ||

ಸಹಿಸು ಸಹಿಸೆಂದಗ್ರಜಾತನೆ |
ದಹಿಸಲಾಗದು ರಾಜಧರ್ಮವ |
ನಹಿತರಾಜನ ದೂತನಾಗೈದಿಹನು ಸಮ್ಮೆಡೆಗೆ ||
ವಿಹಿತವೆನಿಸದು ದೂತವಧೆ ನಿ |
ರ್ವಹಿಸಿ ಕಾರ್ಯವ ಗೆಲ್ಲಬಲ್ಲಂ |
ಗಹಹ ಸಹನವೆ ಶಸ್ತ್ರವದರಿಂದಪ್ಪುದರಿವಿಜಯ || ೧೭ ||

ಈತ ಸತ್ವೋಪೇತ ರಾಘವ |
ದೂತನಬುಧಿಯ ದಾಂಟಿದತಿವಿ |
ಖ್ಯಾತನೀತಂಗಲ್ಲದಿತರರಿಗಂಜದಾಜಲಧಿ ||
ಈತನಿರ್ದೊಡೆ ದಾಶರಥಿಗಳ |
ನಾತು ಪೆಗಲಿಂದಿತ್ತ ತರ್ಪನು |
ಭೀತರಹ ಪೆರರಿಂದೆ ಸಾಗದು ಸಾಸವೀಪರಿಯ || ೧೮ ||

ಅದರಿನೀತನನುಳುಹಿದೊಡೆ ಸ |
ಮ್ಮದದೊಳವರನು ತರ್ಪನಿಲ್ಲಿಗೆ |
ಕೆದಕಿನೀನಾಬಳಿಕವರ್ಮರನು ಹೊಯ್ಯಬಹುದಲ್ತೆ ||
ವಿದಿತವಿದು ಮನ್ಮನಕೆನೀನಿ |
ನ್ನಿದರಮೇಲೆಂಬೆಸಸಿದೊಡಮಾಂ |
ಪದುಳದಿಂ ನಡೆಯಿಪೆವು ಜೀಯೆಸಲಾಗ ರಾವಣನು || ೧೯ ||

ತಮ್ಮ ನಿನ್ನದು ಧರ್ಮಮಾರ್ಗವು |
ಸಮ್ಮತವು ಮನವೊಪ್ಪಿತಾದೊಡೆ |
ಹಮ್ಮಿನಿಂದೀಕಪಿಯು ಲೆಕ್ಕಿಸದೆಮ್ಮನೆಂಬುವಕೆ ||
ಸುಮ್ಮನಿದನಾಂ ಕಳುಪಲಾಗದು |
ನಮ್ಮ ನೆನಪಿರುವಂತೆ ವಾಲಧಿ |
ಗೊಮ್ಮ ಹುತವಾಹನನನಟಿಸಿಯುಟ್ಟುವುದು ಮತವು || ೨೦ ||

ಬೇಗದಿಂದಿಂತೆಸಗಿ ನೀವೆಂ |
ದಾಗಳಾಣತಿಯೀಯಲಸುರರು |
ಪೋಗಿ ವಸ್ತ್ರಂಗಳನು ತಂದರು ಸನೆಯಿಸೆಣ್ಣೆಯಲಿ ||
ಈಗಳೇನ್ಸೈ ಗತಿಯು ನಿನ್ನಯ |
ಲಾಗವೇಗಕ್ಕಾದಿಕಾರಣ |
ವೇಗ ಪೋಪುದು ಬೆಂದು ದಾಂಟುವೆಯೆಂತು ಬಹುಗಡಲ || ೨೧ ||

ಹೋದೆ ಹೋಗಿನ್ನೆನುತೆ ರಾಕ್ಷಸ |
ಯೋಧರಾಲಾಂಗೂಲಕತಿಸ |
ಮ್ಮೋದದಿಂ ಬಟ್ಟೆಗಳ ಸುತ್ತಲ್ಕೈದಲಾಹನುಮ ||
ಈದುರಾತ್ಮಕರೇಸು ವಸನವ |
ನ್ನೈದೆ ಯೊದವಿಪರೀಕ್ಷಿಸುವೆನೆಂ |
ದಾದಶಾನನನದ್ಭುತಂಗೊಳೆ ಬಾಲವನು ಬೆಳಸೆ || ೨೨ ||

ಎಲವೊ ಬಳೆಯಿಸು ಬಳೆಯಿಸಾವುಳಿ |
ಚಳಿಗೆ ತೊಗಲನು ಹೊದೆದು ಕಾಲವ |
ಕಳೆವರಾಯನೆ ರಾವಣೇಶ್ವರನುಂಟು ವಸನಗಳು ||
ನೆಲಸಿದೆಲ್ಲವ ತುಂಬುವನಿತಿವೆ |
ಪುಳುವೆ ನಿನ್ನೀಬಾಲಕಿಲ್ಲವೆ |
ಬಳೆಯಿಸೆಂದಸುರರ್ಕಳಬ್ಬರಿಸುತ್ತೆ ಸುತ್ತಿದರು || ೨೩ ||

ಒಡನೆ ಯಜ್ಞೇಶ್ವರನ ಹತ್ತಿಸಿ |
ಪಿಡಿದು ನಗರದ ರಾಜಮಾರ್ಗದೆ |
ನಡೆಯಿಸುತೆ ಸಾರುತ್ತೆ ರಾಮನ ದೂತನಿವನೆಂದು ||
ಕಡೆಯ ಕೇರಿಯ ದಾಂಟಿಸಿಯೆ ಕಾ |
ಡೆಡೆಯ ಸೇರಿನ್ನೆನುತೆ ಬಿಟ್ಟೊಡೆ |
ಯೊಡನೆ ಮಾರುತಸುತನು ಬಳೆದನು ಕಟ್ಟು ಪುಡಿಯಾಗೆ || ೨೪ ||

ಕರಡವುಳಿವುದೆ ವಾರ್ತೆಯಸುರಿಯು |
ಕೊರೆದರಿದನಾಸೀತೆಗವಳುರೆ |
ಮರುಗಿ ಹುತವಾಹನನನರ್ಚಿಸಿ ಬೇಡಿದಳು ವರವ ||
ಅರಸನನು ರಘುವರನನಲ್ಲದೆ |
ಪೆರರನೀಮನದಲ್ಲಿ ನೆನೆಯದ |
ಪರಮಸಾಧ್ವೀವ್ರತವು ತನಗಿರೆ ವಾಯುಪುತ್ರಂಗೆ || ೨೫ ||

ಉರಿವ ಬೆಂಕಿಯು ತಣ್ಣಿತಾಗಲಿ |
ಮೊರೆವ ಜಲಧಿಯು ಸುಪಥವಾಗಲಿ |
ಸರಸಿಜಾಕ್ಷನ ದರ್ಶನವು ತಾಂ ಲಭಿಸಲತಿಜವದೆ ||
ಕರುಣಿಸೈಯಿದನೆಂದಮಾತ್ರದೊ |
ಳರರೆ ನಂದಿತು ಬಿಸುಪು ಪವನಜ |
ನರಿದನಿದು ಜಗದೇಕಜನನಿಯ ಕೃಪೆಯ ಫಲವೆಂದು || ೨೬ ||

ಊರ ಮನೆಗಳ ಮೇಲೆ ತಿರುಗುತೆ |
ತೋರುತಗ್ನಿಯ ಸೂರಿನೆಡೆಯೊಳು |
ಮೀರಿ ಬೊಬ್ಬಿಡುತೇರಿ ಗೋಪುರಗಳನು ಪುಡಿಗೈದು ||
ಹಾರಿ ರಾವಣಕುಂಭಕರ್ಣರ |
ಚಾರುವಾದರಮನೆಗೆ ಬೆಂಕಿಯ |
ನೂರಿ ಹನುಮನು ರಾಮಚಂದ್ರನು ವಿಜಯಿಯೆನುತಿರ್ದ || ೨೭ ||

ತೆರಳಿಯಲ್ಲಿಂ ವರವಿಭೀಷಣ |
ಪರಮಭಕ್ತನ ರಾಜಭವನವ |
ನಿರುಕಿಸುತ್ತವನದನು ಸೋಂಕಲು ಬಾರದೆಂದುಳುಹಿ ||
ಪುರದೊಳಿರ್ಪಖಿಳಾಲಯಂಗಳ |
ನಿರದೆ ವನಮುಮನಂತೆ ಭಸ್ಮೀ |
ಕರಿಸಿ ಹರಿಸದಿನಂಜನಾಸುತನಂಬುಧಿಯ ಸೇರಿ || ೨೮ ||

ಅದ್ದಿ ಬಾಲವನುರಿಯ ನಂದಿಸಿ |
ಗದ್ದದಲಿ ಕರವಿಟ್ಟು ಶಿವಶಿವ |
ಬುದ್ಧಿಶೂನ್ಯತೆವೆತ್ತು ನಾನಕಟೇನಮಾಡಿದೆನೊ ||
ಹೊದ್ದೆ ಸುಟ್ಟೆನಶೋಕವನು ತಾ |
ನಿದ್ದಳಲ್ಲಿಯೆ ದೇವಿ ಬಗೆಯದೆ |
ಯುದ್ಧುರಟುತನದಿಂದೆ ಗೈದೆನು ಮಾತೃಹತ್ಯೆಯನು || ೨೯ ||

ಎನುತೆ ಚಿಂತಿಸಿ ತನ್ನ ಬಾಲವ |
ನನಲ ಸುಡದಿರ್ದುದನು ನೆನೆದಾ |
ಜನನಿ ಬದುಕಿರವೇಳ್ಕುಮಿದರೊಳಗಿಲ್ಲ ಸಂದೆಗವು ||
ತನುವಿದಾವಳ ದಯದೆ ತಣ್ಣಿ |
ತ್ತೆನಿಸಿತಂತಹ ಪರಮಸಾಧ್ವಿಗ |
ಮನಲಭಯವೇನಿದನು ತಿಳಿಯದೆ ಪೋದೆನಾನೆಂದು || ೩೦ ||

ಭರದೆ ವನವನು ಸಾರ್ದು ಸೀತೆಗೆ |
ಪರಮಸಂಭ್ರಮದಿಂದೆ ವಂದಿಸಿ |
ಸುರರಿಪುವಿನಾಶಸ್ಥಾನವಾರ್ತೆಯನೆಲ್ಲ ಬಿತ್ತರಿಸಿ ||
ಅರಸನಲ್ಲಿಗೆ ಪೋಗಲಾಜ್ಞೆಯ |
ಕರುಣಿಸಲುಬೇಕೆಂದು ಯಾಚಿಸಿ |
ಹರಕೆಗೊಂಡುರೆ ರಾಮರಾಮೆಂದಾರ್ದು ಪಾರಿದನು || ೩೧ ||

## ನಾಲ್ಕನೆಯ ಸಂಧಿ ಸಂಪೂರ್ಣಂ.



## ಐದನೆಯ ಸಂಧಿ.

ಸೂ || ಬಸಿವ ಹರಿಸದ ರಸದೆ ಪವನಜ |
ನೊಸಗೆಯುಸಿರ್ದಂಗದಗೆ ಮಹಿಜೆಯು |
ಮಿಸುಪ ಚೂಡಾಮಣಿಯನಿತ್ತನು ಮಿಹಿರಕುಲಮಣಿಗೆ ||

ಸ್ವಾಮಿಕಾರ್ಯವ ಸಾಧಿಸಿದೆನೆಂ |
ಬಾವಹೋತ್ಸಾಹವೆ ಪಡಂಗೆನೆ |
ಭೀಮಸತ್ವಗಳಿಂದೆ ರಂಜಿಪ ಶರಧಿಯನು ದಾಂಟಿ ||
ಆಮಹೇಂದ್ರಾಚಲದ ಶಿಖರದೆ |
ರಾಮರಾಮೆಂದಾರ್ಭಟಿಸಿ ನಿ |
ಸ್ಸೀಮವಿಕ್ರಮಪುರುಷಿಯ ನೋಡಿದರಂಗದಾದಿಗಳು || ೧ ||

ಒಡನೆ ಬಂದುದು ವಾನರೇಂದ್ರರ |
ಗಡಣ ಚಡಿಗಳನೆತ್ತಿ ಹೋಹೋ |
ತಡೆಯ ತಡಯಿವೆನುತ್ತೆ ಗರ್ಜಿಸುತಾಗ ಕಪಿಗಳನು ||
ಒಡೆಯನಾಳೆಂಬಾನಿಬಂಧನೆ |
ಗೆಡೆಯಿದಲ್ಲೆಂಬುದನು ಬಗೆಯದೆ |
ತಡೆಯ ತೊಡಗುತ್ತೆ ಬರದೆ ಹೋರಿತು ಬಳಲಿ ಬಾಯಾರಿ || ೨ ||

ಜಾಣನಾಜಾಂಬವನು ಮುಂದಿದ |
ಕೇನುಪಾಯವದೆಂದು ಮಾರುತ |
ಸೂನುವಿನ ಕೈವಿಡಿಯುತಂಗದಸಹಿತನುನ್ನತದ ||
ಠಾಣವೊಂದಿರಲೈದಿ ಸಕಲರು |
ಕಾಣುವಂದದೆ ಕುಳಿತು ಭುವನ |
ಪ್ರಾಣತನುಜನೆ ಜಾನಕಿಯ ವೃತ್ತಾಂತವೇನೆನಲು || ೩ ||

ಸದ್ದಡಂಗಿತು ರಾಮಸೇವಕ |
ನೆದ್ದು ನುಡಿದನು ಕೇಳ್ವುದೆಲ್ಲರು |
ಸುದ್ದಿವೇಳ್ವೆನು ಲೋಕಜನನಿಯ ಘನಪತಿವ್ರತೆಯ ||
ಬದ್ಧಕಂಕಣನಾಗಿ ಗಗನವ |
ಹೊದ್ದಿ ಗಮಿಸುವ ನನಗೆ ಜಲಧಿಯಿ |
ನೆದ್ದು ಮೈನಾಕಾದ್ರಿರಾಜನು ಗೈದನತಿಹಿತವ || ೪ ||

ಮುಂದೆ ಸಾರ್ದಮರೇಂದ್ರನಟ್ಟೆ |
ಲ್ಬಂದು ಕೆಣಕಿದ ಸುರಸೆಯನು ಬ |
ಲ್ಪಿಂದೆ ಸೋಲಿಸಿ ಬಳಿಕ ಸಿಂಹಿಕೆಯೆಂಬ ರಕ್ಕಸಿಯು ||
ಬಂದು ತನ್ನಯ ನೆಳಲ ನುಂಗಲು |
ಮುಂದಕೈದಲ್ಕಾರದವಳನು |
ಕೊಂದು ಜಲಧಿಯ ದಾಂಟಿ ಕಂಡೆನು ಮೆರೆವ ಲಂಕೆಯನು || ೫ ||

ನಗರಿಯದು ಪೆಣ್ಣೊಡಲ ಧರಿಯಿಸಿ |
ಪುಗಲುವೆಡೆಗುಡದೆನ್ನ ತಡೆದೊಡೆ |
ಬಗೆಯದವಳನು ಬಡಿದು ನಗರದೊಳುಳ್ಳ ಮನೆಮನೆಯ ||
ಪುಗುತು ಪರಸುತೆ ಜಾನಕಿಯ ಸಂ |
ಗತಿಯನೇನುಮನರಿಯದೆಂದುಂ |
ಬಿಗಿದ ಬಿಚ್ಚಡ ಕತ್ತಿಯಾಳ್ಗಳ ರಾವಣನ ಮನೆಯ || ೬ ||

ಸೇರಿಯಾತನ ಶಯನಮಂದಿರ |
ದೇರುಜೌವನದಬಲೆಯರ್ಕಳೊ |
ಳಾರಯುತೆ ಬೇಸತ್ತು ಕಾಣದೆ ರಾಮನರಸಿಯನು ||
ಊರಕೊರಗಣಶೋಕವನದೊಳ್ |
ಕ್ರೂರೆಯರ ಮಧ್ಯದಲಿ ದುಃಖಿಸು |
ತಾರುಮಿಲ್ಲ ಜನಾಥೆಯಂಥದೆ ಶಿಂಶುಪೆಯ ತಳದೆ ||೭||

ರಾಮನಾಮಸ್ಮರಣಬಲದಿಂ |
ಕೋಮಲಾಂಗದೊಳಸುವನಿಲ್ಲಿಸಿ |
ಕಾಮಿತಂಗಳನೆಲ್ಲ ವರ್ಜಿಸಿ ಕೊರಗಿ ಕೃಶೆಯಾಗಿ ||
ಆಮಹಾಸತಿದೇವಿಯಿರೆ ಶ್ರೀ |
ರಾಮದೂತನೆನುತ್ತುಮುರುಮುತೆ |
ನೇಮವಾಂತಲ್ಲಿರ್ದಶೋಕೋದ್ಯಾನವನು ಮುರಿದು ||೮||

ರಕ್ಕಸರ್ಕಳನಟ್ಟಿ ರಾವಣ |
ನೊಕ್ಕಲಿಕ್ಕಿದೆನವರ ಬಳಿಕಾಂ |
ಸೊಕ್ಕನಟಿಸುತಸಿಕ್ಕಿ ರಾವಣಿಯೊಯ್ದನರಮನೆಗೆ ||
ರಕ್ಕಸಾಣ್ಮನನುಜ್ಞೆಯಿಂ ಬಾ |
ಲಕ್ಕೆ ಬೆಂಕಿಯನಿಕ್ಕೆ ಸುಟ್ಟೆನು |
ಚೊಕ್ಕಟಮೆನಲ್ ಪುರಿಯನಾ ಬಳಿಕಿತ್ತ ಸಾರಿದೆನು ||೯||

ಎಂದು ನುಡಿಯಲ್ಜೋಷಘೋಷದೊ |
ಳಂದು ಕೊಂಡಾಡಿದರು ಸಕಲರು |
ಮುಂದೆ ಸುಗ್ರೀವಂಗೆ ಬೇಗದೊಳರುಪಬೇಕೆಂದು ||
ನಿಂದ ಬಳಿಯೊಳು ನಿಲ್ಲದೈದುತೆ |
ಬಂದರೆಲ್ಲರು ಪುರದ ಬಳಿಯಿ |
ಪೂರ್ಣೆಂದುಸುಂದರವನಕೆ ಕಂಡರವೋಘಫಲಗಳನು ||೧೦||

ಇದಲೆ ಸುಗ್ರೀವನದು ನಮಗಿಂ |
ದೊದವಿದೀಯುತ್ಸವದೆ ಪಣ್ಗಳ |
ಮುದದೆ ಕೆಳ್ತೊಡೆ ಮನ್ನಿಸುವಪದನಲ್ಲದಿಲ್ಲೆಂದು ||
ಬೆದರದೆಲ್ಲೆಡೆನುಗ್ಗಿ ಬೇಕಾ |
ದುದನು ಮಿಗೆ ಕಿತ್ತಡಸಿ ಬಾಯೊಳ |
ಗಧಿಕಘೋಷವನೆಸಗಿ ಪಲವೃಂತೆರದೆ ವರ್ತಿಸುತೆ ||೧೧||

ಕಾವಲಿನ ಕಟ್ಟಳೆಯ ವಿಚಾರ |
ಲಕ್ಕಾವನವ ಕಾವವರು ತಮ್ಮಯ |
ದೇವನಾಬಳಿಗೈದಿ ಮುರುಹಲ್ಕೇಳಿಯ ಜನವನು ||
ಪಾವಮಾನಿಯ ಜಯದ ಕುರುಹಿದು |
ಭಾವಿಸಲ್ಬೇರಲ್ಲವೆಂದುರೆ |
ತೀವಿದಾನಂದಾಂಬುನಿಧಿಯೊಳಗೈದೆ ಮುಳುಗಿಡನು || ೧೨ ||

ಕೆಲದೊಳಿದಾರ್ಶಲಕ್ಷ್ಮಣಂಗಿದ |
ತಿಳಿಪುತಿರೆ ಜಲಜಾಪ್ತಪುತ್ರನು |
ಜಲಜಮಿತ್ರಕುಲಾಬ್ಧಿಶಶಿ ಕೇಳಿದನು ರಘುವರನು ||
ಕಳೆಯುದೇರಿತು ಮುಖದೆ ಮೂವರು |
ಮಿಳಿಯುತನುಜೆಯ ವಾರ್ತೆಯಾಲಿಸ |
ಲೊಲವಿನಿಂ ಹಾರೈಸುತಿರ್ದರು ಪವನಜನ ಬರವ || ೧೩ ||

ನೋಡೆ ತೆಂಕಲದೊಂದು ತೇಜವು |
ಮೋಡಕವಿದಂಬರದ ಮಧ್ಯದೆ |
ಮೂಡಿದರ್ಕನ ಪೋಲಲಂಜಿಗೊಂಡರೇಕೆಂದು ||
ನಾಡೆ ಒರೆಬರೆ ಸನಿಹಕರಿದರು |
ಕೋಡಗದ ಪಡೆಯೊಡನೆ ಮಾರುತಿ |
ಪೂಡಿದುತ್ಸವದಿಂದನೈದುವ ಗಾಡಿಯೆಂದೆನುತೆ || ೧೪ ||

ಕ್ಷೇಮದಿಂದಿಹಳವನಿಜಾತೆಯು |
ರಾಮಚಂದ್ರನೆ ನಿನ್ನ ರಾಣಿಯು |
ತಾಮರಸಮುಖಿಯು ಸಾಧ್ವೀಮಣಿಯು ಜಾನಕಿಯು ||
ನೇಮವೇ ತನಗಿನ್ನು ತಪ್ಪದ |
ಕಾಮಹಿಳೆಯನು ಬೆಸಸು ಬೆಸಸೆಂ |
ದಾಮರುತ್ಸುತನಿಳಿದು ಬಿಳ್ದನು ಪದಕೆ ರಾಘವನ || ೧೫ ||

ಎತ್ತುತಿರೆ ರಘುವರನು ಭಕ್ತನ |
ನುತ್ತಮಾಂಗವ ಪಿಡಿದು ನೋಳ್ಪರು |
ಚಿತ್ತವಿಭ್ರಾಂತಿಯಲಿ ನಿಂದರು ನಟ್ಟದಿಟ್ಟಿಯಲಿ ||
ಎತ್ತಣದೊ ಈಸುಕೃತ ಹನುಮಂ |
ಗುತ್ತಮೋತ್ತಮನೊಡಲ ನೋಂಕಿಂ |
ದುತ್ತರಿಸಿದನು ಭವಜಲಾಬ್ಧಿಯನೆಂದು ಪೊಗಳಿದರು || ೧೬ ||

ಪವನನಂದನನೆಳ್ದು ಲಕ್ಷ್ಮಣ |
ಗವನಕನು ತಾನಾಗಿ ಕಪಿಪುಂ |
ಗವಗೆ ತಲೆವಾಗೆರಗಿ ಕೈಗಳ ಕಟ್ಟಿ ನಿಂದಿರಲು ||
ಅವನಿಜಾತೆಯ ಕಥೆಯ ಕೇಳ |
ಲ್ತವಕಿಪುದು ಮನ್ಮನವು ಹನುಮನೆ |
ಲವಮುಮಂ ಬಿಡದೊರೆವುದೆಂದನು ರಾಮಚಂದ್ರಮನು || ೧೭ ||

ದೇವ ನಿನ್ನಾಜ್ಞಾನುವರ್ತಿಗ |
ಳಾವದ್ಯೈವಕ್ಕಂಜಿ ನಿಲುವರು |
ಪಾವಮಾನಿಯೆ ಪೋಗಿ ಬಾರೆಂದೆಂದ ವಚನವದು ||
ನಾವೆಯಾದುದು ತನಗೆ ತನ್ನಯ |
ಭಾವಭಕ್ತಿಯ ವಾಯುಬಲದಿಂ |
ದಾವನಧಿಯುಂ ದಾಂಟಿ ಲಂಕಾದ್ವೀಪಕೈದಿದೆನು || ೧೮ ||

ಅಲ್ಲಿ ಮೆರೆವಾ ರಾಜಧಾನಿಯೊ |
ಳೆಲ್ಲು ಮಿಲ್ಲ ದಶೋಕವೆಂದೆಂ |
ಬುಲ್ಲಸಿತವನದಲ್ಲಿ ಪರಿಶಿಂಶುಪೆಯ ತಳದಲ್ಲಿ ||
ಖುಲ್ಲೆಯಸುರಿಯರಾರ್ಭಟೆಗೆ ಮನ |
ದಲ್ಲಿ ಬೆದರುತೆ ರಾಮರಾಮೆಂ |
ದಲ್ಲಿಗಲ್ಲಿಗೆ ಧೈರ್ಯಗೊಳ್ಳುತೆ ಕೊರಗಿ ಕೃಶೆಯಾಗಿ || ೧೯ ||

ಏಕವೇಣೀವಸನಧಾರಿಣಿ |
ಲೋಕಪೋಷಿಣಿ ಮಂಜುಭಾಷಿಣಿ |
ಶೋಕಿಸುತ್ತಿರೆ ನಿನ್ನ ರಾಣಿಯು ಕಂಡು ನಮಿಸಿದೆನು ||
ಆಕಕುತ್ಸ್ಥಾನ್ವಯದ ಚರಿತೆಯ |
ನಾಕೆ ಮನಮೊಪ್ಪುವೊಲೊರೆಯ |
ಲ್ಕೇಕಭಾವದೆ ಭಕ್ತನಿವನೆಂದೆನ್ನ ನಂಬಿದಳು || ೨೦ ||

ಭೇದವಿಲ್ಲದೆ ತನ್ನ ನುಡಿಗಳ |
ನಾದರಿಸಲೆಂದೆನುತೆ ನಿಮ್ಮಯ |
ಮೋದದುಂಗುರವೀಯುಲೊಡನದನಿರಿಸಿ ಮಸ್ತಕದೆ ||
ಹಾದಯಾಸಾಗರನೆ ನಾಥನೆ |
ಹೋದಳಿವಳೆಂದೆನ್ನ ಮರೆಯದೆ |
ಕಾದಲನೆ ಕಾವಾಸೆಯುಳ್ಳವನಾಗಿ ವರ್ತಿಪೆಯ || ೨೧ ||

ಅರಸನೆಂತಿಹನೆತ್ತಲಿರ್ಪನು |
ಪರಮಕರುಣಾರ್ಣವನ ನೀನನು |
ಸರಿಸಿದಾ ಒಗೆಯೆಂತು ನಿನ್ನೊಳಗೆಂತು ಕೆಳೆತನವು ||
ಸ್ಮರಿಸುವನೆ ಪಾಪಿನಿಯನೆನ್ನುಮ |
ಸರಿದನೆಂತಾ ನಿರ್ಪ ತಾಣವ |
ಸೊರೆಯ ನೀನೆಂದೆನ್ನನವನಿಜೆ ಕೇಳ್ದಳತಿಮುದದೆ ||೨೨||

ಕೇಳಿದಾ ಪ್ರಶ್ನೆಗಳಿಗುತ್ತರ |
ವೇಳುತಿರ್ದೊಡೆ ತಾನು ಮಧ್ಯದೆ |
ತಾಳು ತಾಳೆಂದೆನ್ನ ತಡೆಯುತ್ತತ್ತು ಬೇಸತ್ತು ||
ಪೇಳು ಮುಂದೆನ್ನುತ್ತೆ ಯಾಚಿಸಿ |
ಪೇಳತೊಡಗಲ್ಮತ್ತೆ ತಡೆಯುತೆ |
ಗೋಳಿಡುತೆ ಮತ್ಪ್ರಾಣನಾಥಂಗೆಲ್ಲಿ ಸುಖಮೆನುತೆ ||೨೩||

ಉಗುವ ಕಣ್ಣೀರಿಂದಮೆನ್ನಯ |
ಮೊಗವನೋಡುತ್ತಾನು ಮುಗಿಯಿಸೆ |
ಮಗುಳೆ ನುಡಿ ಮತ್ಪ್ರಾಣಕಾಂತನ ಸವಿಯನುಡಿಗಳನು ||
ಬಗೆಯಿದಾನಂದಿಸಲಿ ಬಹುದಿನ |
ದಗಲಿಕೆಯ ಸಂತಾಪ ನೀಗಲಿ |
ಮುಗಿವೆ ಕೈಗಳನೆನ್ನುತ್ತಡಿಗಡಿಗೆನ್ನ ಯಾಚಿಸುತೆ ||೨೪||

ಏಸು ನಾಂ ಪೇಳಿದೊಡಮುದನು |
ಲ್ಲಾಸದಿಂದಿನ್ನೈಸು ಪೇಳೆಂ |
ಬಾಸುಶೀಲೆಯ ನುಡಿಯ ನಿಲಿಸಲ್ಕಿಂತು ಪೇಳಿದೆನು ||
ದಾಶರಥಿ ತಾನೊಲಿದು ಸೀತಾ |
ವಾಸದೆಡೆಯನು ತಿಳಿದು ಹನುಮನೆ |
ಲೇಶಮುಂ ನೀಂ ಪೊತ್ತುಗಳೆಯದೆ ಬರ್ಪುದೆಂದೆನುತೆ ||೨೫||

ನೀಡಿಹನು ತನಗಾಜ್ಞೆಯನು ಕೃಪೆ |
ಮಾಡಿ ನೀವಿಂದೆನ್ನ ಕಳುಪಲು |
ಕೂಡಿಕೊಂಡವದಿರನು ಬರ್ಪೆನು ತಾಯೆ ಶೀಘ್ರದಲಿ ||
ಬೇಡ ನಿಮಗೀಚಿಂತೆಯಿನಿತುಂ |
ಬಾಡಬಾಗ್ನಿ ಸಮಾನಭೂಪಂ |
ಗೀಡೆ ಹುಲುರಕ್ಕಸರು ಸುಡುವನು ಖುಲ್ಲರನ್ವಯವ ||೨೬||

ಎನಿತು ಕಾಲವನಿಲ್ಲಿ ಕಳೆವೆನೊ |
ದನುಜರಾಯುವದನಿತು ಬಳೆವುದು |
ಮನುಕುಲೇಶ್ವರಿ ನಿಮ್ಮ ಬಿಡುಗಡೆಗನಿತು ತಡವಹುದು ||
ನನಗೆ ಕುರುಪನದೇನನಾನುಂ |
ಜನನಿ ನೀವಿಂದಿತ್ತಿರಾದೊಡೆ |
ಜನಪಗಿತ್ತದನಿತ್ತ ಬರಿಪೆನು ತಳುವದಾತನನು ||೨೭||

ಎಂದು ನುಡಿಯಲು ದೇವಿಯಾಲಿಸಿ |
ಯೆಂದಳೆನ್ನರಸಂಗೆ ಪೇಳ್ವುದು |
ಬಂಧನದೆ ಬಹುಕಷ್ಟವಾಂತಿಹಳೆಂಬ ಸಂಗತಿಯ ||
ತಂದು ಕೃಪೆಯನು ತನ್ನೊಳತಿಜವ |
ದಿಂದಮೈದಿಯೆ ಸೆರೆಯ ಬಿಡಿಸುವು |
ದೊಂದುತಿಂಗಳ ಗಡುಬವಿತ್ತಿಹನೆನಗೆ ರಾಕ್ಷಸನು ||೨೮||

ಮುಗಿಯೆ ಗಡುಬವು ಕೂಡೆಯೆನ್ನನು |
ಮುಗಿದುದೆಂದೇ ಬಗೆದು ಮುನ್ನು |
ಜ್ಜುಗವನೆಲ್ಲವನುಳಿದಯೋಧ್ಯೆಗೆ ತೆರಳುವುದು ಮತವು ||
ಹಗೆಯತೀರಿಪ ಚಲವದಿರ್ದೊಡೆ |
ಹಗರಣವಿದವ್ಪುದಕೆ ಮುನ್ನವೆ |
ತೆಗೆಸಿ ಸೆರೆಯನು ನನ್ನ ಸಲಹುವನಾಗು ನೀನೆಂದು ||೨೯||

ಒರೆದು ಬಳಿಕಮದೊರ್ಮೆ ವನದೊಳ |
ಗಿರುವಕಾಲದೆ ಚಿತ್ರಕೂಟದೆ |
ದುರುಳಕಾಕಾಸುರನು ಗೈದನ್ನೆಯದ ಕಜ್ಜವನು ||
ಅರುಹುವುದು ನೀನೆಂದು ಮಲಿನಾಂ |
ಬರದ ಸೆರಗಿನ ಕೊನೆಯ ಮಿರುಮಿರು |
ಮಿರುಪಚೂಡಾಮಣಿಯನಿತ್ತಳು ನೀಡು ಪತಿಗೆಂದು ||೩೦||

ದೇವ ನೀವಿದನೊಪ್ಪಿ ಕೊಳ್ವುದು |
ಸಾವಕಾಶತೆಯಿಸಗಲಾಗದು |
ಭಾವಶುದ್ಧಿಯೊಳಿರ್ಪ ದೇವಿಯ ಸೆರೆಯ ಬಿಡಿಸುವುದು ||
ಆವುದಭಿಮತವದನು ಬೆಸಸುವು |
ದೀವನೇಚರನೊಡನೆ ಮಾಳ್ಪನು |
ಪಾವನಾತ್ಮಕ ಕರುಣಿಸೆಂದೆನುತಿತ್ತನಾಮಣಿಯ ||೩೧||

ಕೇಳಿದನು ರಾಘವನು ಹನುಮನು |
ಪೇಳಿದಾವೃತ್ತಾಂತವೆಲ್ಲವ |
ನಾಲಿಯಲಿ ನೀರ್ದುಂಬಿ ಮನದೊಳಗಳಲಿ ಬಲುಬಳಲಿ ||
ಹಾಲತಾಂಗಿಯೆ ಸತಿಯೆ ನಿನ್ನನು |
ಖೂಳರಾವಣನೆಳೆಯುತೊಯ್ವಾ |
ಕಾಲದಲಿ ನೀನೆನಿತು ಬೆದರ್ದೆಯೊ ಎಂತು ಕೂಗಿದೆಯೊ ||೩೨||

ಅಲ್ಲಿ ಸನಿಹದೊಳಿರ್ದು ಬಿಡಿಸದೆ |
ಪಲ್ಲುಗಿರಿಯುತ್ತಿಲ್ಲಳಲ್ದೊಡೆ |
ಫುಲ್ಲಲೋಚನೆ ನಿನ್ನ ಕಷ್ಟಕ್ಕೊದವಿದೆನೆ ನಾನು ||
ವಲ್ಲಭೆಯ ಸಂಕಟದೆ ಮನವನು |
ಕಲ್ಲುಗೈದದಕೊದವದಾಬರಿ |
ನಲ್ಲನಿರಲೇಂ ಫಲವು ಫಡ ಸುಡಲೆನ್ನ ಜೀವಿತವ ||೩೩||

ಪತಿಯ ಕಷ್ಟದೊಳೈದೆ ಕುಗ್ಗುತೆ |
ಪತಿಯ ತುಷ್ಟಿಯೊಳಮಮ ಹಿಗ್ಗುತೆ |
ಪತಿಯ ಹರಣವು ತೊಲಗಲೊಡನೇರ್ದುಗ್ರತರಚಿತಿಯ ||
ಮೃತಿಗೆ ತಾವೇ ತುತ್ತೆನಿಸಿ ಸ |
ದ್ಗತಿಯ ಪಡೆವಾ ಸತಿಯರೆಡರಿಂ |
ವ್ಯಥೆಗೊಳುತ್ತಿರೆ ಕಂಡುಪೇಕ್ಷಿಪ ಗಂಡರೇಕವರು ||೩೪||

ಹೃದಯವಲ್ಲಭೆ ನೀನು ರಾಮನ |
ಸುದತಿಯಾದುದಕಾಯ್ತೆ ಫಲವಿಂ |
ತಧಮನೆಂಬುದನರಿಯದೇಕೆನಗಾದೆಯೆಲೆಮುಗುದೆ ||
ಎದೆಯೊಳಕ್ಕದನೆಂದು ಜನಕನು |
ಪದುಳದಿಂದೆನಗೀಯೆ ನಿನ್ನನು |
ಬೆದರಿಯಸುರಂಗಿತ್ತ ಬಳಿಕಿನ್ನೆತ್ತಣದಟೆನಗೆ ||೩೫||

ಎಂದು ತನ್ನನು ತಾನೆ ನಿಂದಿಸಿ |
ದಂದುಗಂಬಡುತಿರ್ಪ ಭೂಪನ |
ನಂದು ಸುಗ್ರೀವಾದಿಮುಖ್ಯರು ತಿಳುಹಿ ಸಂತವಿಡೆ ||
ತಂದು ಧೃತಿಯನು ಮನಕೆ ಹನುಮಂ |
ಗೆಂದನಾರಾಜೇಂದ್ರಚಂದ್ರನು |
ಮುಂದೆ ನಡೆಪಿದ ಕಾರ್ಯಭಾಗವನೊರೆಯನೀನೆಂದು ||೩೬||

ಪೇಳತೊಡಗಿದನಾಗಳನಿಲಜ |
ನಾಲತಾಂಗಿಯ ಭಯವ ತಗ್ಗಿಸಿ |
ಸಾಲಸಂತತಿಯಿಂದೆ ಶೋಭಿಪಶೋಕವನವದನು ||
ಪಾಳುಗೈದೊಡೆ ರಾವಣನ ಬ |
ಲ್ಲಾಳುಗಳು ಕೈಮಾಡಲಂತಕ |
ನಾಲಯಕ್ಕವಪಿರನು ಕಳುಹಲು ಕೇಳಿಯಾ ಖಲನು ||೩೭||

ಶೂರನಾದಕ್ಷಯಕುಮಾರನ |
ಸಾರು ಧುರಕೆಂದಟ್ಟಿದೊಡೆ ನಲ |
ವೇರಿ ಬಂದನು ಹೋರಿದನು ಬಳಿಸಾರಿದನು ಜವನ ||
ಧೀರನಸುರಾಧಿಪನ ಹಿರಿಯಕು |
ಮಾರನೈತಂದಾಗ ಕೆಣಕ |
ಲ್ಕೋರಿ ಸತ್ವವನಜನ ಶರಕಾಂ ಸೋತವೋಲಿರಲು ||೩೮||

ಕೊಂಡು ಪೋದರು ಸಭೆಗೆ ನನ್ನನು |
ಕಂಡು ದನುಜೇಶ್ವರನನೆಂದೆನ |
ಖಂಡಲಕ್ಷ್ಮೀಯನಾದಿಮಾಯೆಯನವನಿತನುಜೆಯನು ||
ಕೆಂಡಮಿವಳೆಂದರಿಯದಾನು |
ದ್ದಂಡತನದಿಂ ಕೆಣಕಿದೆನು ಭೂ |
ಮಂಡಲಾಧಿಪ ರಕ್ಷಿಸೆಂದಡಿಗೆರಗಿ ರಾಘವನ ||೩೯||

ಈಮಹೀಜೆಯನೊಪ್ಪಿಸಲು ಸು |
ಪ್ರೇಮದಿಂ ನಿನಗೀವನಾಸು |
ತ್ರಾಮಪದವಿಯನಕ್ಕರಿಂ ಕೇಳೆನ್ನ ನುಡಿಗಳನು ||
ಕಾಮುಕತ್ವದೆ ಕೆಡಲುಬೇಡೆನೆ |
ಭೂಮಿ ನಡುಗುವ ತೆರದೆ ಗರ್ಜಿಸಿ |
ನೇಮವಿತ್ತನು ಕಪಿಯ ಕೊಲ್ಲುವುದೆಂದು ದನುಜರ್ಗೆ ||೪೦||

ಒತ್ತಿ ಪೇಳಲ್ಕಾವಿಭೀಷಣ |
ಮಿತ್ತು ತಪ್ಪಿತು ಬಳಿಕ ಬಾಲಕೆ |
ಹತ್ತಿಸಿದರಗ್ನಿಯನು ಪುರದೊಳಗಾಯ್ತು ಮೆರೆವಣಿಗೆ ||
ಕುತ್ತಿ ನೂಕಿದರೂರಿನಾಚೆಗೆ |
ಮತ್ತೆ ನಾನೈದತ್ತಲಗ್ನಿಯ |
ಪೊತ್ತಿಸುತ್ತಲ್ಲಿರ್ಪ ಮನೆಗಳನೆಲ್ಲ ದಹಿಸಿದೆನು ||೪೧||

ದುರುಳರಸುರರ್ಗೆಲ್ಲ ರಾಮ ।
ಸ್ಮರಣೆಯಿರ್ಪಂತನಲಮುದ್ರೆಯ ।
ನಿರದೆ ಹಾಕಿ ಒಳಿಕ್ಕೆ ದೇಪಯ ಪದಕೆ ಬಿಸ್ನವಿಸಿ ॥
ಭರದೆ ಸಿಮ್ಮಸು ಕಂದು ತಹೆನೆಂ ।
ದೊರೆದು ಭಾಷೆಯನಿತ್ತು ಬಂದೆನು ।
ಕರುಣಿ ಮನ್ನಿಪುದೆಂದು ರಾಮನ ಚರಣಕೆರಗಿದನು ॥೪೨॥

ಎರಗಿದಾತನ ಶಿರವನೆತ್ತುತೆ ।
ಪರಸಿ ಹನುಮನೆ ಧರೆಯ ಸಿರಿಯನು ।
ತೊರೆದ ರಾಮನು ನಿನ್ನಯುಪಕೃತಿಗೇನನಿತ್ತಪನು ॥
ಇರುವುದೊಂದೀಪ್ರೀತಿಯೆಂಬಾ ।
ಭರಣವಿದನಾಂ ಸೂರೆಗೊಟ್ಟೆನು ।
ಧರಿಸು ನೀನೆಂದರಪನಪ್ಪಿದನಂದು ಭಕ್ತನನು ॥೪೩॥

ಅರಳಿತಾತನ ಮಾನಸವು ರಘು ।
ವರನು ಬೇರಾಂ ಬೇರೆನಿಪ ಪೊದ ।
ಲರಿವು ಮಸುಳಿಸಿತೆರಕವಾಂತುದು ಮನವು ರಾಮನೊಳು ॥
ಸುರರು ಸುಮಗಳ ಸರಿಯ ಸುರಿದರು ।
ಸರಿಯೆ ಸನಕಾದಿಗಳು ಹನುಮಂ ।
ಗರರೆ ಧನ್ಯನು ಧನ್ಯನೆಂದಂಬರದೆ ನುತಿಸಿದರು ॥೪೪॥

ಸುಂದರಾಂಗಿಯ ನೆಲೆಯನರಿತೆನು ।
ಬಂಧನವನಿನ್ನಿರದೆ ಬಿಡಿಪೆನು ।
ಸಿಂಧುವೆಂಬಾಗೋಷ್ಪದಾಂಬುವ ಹೀರಿ ತೇಗುವೆನು ।
ಸಂದಿತೆನ್ನಯ ಶೋಕಶಿಖಿಯಾ ।
ಸಂದವಾಂತುದು ಮನವು ವಾನರ ।
ವೃಂದದಧಿಪನ ಮೈತ್ರಿಗಿದು ಫಲವೆಂದನಾ ರಘುಜ ॥೪೫॥

---

ವಿದಿತಘನಕರ್ಣಾಟರಾಜ್ಯದ ।
ಪದಕೊಡೆಯನಹ ಕೃಷ್ಣಭೂಪನ ।
ಪದದ ಸೇವಕನೆನಿಪ ಚಿಕಲಿಂಗಾಖ್ಯಪಾರ್ಥಿವನು ॥
ಪದೆದು ಸುಂದರಕಾಂಡವೆಂಬುದ ।
ನಿದನು ನುಡಿದನು ಭಾಮಿನೀಷ ।
ಟ್ಪದಿಯೊಳಿದು ರಾಜಿಸುಗೆ ಸುಜನರ್ಗೊಲವನೊಡರಿಸುತೆ ॥೪೬॥

ಸುಂದರಕಾಂಡಂ ಸಂಪೂರ್ಣಂ

# ಯುದ್ಧ ಕಾಂಡ

ಸೂಚನೆ || ಒರೆದ ಸೀತಿಯನಗ್ರಜನು ನೆರೆ |
ಜರೆಯೆ ಬಂದೆರಗಿದ ವಿಭೀಷಣ |
ಗರಸರಾಘವನೆಸಗಿದನು ಲಂಕಾಭಿಷೇಕವನು ||

---

ಕೇಳಿದನು ರಘುಪತಿಯು ಹನುಮನೆ |
ಪೇಳು ವಿಸ್ತರದಿಂದೆ ಲಂಕಾ |
ಪಾಲಕನ ಭುಜದಳವನಾತನ ಸುತರ ಸತ್ವವನು ||
ಆಳುವೇರಿಗಳೆಂತು ಕಾವಲಿ |
ನಾಳುಗಳ ಬಲವೆಂತು ಮೇಣವ |
ರಾಳುತನದನುವೆಂತಿವೆಲ್ಲವನೊರೆವುದೆನಗೆಂದು ||೧||

ಅರಸನಿಂತೆನೆ ಜೀಯ ಬೆಸನೆಂ |
ದರಿಕೆಗೈದನು ಪಾವಮಾನಿಯು |
ಶರಧಿಮಧ್ಯದೊಳಾತ್ರಿಕೂಟವೆನಿಪ್ಪ ನಾಮದಲಿ ||
ಮೆರೆವ ಗಿರಿಯಿಹುದದರ ನೆತ್ತಿಯೊ |
ಳರಿಭಯಂಕರಮಧಿಕವಿಸ್ತರ |
ಪರಿವಳಯದೊಳು ತೋರ್ಪ ಕೋಟೆಯದೊಂದು ರಂಜಿಪುದು ||೨||

ಅದರಮಧ್ಯದೊಳಿಹುದು ಲಂಕೆಯು |
ತ್ರಿದಶನಾಯಕದತ್ತಶಂಕೆಯು |
ಮದಿಸಿದಸುರರ ಬಲದೆರಂಕೆಯು ಕಾಪು ತನಗೆನಿಸೆ ||
ವಿದಿತವೇದಾಧ್ಯಯನ ಶಂಕರ |
ಪದಸರೋರುಹಭಜನವಾಪುರ |
ಸದನನಿಚಯದೆ ತುಂಬಿತುಳುಕುವುದಿರುಳುಪಗಲೊಳಗೆ ||೩||

ಸಾಧುವೃತ್ತಿಯನಿಂತು ತೋರುತೆ |
ಕ್ರೋಧಮದಗಳನೆದೆಯೊಳಾನುತೆ |
ಬಾಧಿಸುತ್ತಿಹರಿರದೆ ಪರಿಪರಿಯಿಂದೆಸಜ್ಜನರ ||
ಈದುರಾಚಾರಗಳ ದೆಸೆಯಿಂ |
ದಾದನುಜರೆಮಗಿಂದು ಸಾಧ್ಯರು |
ಸಾಧುವೃತ್ತಿಯೆ ಸಹಜವೆನಿಸಿರಲೆಮ್ಮ ಹವಣೇನು ||೪||

ಕಡುಭಯಂಕರರೆನಿಸಿದಸುರರು |
ದೃಢಪರಾಕ್ರಮದೃಪ್ತರನಿಶವು |
ಪಿಡಿದ ಮುಷ್ಟಿಯ ಗದೆಯ ಜಡಿಯುತೆ ಮುಸಕದಿಂದಿಹರು ||
ಒಡೆಯನವರಿಗೆ ರಾವಣನು ದ |
ಕ್ಕಡಿಗನಿವನೆನಲೇನು ಚೋದ್ಯವೆ |
ನುಡಿಗೆ ನಡುಗುವುದಿಳೆಯು ಪೌರುಷಕಿಲ್ಲ ಪಾಸಟಿಯು ||೫||

ಆರು ಸರಿ ರಾವಣನ ವಿಭವ |
ಕ್ಕಾರಪಡಿಯಿಡಬಹುದು ಸತ್ವ |
ಕ್ಕಾರು ಮಾರ್ಮಲೆವವರು ಸಮರಕ್ಕೀತನಿದಿರಿನಲಿ ||
ಸಾರಿ ಕೇಳುವರಿಲ್ಲವಾಜ್ಞೆಯ |
ಮೀರಿ ಬದುಕುವರಿಲ್ಲವಮೃತವ |
ಪೀರಿದಮರರುಮುಳಿವಿಗಂಜುತೆ ಸಿಲ್ಲರಿದಿರಿನಲಿ ||೬||

ಅನುಜರಿವನಿಗೆ ವರವಿಭೀಷಣ |
ಘನಶರೀರದ ಕುಂಭಕರ್ಣನು |
ಮನುವರದೊಳಿವರಗ್ರಜನ್ಮನ ಸರಿಗೆ ತೂಗುವರು ||
ತನುಜರಿರ್ಪರನೇಕರವರೊಳ |
ಗನಿಮಿಷರ ಗೆಲ್ದಾತ ಸುಭಟಾ |
ಗ್ರಣಿಯು ಪೆಸರವಗಿಂದ್ರಜಿತ್ತುವು ಪಿರಿಯನೆನಿಸಿಹನು ||೭||

ಈಸು ಬಲ್ಲಿದರೊಡನೆ ಸೆಣಸುವ |
ವಾಸಿಯೆಮಗೇಕೆಂದು ಚಿತ್ತಕೆ |
ಬೇಸರಾನದೆ ಸೇವಕಂಗಿದನೆಲ್ಲ ವಹಿಸಿದೊಡೆ ||
ಗಾಸಿವಡೆಯದೆ ಕಡಲನಿಂಗಿಸಿ |
ಭೂಸಮುವಗೈದಸುರಪುರವನು |
ವೀಸಬಡ್ಡಿಯೊಳೀಗಳಸುವನು ಕೊಳ್ವೆನಾಖಳರ ||೮||

ಎಂದ ಮಾರುತನಂದನನ ನುಡಿ |
ಗಂದು ರಘುನಂದನನು ಮೆಚ್ಚು |
ತ್ತೆಂದನಾ ರವಿನಂದನಾದ್ಯರಿಗಿನ್ನು ತಡವೇಕೆ ||
ಮುಂದಿನಾ ಸನ್ನಾಹವೆಲ್ಲವ |
ನೊಂದುಗೂಡಿಸಿ ಬೇಗ ತೆರಳುವು |
ದಿಂದು ಸಮುಚಿತನೆಮುಗೆ ನೀಡುವುದಾಜ್ಞೆಯನು ಪಡೆಗೆ ||೯||

ಏಳಿರೈ ನೀವಂಗದಾದಿಗ |
ಳೇಳಿರೈ ನಳನೀಲರಿರ ಮು |
ನ್ನೇಳಿರೈ ಜಾಂಬವನೆ ಕುಮುದನೆ ಗಜಸುಷೇಣರಿರಾ ||
ಏಳಿರೈ ದಧಿಮುಖಗವಾಕ್ಷರೆ |
ವೇಳೆಯಲ್ಲವೆ ಗವಯ ಶತಬಲಿ |
ಕೀಳುಬಲದವರಲ್ಲಲಾ ನೀವೇಕೆ ತಡೆಯುವಿರಿ ||೧೦||

ಕೊಂದು ಮುಂದೇಹರನು ವಿಜಯವ |
ನೊಂದಿ ಸೂರ್ಯನು ಗಗನಮಧ್ಯಕೆ |
ಬಂದೊಡಭಿಜಿಲ್ಲಗ್ನವೆಂಬರು ಶತ್ರುನಿಗ್ರಹಕೆ ||
ಮುಂದೆ ಪಯಣವ ಬೆಳಸಲದರೊಳ |
ಗೊಂದಬಹುದೈ ಜಯವ ನೀವದ |
ರಿಂದಮೀಗಳೆ ಜೈತ್ರಯಾತ್ರೆಗೆ ಹೊರಡುವುದು ಮತವು ||೧೧||

ಪ್ರಾಣಸಖಸುಗ್ರೀವಪಯಣ |
ಕ್ಕಾಣತಿಯನಿಂದಿತ್ತು ತೆರಳ |
ಲ್ಕಾಣೆಯಿಟ್ಟವೊಲರಿಯ ಜಯಿಸುವೆ ನೀನು ಸತ್ಯವಿದು ||
ತ್ರಾಣಿಯಹ ನೀಲಂಗೆ ಸಿನ್ನಯ |
ಸೇನೆಯೊಡೆತನವಿತ್ತು ಮುಂಗಡೆ |
ಜಾಣಿನೆಯ್ದುವುದೆನುತೆ ಥಟ್ಟನೆ ಕಟ್ಟನೀನೆಸಗು ||೧೨||

ತಕ್ಕ ಕಪಿನಾಯಕರಿಗೆಮ್ಮಯ |
ಪಕ್ಕದಾರೈಕೆಯನು ನೇಮಿವು |
ದೆಕ್ಕತುಳಬಲಜಾಂಬವಂತನ ನಿಲಿಸು ಪಿಂದೆಸೆಗೆ ||
ರಕ್ಕೆಯಂದದೊಳೆನ್ನ ರಕ್ಷಣೆ |
ಗೊಕ್ಕಡೆಯೊಳನುಜಾತನಿರ್ಪನು |
ಮಿಕ್ಕಕಡೆಯೊಂದರಲಿ ನೀನಿಹುದಕ್ಕರೆಯು ತನಗೆ ||೧೩||

ತೆರಳಲಿನ್ನೇನೆಂದು ರಾಘವ |
ನೊರೆದೊಡೊಡನೆಯೆ ಕಪಿಗಳರಸನ |
ಬೆರಲ ಸನ್ನೆಯೊಳಮಿತಕೋಟಿಯ ವಾನರರ ಪಡೆಯು||
ಧರಣಿಯೀದುದೊ ವೋಹರವನಿದ |
ನರರೆ ತಾನಿನ್ನಾವನಿದಿರಿಸಿ |
ಮರಳಬಲ್ಲವನೆಂಬವೊಲೊಗ್ಗಾಯ್ತು ಪೊರಮಡಲು ||೧೪||

ಕಂಡಿದನು ದಾಶರಥಿ ತಾಂ ಕೋ |
ದಂಡವನು ಜೇವೊಡೆಯಲಾ ಭುವ |
ನಾಂಡವೆಲ್ಲವ ತುಂಬಿ ಕಿವುಡೇಳಿಸಿತು ತನ್ನಿನದ ||
ಚಂಡದನುಜರ ಗಂಡ ರಿಪುಭೇ |
ರುಂಡ ರಾಮನಖಂಡಲಕ್ಷ್ಮಿಯ |
ಪುಂಡರೀಕಾಂಬಕೆಯ ತಹೆನೆಂದಾರ್ದ‍ಭಾಷೆವೊಲು ||೧೫||

ಸಾರಲೀವಾರ್ತೆಯನು ಲೋಕಕೆ |
ಭೂರಿಭೇರೀಧ್ವನಿಯು ಸಾಲದು |
ನಾರಿಯರ ಮುಖದಿಂದೆ ಪೊರಮಡೆ ಹರಹಿಕೊಂಡವುದು ||
ದಾರಿಯಿದು ಸರಿಯೆಂದು ಚಾಪದ |
ನಾರಿಯಿಂ ನುಡಿಯಿಸಿದನೋ ರಘು |
ವೀರನೆಂಬಂತೊಗೆವ ನಿನದವು ಕೇಳಿತಮರರಿಗೆ ||೧೬||

ಕೇಳಿದೊಡನೆಯೆ ಸುರರು ನಭದಲಿ |
ಮೇಳವಿಸಿದರು ಹರಿಯು ರಾಕ್ಷಸ |
ಮೌಳಿಯನು ತರಿವುದನು ನೋಡುವೆವೆಂಬ ಸಂಭ್ರಮದೆ ||
ತಾಳಿದುತ್ಸವದಿಂದೆ ಭುಜಬಲ |
ಶಾಲಿಗಳ್ ಶ್ರೀರಾಮಲಕ್ಷ್ಮಣ |
ರಾಲಲಿತಭುಜಶಿರದೊಳೆಸೆದರು ಪವನಜಾಂಗದರ ||೧೭||

ನೀಲನಬ್ಬರವಖಿಲಸೇನಾ |
ಜಾಲದುಬ್ಬರ ಸಕಲಲೋಕವ |
ಘೇಳಿಸಿತು ಸುಗ್ರೀವನಾಳುಗಳುಬ್ಬಿಸಿಂ ನಡೆಯೆ ||
ಧೂಳು ಮುಸುಕಿತು ಪೊಡವಿ ನವೆದುದು |
ಶೈಲವದಿರಿತ್ತಬುಧಿ ಕಲಕಿತು |
ಕಾಲನೂರೊಳಗಿರದೆ ಪೇಳ್ದನು ಕಾಳ್ಗಿ ಬುದ್ಧಿಯನು ||೧೮||

ಘೋರರಿಪುಸಂಹಾರ ಭುವನೋ |
ದ್ಧಾರ ಪಗೆವರ ಸೂರೆಗಾರ ಫು |
ರಾರಿಸಮಬಲ ಮೇದಿನೀಶ್ವರ ಬಾಳು ರಘುವೀರ ||
ವಾರಿಜೋದ್ಭವಮುಖ್ಯವಿಬುಧಪೊ |
ಳಾರ ಪಡಿಯಿಡಬಹುದು ನಿನ್ನಯ |
ಭೂರಿಭುಜಬಲಕರರೆ ಬಾಳೆಂದಾಲಿದನು ಹನುಮ ||೧೯||

ಆವದಿಕ್ಕಿನೊಳಿಲ್ಲ ಕಪಿವರ |
ರಾವತರುಗಳೊಳಿಲ್ಲ ವಾನರ !
ರಾವಫಲಗಳನುಣ್ಣದುಳಿದರು ಬಾಲದಣ್ಣಗಳು ||
ಆವಗಿರಿಗಳನೇರಿ ಬಳಸರ |
ದಾವನದಿಗಳೊಳೀಸರೆಂದೆನೆ |
ದೇವರಾಘವನುಬ್ಬಿ ನಲಿದನು ನೋಡಿ ಕಪಿಬಲವ ||೨೦||

ಏಹಿತವೀಲವಲವಿಕೆ ಬಲದೊಳ |
ಗಹಿತಸೇನೆಯ ಗೆಲ್ವ ಭಟರಿಗೆ |
ಸುಹಿತವಾಗಿದೆ ಮನಕೆ ನಿಸ್ಸಂಶಯವು ರಿಪುವಧೆಯು ||
ದಹಿಸಿಪೋಪುದು ದೈತ್ಯಸಂತತಿ |
ಮಿಹಿರವಂಶದ ಜಸವು ಪಸರಿಪು |
ದಹಹ ಜೀವೇಶ್ವರಿಯನೀಕ್ಷಿಪೆನೆಂಬ ಸಂಭ್ರಮದೆ ||೨೧||

ಮುಂದೆ ಪಯಣವ ಬೆಳಸಿ ಕಪಿಗಳ |
ಸಂದಣಿಯ ಕೂಡುತ್ತೆ ನಿಲ್ಲದೆ |
ಬಂದು ಮೆರೆವ ಮಹೇಂದ್ರಪರ್ವತದಗ್ರ ಭಾಗದಲಿ ||
ನಿಂದು ನಾನಾದಿಶೆಯನೀಕ್ಷಿಸು |
ತೊಂದುತಾನಂದವನು ದಕ್ಷಿಣ |
ಕಂದು ತಿರುಗಿನೃಪಾಲನಂಜಿದನೇನು ಹದನೆಂದು ||೨೨||

ಸಿರಿಯನೆನ್ನಯ ಮುದ್ದಿನಣುಗಿಯ |
ನಿರದೆ ಕೈವಿಡಿದಾಳಲಾರದೆ |
ಪೆರರಿಗೊಪ್ಪಿಸಿ ಬರ್ಪ ಹರಿಗಿದು ತಕ್ಕುದೆಂದೆಣಿಸಿ ||
ಕೆರಳಿ ಕರಗಳೊಳಪ್ಪಳಿಪವೋ |
ಲ್ತುರತರದೆ ನೆಗೆದೆಳ್ದು ಬೀಳ್ವಾ |
ತೆರೆಗಳಿಂ ಭಯಗೊಳಿಪ ಸಾಗರಮೆಸೆದುದಿದಿರಿನಲಿ ||೨೩||

ಏನು ಹದನಿದಕಕಟ ತನ್ನಾ |
ಮಾನಿನೀಮಣಿದರ್ಶನೋತ್ಸವ |
ಕೇನು ಭಂಗವೊ ಕಡಲ ದೆಸೆಯಿಂದೇನನೆಸಗುವೆನು ||
ಕಾಣದೆನಗಿನ್ನಿದಕುಪಾಯವು |
ವಾನರಾಧೀಶ್ವರನೆ ನೀನಿದ |
ಕೇನನೆಂಬೈ ಮುಂದೆ ಪಯಣವ ನಿಲಿಸು ನೀನೆಂದು ||೨೪||

ದೇವನಾಣತಿಯಿಾಯಲಹುದೆಂ |
ದಾವನೇಚರರರಸು ನೀಲಂ |
ಗೀವಿಧಾನವನೆಲ್ಲ ಬೆಸಸಿದೊಡವನು ಸಾರಿಸುತೆ ||
ಆವನಧಿತಟದೊಳಗೆ ಪಡೆಗಿ |
ಲ್ಲಾವಭೀತಿಯುಮೆನ್ನಲಿಳಿಯಿಸಿ |
ಕಾವಲಿಗೆ ಮೈಂದವನ ನಿಲ್ಲಿಸಿಯಿಂತು ಸುಖದಿನಿರೆ ||೨೫||

ಸುದ್ದಿಯಿದು ತಾನೊಡನೆ ಪರ್ಬಿ |
ತ್ತದ್ದಿದನು ಭಯಸಾಗರದೆ ತ |
ನ್ನದ್ದುರುಟತನದಿಂದವಿಂತಾಯ್ತೆನುತೆ ರಾವಣನು ||
ಬುದ್ಧಿಯುತರನಮಾತ್ಯಮುಖ್ಯರ |
ನಿದ್ದವೊಲೆ ಕರೆತರಿಸಿ ನಡೆದಾ |
ವಿದ್ಯಮಾನವನರಿಪಿ ಮುಂದಿದಕೇನನುಸಿರುವಿರಿ ||೨೬||

ಅಂದು ಕಪಿಯೊಂದಿಲ್ಲಿಗಿರದೈ |
ತಂದು ನಮ್ಮಯಶೋಕನಂದನ |
ದಂದಗಿಡಿಸುತೆ ಸೀತೆಯನು ಕಂಡುತ್ಸವದೆ ಪೆರ್ಚಿ ||
ನಂದನನನಕ್ಷಯಕುಮಾರನ |
ಕೊಂದು ದಾಳಿಟ್ಟೆಮ್ಮ ನಗರಿಯ |
ಮಂದಿರಂಗಳನಗ್ನಿಗಾಹುತಿಯಿತ್ತು ಜಾರಿದುದು ||೨೭||

ಇಂದು ರಾಘವನಾ ಮರುತ್ಸುತ |
ನಂದದೆಸಿತೋಕೋಟಿವಾನರ |
ವೃಂದದೊಡನೈತಂದು ಕಡಲಾಚೆಯಲಿ ದಂಡಿಳುಹಿ ||
ಮುಂದೆ ಜಲಧಿಯ ದಾಂಟಿ ಲಂಕೆಗೆ |
ಬಂದು ಮುತ್ತಿಗೆಯಿಂದೆ ನಮ್ಮನು |
ಬಂಧನಕ್ಕೊಳಪಡಿಸಿ ಕೊಲ್ಲಲ್ಕೆಂದು ಕಾದಿಹನು ||೨೮||

ಏನನೆಂಬಿರುಪಾಯವಿದಕಿ |
ನ್ನೇನು ರಾಘವಚಂಡಮಾರುತ |
ವೇನನೆಸಗದು ಮುಳಿದು ತೀಡಿದೊಡಸುರರುಳಿಯುವರೇ ||
ಆನಲಮ್ಮುವರುಂಟೆ ಜಲಧಿ |
ತ್ರಾಣವೇನಹುದಾತನಿದಿರೊಳ |
ನೂನಶಕ್ತ್ಯಂಗಂಜಿ ಬಟ್ಟೆಯ ಬಿಟ್ಟುಕುಡದಿಹುದೆ ||೨೯||

ವಿಷಮಕಾರ್ಯವಿದೊದವಿಹುದು ನ |
ಮ್ಮ ಸುರಬಲವೆರಸಿರ್ಪ ಲಂಕೆಯ |
ಜಸವು ಕುಂದದ ತೆರದೆ ಕಾವುದು ನಿಮಗೆ ಸೇರಿಹುದು ||
ಅಸಮವೀರರಭಿಜ್ಞರಿದಕೀ |
ಗುಸಿರಿವಾಲೋಚನೆಯಸೆನ್ನುತೆ |
ಬೆಸಸಲದಕಂದಾ ಪ್ರಹಸ್ತನು ನುಡಿದನೀತೆರನ ||೩೦||

ಜೀಯ ಸೋಂಕಿತಿದೇಕೆ ಭೀತಿಯ |
ಜೇಯನಲ್ಲವೆ ನೀನು ಮನಕಿಂ |
ತಾಯಸಂಗುಡಲಾರ್ಪರೇ ವಾನರರುಮಾನರರು ||
ಸಾಯಕದೊಳತಿನಿಪುಣರದ್ಭುತ |
ಕಾಯಬಲರೆಮ್ಮಲ್ಲನೇಕರ |
ಪಾಯವರಿಯದ ಶೂರರಿರಲಿಂತೇಕೆ ಚಿಂತಿಪುದು ||೩೧||

ಕಳುಹೆ ನೀನಿವರೊಳಗದೊರ್ವನ |
ನೆಳೆದು ತರ್ಪನು ನಿನ್ನ ಬಳಿಗಾ |
ಹುಲುನರೇಂದ್ರರನವನು ವಾನರಸೇನೆಯೊಡನೀಗ ||
ಬಳಿಕ ನಿನ್ನಯ ಮನಕೆ ತೋರ್ದಂ |
ತುಳುಹು ಮೇಣ್ಕೊಲು ದಿವ್ಯಚಿತ್ತದೊ |
ಳಳುಕಲೇಕೀಯಲ್ಪಕಾರ್ಯಕ್ಕೆಂದನಾಸಚಿವ ||೩೨||

ದೇವ ನಿನಗಿದಿರುಂಟೆ ಲೋಕದೆ |
ದೇವಕಿನ್ನರನಾಗಯಕ್ಷರು |
ಜೀವಭಯದಿಂ ನಿನ್ನ ನಾಮವನೆತ್ತದಡಗಿಹರು ||
ಭೂವಿನುತವಹ ಶಿವನ ಗಿರಿಯನ |
ದಾವನೈ ತಾನೆತ್ತಿದಾತನ |
ದಾವನೈ ತಾನಾಕುಬೇರನ ಗೆಲ್ದ ಪಟುಭಟನು ||೩೩||

ಈವಿಚಾರವನೆಲ್ಲವನು ಮರೆ
ದೀವನೇಚರಬಲಕೆ ಬೆದರುತೆ |
ಕೋವಿದನೆ ನೀನಿಂತು ನುಡಿವುದೆ ತೆಗೆಯದಂತಿರಲಿ ||
ಸಾವಕಾಶತೆಗೆಯ್ಯದೆನಗಿಂ |
ದೀವಿರೋಧಿಗಳಸುವ ತೆಗೆಯಲು |
ದೇವ ನೀಂ ಬೆಸನಿತ್ತೆಯಾದೊಡೆ ತೋರ್ಪೆನತಿಶಯವ ||೩೪||

ಮರೆತೆಯೇನೈಯಿಂದ್ರಜಿತ್ತುವು |
ಸುರರ ಸೇನಾಂಬುಧಿಯ ಕಲಕಿಂ |
ದಿರನನೀಲಂಕೆಯಲಿ ಸೆರೆಯೊಳಗಿಟ್ಟ ಸಂಗತಿಯ ||
ಕರವ ಜೋಡಿಸುತಜನು ಬೇಡಲು |
ಕರುಣದಿಂ ಬಿಡುಗಡೆಯ ಗೈಯನೆ |
ಸುರಪಜಿತ್ತುಗೆ ರಾಮನುಂ ಕಪಿಬಲಮುಮೇನಿದಿರೆ ||೩೫||

ಕೇಳುತಿರ್ದನು ಸಚಿವಮುಖ್ಯನ |
ಕಾಲಕೊಪ್ಪುವುದೆನಿಪ ನುಡಿಗಳ |
ನಾಳಿದನ ಮನಮೆಚ್ಚಲನೃತವನೊರೆವನಿವನೆಂದು ||
ತಾಳಿದನು ರೋಷವನು ಮನದೊಳ |
ಗಾಳಿನಂದವನರಿಯದಾಡುವ |
ಬೀಳುನುಡಿಗಳಿವೇತಕೆಂದನು ವರವಿಭೀಷಣನು ||೩೬||

ಅಣ್ಣ ನಿನ್ನಿದಿರಿನಲಿ ಸುಮ್ಮನೆ |
ಬಣ್ಣಗಟ್ಟಿದ ಮಾತನಾಡುವ |
ರನ್ನು ನಂಬಿಯೆ ನಿನ್ನ ಬುದ್ಧಿಯ ನೂಕಿಕಳೆಯದಿರು ||
ಉನ್ನತಾನ್ವಯದಲ್ಲಿ ನೀನು |
ತ್ಪನ್ನನಾಗಿ ಸಮಸ್ತಶಾಸ್ತ್ರಗ |
ಳನ್ನು ತಿಳಿದೀಪೊಳ್ಳುನುಡಿಗಳಿಗೀವುದೇಸೆಡೆಯ || ೭||

ಹತ್ತಿರಿರ್ಪವರೆಲ್ಲ ನಿನ್ನಯ |
ಚಿತ್ತದನುವೆಂತೆಂಬುದನು ತಿಳಿ |
ದೊತ್ತುವರು ತಾವದನೆ ಒಪ್ಪಿಗೆಯಹುದು ಸರಿಯೆನುತ ||
ಸತ್ವವಿಹುದಿವರುಕ್ತಿಯೊಳಗೆಂ |
ದೊತ್ತಿನೂಕಿ ವಿವೇಕವನು ನೀಂ |
ವಿುತ್ತುವಿಗೆ ಬಾಯ್ದುತ್ತದಾಗದಿರಣ್ಣ ಸಾರಿದೆನು ||೩೮||

ಏಸೊ ದೇವಾಸುರರ ಪಡೆಯಂ |
ಜೈಸಿಯವರರಸಿಯರ ಕೂಡಿದ |
ಸಾಸಿ ನೀನಿಂದೇಕೆ ರಾಮನ ಪಟ್ಟಮಹಿಷಿಯನು ||
ಮೋಸವೆಸಗಿಯೆ ತಂದೆ ನಿನಗಾ |
ಭಾಸುರಾರ್ಕಕುಲೇಂದ್ರನಿದಿರಿಸೆ |
ಗಾಸಿಯಾನುವೆನೆಂಬ ಭಯವಲೆ ಮುಚ್ಚುಮರೆಯೇನು ||೩೯||

ಇಂತು ಹೃದಯದೊಳಳುಕು ನೆಲಸಿರ |
ಲೆಂತು ಜಯವಹುದರಸ ಲಕ್ಷ್ಮೀ |
ಕಾಂತನಾತನು ನಿನಗೆ ಸಿಕ್ಕುವನೆಂದು ಬಗೆಯದಿರು ||
ಅಂತಕೋಪಮುಖರನು ಸೆಣಸು |
ತ್ತಂತು ದುರ್ಗತಿವಡೆದನೆಂಬುದ |
ನಿಂತು ಕಾಣದನಂತೆ ಕೆಣಕಿಯೆ ಕಿಡುವುದನುಚಿತವು ||೪೦||

ನೂರುಯೋಜನದಬುದಿ ಗೋಷ್ಪದ |
ವಾರಿಯಾಯ್ತೆನಲದನು ಲಂಘಿಸಿ |
ಭೂರಿಭಯವನು ಬೀರಿ ರಾಕ್ಷಸಕುಲವ ತಾಂ ಸವರಿ ||
ಊರಿಗಗ್ನಿಯನೂರಿ ಬೇಯಿಸಿ |
ಕಾರಿಯವ ತನ್ನದನು ಸಾಧಿಸಿ |
ವೀರರಾಘವನೆಡೆಗೆ ಮರಳನೆ ಹನುಮ ಘನಮಹಿಮ ||೪೧||

ದೂತಕಾರ್ಯಕ್ಕೈದಿದಾತನೊ |
ಳೀತೆರದ ಕಟ್ಟದಟು ನೆಲಸಿರ |
ಲೀತನಿಗೆ ಮೇಲ್ಪಟ್ಟಪದವಿಯೊಳಿರ್ಪರದಟೆನಿತೊ ||
ಆತಗಳ ಕಟ್ಟಾಳ್ವ ಭಾಸ್ಕರ |
ಜಾತನಳವಂಗದನ ಬಲವಿ |
ನ್ನೇಶೆರನೊ ನಾವಿವರಿಗೀಡಲ್ಲಣ್ಣ ದುಡುಕದಿರು ||೪೨||

ನಿನ್ನ ಭಯದಿಂ ಕೆಣಕಿ ಹನುಮನ |
ಮುನ್ನ ಕೆಲಬರು ಮಡಿದರಲ್ಲದೆ |
ಮನ್ನಣೆಯ ನಿನ್ನೀಭಟರ್ಕಳ ಕಂಡರಾರಂದು ||
ತನ್ನ ದೇಶವು ತನ್ನ ದೊರೆಯೆಂ |
ದೆನ್ನುವಭಿಮಾನಿಯನೆ ಪಡೆಯದ |
ನಿನ್ನ ರಾಜ್ಯವು ನಿಲುವ ಬಗೆಯೆಂತಿದನು ಚಿಂತಿಸೆಯ ||೪೩||

ಕಪಿಗಳೇ ನಮಗಧಿಕರೆಂದೆನೆ |
ತಪನಕುಲಜರ ರಾಮಲಕ್ಷ್ಮಣ |
ರಪರಿಮಿತಶೌರ್ಯಾಗ್ನಿಗಾಹುತಿಯಾಗದುಳಿಯುವೆವೆ ||
ಚಪಲಮತಿಯನು ನೀಗಿ ಸನ್ನೊಳು |
ಕುಪಿತನಾಗದೆ ರಾಮಚಂದ್ರನ |
ಕೃಪೆಯ ಸಾಧಿಪುಪಾಯವರಿವುದು ನಿನಗೆ ನೀತಿಯಿದು ||೪೪||

ಅಣ್ಣ ನೀನೇನಜ್ಞನೇ ತಾ |
ನುಣ್ಣಬಾರದ ಕೂಳಿದೆನ್ನುತೆ |
ಸನ್ನುತಾಂಗಿಯ ಕೂಡಲಳುಕುವೆ ಸತಿಯ ಜಾನಕಿಯ ||
ಮುನ್ನ ನೀಂ ಪಿಡಿತಂದ ಸುದತಿಯ |
ರನ್ನು ಸೇರಲ್ಕಿಂತು ಬಗೆದೆಯ |
ಭಿನ್ನವಾದುದು ಭಾವವಿವಳೊಳಗೇತಕೆಂದರಿಯಾ ||೪೫||

ಆದಿನಾರಾಯಣನೆ ರಾಮನು |
ಮೇದಿನೀಸುತೆಯಾದಿಲಕ್ಷ್ಮಿಯು |
ಭೇದಭಾವನೆಗೆಡೆಯದೆಲ್ಲಹುದಾದಿಮಾತೆಯೊಳು ||
ಈದುರಾಗತಮತಿಯನುಳಿದಿ |
ನ್ನಾದಯಾಂಬುಧಿರಾಮಚಂದ್ರನ |
ಪಾದಪದ್ಮಕ್ಕೆರಗಿಯೊಪ್ಪಿಸಿ ಸೀತೆಯನು ಬದುಕು ||೪೬||

ತಾಕಿದೊಡನೆಯೆ ನುಡಿಯು ಕಿವಿಗೆ ಶ |
ಲಾಕೆ ನಟ್ಟಂತಾಗಲಾಖಳ |
ಲೋಕಕಂಟಕರಾವಣೇಶನು ಖತಿಯನೊಡನಾಂತು ||
ಸಾಕುಮಾಡೆಲೊ ತಮ್ಮ ನಮ್ಮನು |
ನೂಕಿ ಕಳೆವೀಕೀಳುನುಡಿಗಳ |
ನೇಕೆ ಗಳಹುವೆ ತೋರ್ದ ಪರಿಯೊಳಗೆಂದು ಗರ್ಜಿಸುತೆ ||೪೭||

ಸುತ್ತ ನೋಡಲ್ದನುಜರರಸನು |
ಕತ್ತಿಯಾಳುಗಳೊಡನೆ ನಿಲ್ಲುತೆ |
ಚಿತ್ತದನುವೇನಾಜ್ಞೆಯೇನದರಂತೆ ನಡೆಸುವೆವು ||
ಮಿತ್ತುಸಮನಿಸಿದಾತಗಲ್ಲದೆ |
ಮತ್ತದಾವಂಗೀಪರಿಯ ನುಡಿ |
ಯುತ್ತರವ ನೀನಿತ್ತೊಡಿವನಸುಗೊಳ್ವೆವೀಗಳೆನೆ ||೪೮||

ತಮ್ಮ ಬಾರೈ ಕುಂಭಕರ್ಣನೆ |
ನಮ್ಮಳವನೀನರಿಯದವನೇ |
ನೊಮ್ಮೆ ಮುಳಿದಾಂ ಸೆಣಸೆ ನಿಲುವರೆ ರಾಮಲಕ್ಷ್ಮಣರು ||
ಸಮ್ಮತವೆ ನಿನಗೀವಿಭೀಷಣ |
ನುಮ್ಮದದೆ ನುಡಿವುಕ್ತಿ ರಿಪುವನು |
ನೆಮ್ಮಿ ಬದುಕೆಂದೆಮಗೆ ಪೇಳ್ದಪನೀಗಳೊಕ್ಕಣೆಯ ||೪೯||

ವಿಹಿತವಾವುದು ನಿನ್ನ ಮನದೊಳ |
ಗಹಿತರನು ಶರಣೆಂಬುದೋ ವಿ |
ಗ್ರಹದೆ ನಿಗ್ರಹಿಸುವುದೊ ಪೇಳೆಂದಸುರಪತಿ ನುಡಿಯೆ ||
ಕುಹಕತನದಿಂ ಕೆಣಕಿ ಭುಜಗನ |
ಸಹಿಸಿಕೊಳ್ಳೆಂದೆರಗೆ ಬಿಡುವುದೆ |
ಸುಹಿತವೆನಗೆಂದಹಿತನಿಗ್ರಹವೆಂದು ವಿನಮಿಸಿದ ||೫೦||

ಒಪ್ಪಿತೆನ್ನಯ ಮನವು ದುಡುಕಿಂ |
ತಪ್ಪನೆಸಗಿದಬಳಿಕ ವೈರಿಯೊ |
ಳೊಪ್ಪಿಕೊಂಡದನವನ ಸೇರ್ದೆಂ ಒದುಕುವರೆ ಭಟರು ||
ಬಪ್ಪುದಲೆ ಸಾವಿಂದೊ ನಾಳೆಯೊ |
ತಪ್ಪಿ ಪೋಪುದೆ ತಿಳಿದುಮಿಂತಿದ |
ನಪ್ಪಲೇತಕಕೀರ್ತಿಯನು ಚಲದಿಂದೆ ಕಾದುವೆನು ||೫೧||

ದುರುಳರಗ್ರಣಿಯಿಾವಿಭೀಷಣ |
ನರಿಯ ಸೇರ್ದೂರೆ ಬದುಕಲಿವನಿಗೆ |
ಮೆರೆವ ಲಂಕಾಧೀಶಪದವಿಯೆ ತಪ್ಪದಪ್ಪುದಲೆ ||
ಹರಣವುಳಿದಿರಲಾವುವಿಾತನ |
ನೆರೆಯನನುಸರಿಸುತ್ತೆ ಬಾಳ್ವೆವು |
ತೆರಳಲಿವನಿನ್ನೆಮ್ಮನುಳಿದಿಂದೆಂದನಸುರೇಂದ್ರ ||೫೨||

ಶರಿಯು ಕಾಯವ ತೊಳೆಯೆ ದೂಳಿಯ |
ನೆರಚಿ ಕೊಳ್ವವೊಲೊಲವಿನಿಂದವೆ |
ಪಿರಿದು ಸನ್ಮಾನಿಸಲು ಬಿಡನಾಜನ್ಮಜಾತಿಕಪಟವನು ||
ದುರುಳಗೆನಿತುಪಕೃತಿಯ ಗೈದೊಡ |
ಮಿರದೆ ಪೋಗನೆ ಕಷ್ಟದಶೆಯೊಳ |
ಗರರೆ ಕುಲಘಾತಕನನೀಗಳೆ ತೊಲಗಿಸುವುದೆನಲು ||೫೩||

ಕೇಳಿದನು ಕಠಿನೋಕ್ತಿಯನು ಕ |
ಣ್ಣಾಲಿಯಲಿ ನೀರ್ದುಂಬಿ ಸನ್ಮತಿ |
ಶಾಲಿ ನಿಜಮಂತ್ರಿಗಳನೊಡಸೇದಾ ವಿಭೀಷಣನು ||
ಮೇಲೆ ಗಗನಕ್ಕಾಗ ಪಾರು |
ತ್ತಾಲಿದನು ಕೇಳಣ್ಣದೇವನೆ |
ಖೂಳರೊಡನಿಂದಾಡಿ ಕೆಡದಿರು ಕೇಳು ಬುದ್ಧಿಯನು ||೫೪||

ಹಿರಿಯ ನೀನೆನಗಂತುಮಲ್ಲದೆ |
ದೊರೆಯು ನೀನಹೆ ನೀನು ನಿಂದಿಸೆ |
ಕೊರತೆಯೆನಗಿಲ್ಲಿನಿಸುಮಾದೊಡಮುಚಿತಮಾರ್ಗವನು ||
ತೊರೆದು ಸೀತಾರಾಮನನು ಮಿಗೆ |
ಜರಿದು ನುಡಿವೀನಿನ್ನ ಸಚಿವರೊ |
ಳಿರಿಸಿ ನಂಬುಗೆಯನ್ನು ದುರ್ಮಾರ್ಗದಲಿ ಸಂಚರಿಸಿ ||೫೫||

ಕಾಲನರಮನೆಗತಿಥಿಯಪ್ಪುದ |
ನಾಲಿಯಲಿ ನಾಂ ನೋಡಲಾರದೆ |
ಕಾಲಿಗೀಪರಿ ಬುದ್ಧಿವೇಳ್ದೆನು ತಾಳುವುದು ನೀನು ||
ಮೇಲುಬುದ್ಧಿಯು ನಿನ್ನೊಳಿರಲೀ |
ಗೇಳು ರಾಘವನಂಘ್ರಿಕಮಲಕೆ |
ಬೀಳು ರಕ್ಷಿಪನೆಂದು ತೆರಳಿದನಾ ವಿಭೀಷಣನು ||೫೬||

ಅಂತರಿಕ್ಷದೊಳಾವಿಭೀಷಣ |
ನಿಂತು ತೆರಳಿ ಪಯೋನಿಧಿಯನೋ |
ರಂತೆ ಲಂಘಿಸಿ ರಾಮಚಂದ್ರನ ಸೇನೆಯಿರ್ಪೆಡೆಗೆ ||
ಚಿಂತೆಯನು ನೀಗಾಡಿ ಸೀತಾ |
ಕಾಂತನಾಮವ ಪಾಡುತ್ತೈತರ |
ಲಿಂತು ಬರ್ಪವರಾರೆನುತೆ ಸುಗ್ರೀವಕಪಿವರರು ||೫೭||

ಮನದೊಳಾಲೋಚಿಸಿ ವಿಲೋಕಿಸಿ |
ಯನುಪಮಿತಗಾತ್ರರನು ತಪ್ಪದು |
ದನುಜರಿವದಿರು ನಮ್ಮ ಸೀಗಳು ಸದೆಯಲೈತಹರು ||
ಎನುತವರು ಕಲಿಯೇರಿಯೊಡನಂ |
ದನುವರಕೆ ಸನ್ನದ್ಧರಾಗ |
ಲ್ಕನಯಪರನಾ ದಾವಿಭೀಷಣನರಿದನವರನುವ ||೫೮||

ನಿಂದನಾ ಕಾಶದಲಿ ಕೈಮುಗಿ |
ದೆಂದನತಿಗಂಭೀರವಾಕ್ಯವ |
ನಿಂದು ರಾವಣನನುಜನೈದಿಹೆನಾರ್ತನೆಂದೆನಿಸಿ ||
ಒಂದಿಹೆನು ಪೆಸರನು ವಿಭೀಷಣ |
ನೆಂದು ಮಂತ್ರಿಗಳಿವರು ತನಗೈ |
ತಂದೆವಿಲ್ಲಿಗೆ ರಾಮಚಂದ್ರನನಿಂದು ಮರೆವುಗಲು ||೫೯||

ಕಳವಿನಿಂ ಶ್ರೀರಾಮನರಸಿಯ |
ನೆಳೆದು ತಂದುದು ನಿನಗೆ ತಕ್ಕುದೆ |
ಕಳುಹಿ ನೀನಿಂದಿವಳನಾತನ ಸೇರಿ ಬದುಕೆಂದು ||
ತಿಳುಹಲ್ಲಾನದಕಾದಶಾಸ್ಯನು |
ಚಲವ ಬಿಡೆನೆಂದಿನಿಸುಮಳುಕದೆ |
ಬಲುಹಿನಿಂ ಬಿಡದೆನ್ನನಟ್ಟಿದೊಡಿಲ್ಲಿಗೈದಿದೆಸು ||೮೦||

ಸತಿಯನಣುಗರನುಳಿದು ನಿಲ್ಲದೆ |
ಗತಿವಿಹೀನನು ಬಂದೆನಿಲ್ಲಿಗೆ |
ಹಿತರನಾರುಮನರಿಯೆನಾಂ ರಾಘವನೆ ಗತಿಯೆನಗೆ ||
ಮತಿಯುತರೆ ನೀವಿಂದು ನನಗಾ |
ಕ್ಷಿತಿಪನಂಘ್ರಿಯ ತೋರೆ ನಿಮ್ಮುಪ |
ಕೃತಿಯ ಮರೆಯದೆ ನೆನೆಯುತಿರ್ಪೆನು ಜೀವವಿಹವರೆಗೆ ||೮೧||

ಕೇಳಿ ರವಿಸುತನದನು ಬೇಗ ಕೃ |
ಪಾಳುವಿರ್ದೆಡೆಗೈದಿ ರಾಕ್ಷಸ |
ಮೌಳಿ ರಾವಣನನುಜನೆನಿಸಿರ್ಪಾವಿಭೀಷಣನು ||
ಖೂಳನೆಂದಗ್ರಜನ ತಾನುಳಿ |
ದೋಲಗಿಸಲಿದೊ ನಿಮ್ಮನೈದಿಹ |
ನಾಲಿಪುದು ಚಿತ್ತವಿಸಿ ತನ್ನದನೊಂದುಬಿನ್ನಪವ ||೮೨||

ಕ್ರೂರಕರ್ಮಿಗಳಸುರರವರೊಳು |
ವೈರಿರಾವಣನನುಜನೀತನು |
ತೋರಿ ಮಿಗೆ ನಂಬುಗೆಯ ಮೊದಲೊಳು ಬಳಿಕ ಮೋಸದೊಳು ||
ಕಾರಿಯವ ಗೆಲಲೆಂದು ಬಂದಿಹ |
ನಾರೊ ನಾಲ್ವರು ಜತೆಯೊಳಿರ್ಪರು |
ದಾರಗುಣವಿಹುದಿವನೊಳೆಂದೆಲೆದೇವ ಬಗೆಯದಿರು ||೮೩||

ಮೋಸದಿಂದಮೆ ನಮ್ಮ ಕೊಲಲೆಂ |
ದಾಸುರಾರಿಗಳರಸನಟ್ಟಲು |
ವೇಸವನು ತಾಳ್ದಿಂತು ಬಂದಿರವೇಳ್ಕುಮಿದು ದಿಟವು ||
ದಾಸನಾದೆನಗಾಜ್ಞೆಯಿತ್ತೊಡ |
ದೇಸರವರೀದನುಜರಿವರೆ |
ಳೈಸು ಮಿಡುಕದ ತೆರದೊಳಸುವನು ಸೂರೆಗೊಳ್ಳುವೆನು ||೮೪||

ದಿನಪಸುತನಿಂತೆನಲು ಕೇಳ್ದಾ ।
ಮನುಕುಲಾಗ್ರಣಿ ಮೆಚ್ಚಿದವೊಲಿ ।
ರ್ದನಿಲಜಾದಿಕಪೀಂದ್ರರಾನನಗಳನು ನೋಡುತ್ತೆ ॥
ತನಗೆ ಹಿತವನು ಬಯಸಿಯಿಾತನು ।
ವಿನಮಿಸಿದನಿಂತಿದುವೆ ಸತ್ವವು ।
ವಿನುತಮತಿಗಳೆ ನಿಮ್ಮ ಬಗೆಯೇನೊರೆವುದೀಗೆನಲು ॥೬೫॥

ಹೇಳಿದರು ತಮತಮಗೆ ತೋರ್ದುದ ।
ನಾಳಿದನ ಸಮ್ಮುಖದೆ ಕಪಿವರ ।
ರಾಳುಗಳೊಳತ್ಯಧಿಕನನಿಲಜನೊರೆದನಾಬಳಿಕ ॥
ಕೇಳುವುದು ಸರ್ವೇಶ ನಿನಗೇಂ ।
ಪೇಳಬಲ್ಲೆವೆ ಮಂತ್ರವನು ನಿ ।
ನ್ನೊಳಿಗಿಗರಾವೊಲ್ದು ಸೇವುವ ಶಿರದೊಳಾಂತಪೆವು ॥೬೬॥

ದೇವರಾಜ್ಞಾಪಿಸಲು ತನ್ನಯ ।
ಭಾವದಾಶಯವನ್ನು ಪೇಳ್ವೆನು ।
ಕೋವಿದನೆ ದಾಸನನು ಮನ್ನಿಸಿಯಾಲಿಸುವುದಿದನು ॥
ರಾವಣಾಸುರಸನುಜನೆನಿಸುವ ।
ನೀವಿಭೀಷಣನತಿವಿಚಕ್ಷಣ ।
ನಾವುದುಂ ಭಯವಿಲ್ಲ ನಮಗಿವನಲ್ಲನುಗ್ರಹಿಸು ॥೬೭॥

ಅಂದು ಸಭೆಯೊಳಗೆನ್ನ ಕೊಲ್ಲ ।
ಲ್ಬಂದ ದನುಜರ ಗದರಿಗರ್ಜಿಸಿ ।
ಯೊಂದುಪಾಯವನಗ್ರಜಂಗೊರೆದೆನ್ನನುಳುಹಿದನು ॥
ಎಂದುಮರಿಯದ ಶತ್ರುವೆನಿಸಿಯೆ ।
ದಂದುಗವ ಗೆಯ್ದೆನ್ನೊಳಾದರ ।
ವಿಂದೆ ನಡೆದುದೆ ಸುಜನನೀತನೆನಲ್ಕೆ ಕುರುಪಲ್ತೆ ॥೬೮॥

ಪೆರರೊಳಿಹ ಗುಣದೋಷಗಳ ನಿ ।
ರ್ಧರಿಸಿ ಗುಣಿಯನು ಸೇರಿ ದೋಷಿಯೊ ।
ಳಿರಕಗೊಳ್ಳದೆ ದೂರಸಾರಸೆ ಜಾಣನಾದವನು ॥
ಪರಮಸದ್ಗುಣನಿಧಿ ಪರಾಕ್ರಮ ।
ಶರಧಿ ನೀನೆಂದರಿತು ನಿನ್ನನು ।
ಶರಣುಹೊಕ್ಕನು ಬಿಟ್ಟನಸುರಾಧಿಪನ ಖಳನೆಂದು ॥೬೯॥

ವಾಲಿಯನು ಸಂಹರಿಸಿ ರಾಜ್ಯದ |
ಮೇಲೆ ಸುಗ್ರೀವನನು ನಿಲ್ಲಿಸಿ |
ಪಾಲಿಸಿದ ತೆರದಿಂದೆ ರಾಘವನನುರವೈರಿಯನು ||
ಕೋಲ ಮೊನೆಯಿಂದಿರಿದು ತನ್ನನು |
ಮೇಲೆನಿಪ ಲಂಕಾಧಿಪತ್ಯದೆ |
ಮೇಳವಿಪನೆಂಬಾಶೆ ಬಲಿದಿಹುದೀತನಲಿ ನೋಡೆ ||೭೦||

ಇಂತು ಘನತರವಾದ ರಾಜ್ಯದ |
ಚಿಂತೆಯಿಂ ಶರಣೆಂದು ಬಂದವ |
ನಂತರಂಗವಿಶುದ್ಧನಾಗಿಯೆ ನಡೆದುಕೊಳ್ಳುವನು ||
ಸಂತಸದೊಳೀತನನು ಕೈವಿಡಿ |
ದಂತರಾತ್ಮನೆ ಸಲಹೆ ರಾಕ್ಷಸ |
ರಂತರವನರಿಯಲ್ಕೆ ಸಾಧನವಹನು ನಮಗಿವನು ||೭೧||

ಎಂದುಮಾರುತಿ ನುಡಿಯೆ ರಾಘವ |
ನಂದು ಮೆಚ್ಚುತ್ತಿಹುದು ಬರಹೇ |
ಳೆಂದೊಡವನೈತಂದು ವಂದಿಸಿ ನೃಪತಿಗಿಂತೆಂದ ||
ಮಂದಮತಿಯಾದಣ್ಣನಿರವೆನ |
ಗೆಂದವಾಗದೆ ಬಂದೆನಿಲ್ಲಿಗೆ |
ತಂದೆ ರಕ್ಷಿಸನಾಥಬಂಧುವೆ ಕಾವರಿಲ್ಲೆನಗೆ ||೭೨||

ರಾವಣಾನುಜನೆನಗೆ ಪೆಸರಿಹು |
ದೈ ವಿಭೀಷಣನೆಂದು ನನ್ನಯ |
ಭಾವಭಕ್ತಿಯು ವಿಷ್ಣುದೇವನೊಳಧಿಕವಾಗಿಹುದು ||
ದೇವ ನಿನ್ನ ಚರಿತ್ರೆಯಾಲಿಸಿ |
ಪಾವನಾತ್ಮಕ ಹರಿಯೆ ನೀನೆಂ |
ಬೀವಿವೇಕವನಾಂತು ಬಂದೆನು ನಿನ್ನ ಸನ್ನಿಧಿಗೆ ||೭೩||

ಇಂದುಮೊದಲಾಗರಸ ನಿನ್ನನೆ |
ಹೊಂದಿ ಬಾಳ್ವೆನು ನಿನ್ನನುಜ್ಞೆಗೆ |
ಕುಂದುಕೊರತೆಗಳೀಸುಮೈದದ ತೆರದೆ ನಡೆದಪೆನು ||
ಮುಂದೆ ಲರಕೆಗೆ ಮುತ್ತಿಗೆಯನನು |
ವಿಂದಮೊಡರಿಸಿಯಾನಿಶಾಚರ |
ವೃಂದವನು ಸದೆಬಡಿದು ತೋರ್ಪೆನು ಭಕ್ತಮಾಳ್ಪನುವ ||೭೪||

ಎಂದು ನುಡಿದವಿಭೀಷಣನನೊಲ |
ವಿಂದೆ ತಕ್ಕೈಸುತ್ತೆ ನಿಜ ನಿ |
ನ್ನಿಂದೆ ನಮ್ಮಯ ಕಾರ್ಯಸಾಧನಮಹುದು ತಪ್ಪದಿದು ||
ತಂದೆಯೇಪರಿಯಿಂದೆ ತನ್ನಯ |
ನಂದನನ ಪೊರೆದಪನೊ ಆಪರಿ |
ಯಿಂದೆ ನಿನ್ನನು ಪೊರೆವೆನಂಜದಿರೆಂದು ರಾಘವನು ||೭೫||

ಕರೆದು ಸೌಮಿತ್ರಿಯನು ಬೇಗದೆ |
ತರಿಸಿ ಸಾಗರಜಲವ ಲಂಕೆಯ |
ಸಿರಿಯ ಸಾಮ್ರಾಜ್ಯಾಭಿಷೇಕವನೀವಿಭೀಷಣಗೆ ||
ನೆರೆದಸಮ್ಮೇಸೇನೆಯಿದಿರೊಳು |
ಭರದೆ ತಕ್ಕಂತೆಸಗೆನಲು ಸಡ |
ಗರದೆ ಲಕ್ಷ್ಮಣನಾತನಿಗೆ ಕಟ್ಟಿದನು ಪಟ್ಟವನು ||೭೬||

ಜಯಜಯೆಂದುದು ನಿಖಿಲವಾನರ |
ಚಯವು ತಮಗಿವನತಿಸಹಾಯನು |
ಭಯವದಿನ್ನೆಮಗಿಲ್ಲ ಕಾಣ್ಬೆವು ಲೋಕಮಾತೆಯನು ||
ದಯೆಯೊಳೀತನು ಕಡಲ ದಾಂಟಿಸೆ |
ಬಯಸೆವಿತರವನಿನ್ನು ತಡೆಯದೆ |
ಹೊಯಿದು ದಶಕಂಠನನು ರಾಕ್ಷಸಕುಲವ ಸವರುವೆವು ||೭೭||

ಕರುಣಿಸೆಮಗಿದನಸುರವರ್ಯನೆ |
ಹರಿಯಭಕ್ತನು ನೀನೆನಲು ಸಾ |
ಗರದ ತರಣವದರಿದು ಪೆರರಿಗೆ ರಾಮನಿಗೆ ಸಾಧ್ಯ ||
ತರಣಿವಂಶದ ಸಗರಭೂಪತಿ |
ಶರಧಿಯನು ನಿರ್ಮಿಸಿದಕಾರಣ |
ವರಸು ರಾಘವನಿಂದು ಸಾಗರರಾಜನನು ಬೇಡೆ ||೭೮||

ಕರುಣದಿಂ ಪಥವೀವನಾತನು |
ಸರಳಮಾರ್ಗವಿದೆನೆ ವಿಭೀಷಣ |
ನರಸನದಕನುಮತಿಸಿ ಚಿಂತಿಸಿ ದರ್ಭೆಯನು ತರಿಸಿ ||
ಹರಹಿ ಧರಣಿಯೊಳದರ ಮೇಲಿರ |
ದೊರಗಿ ಪಜ್ಜಳಿಪಗ್ನಿಯಂದದೆ |
ವರುಣಮಂತ್ರವ ಜಪಿಸುತೆಸೆದನು ನಿರಶನವ್ರತದೆ ||೭೯||

ಮೊದಲನೆಯಸಂಧಿ ಸಂಪೂರ್ಣಂ

# ಎರಡನೆಯ ಸಂಧಿ.

ಸೂಚನೆ || ಕಟ್ಟಿಯಬುದಿಗೆ ಸೇತುವನು ಹುಡಿ |
ಗುಟ್ಟಿ ರಾವಣನುಕುಟವನು ತಾಂ |
ಕೆಟ್ಟಿತೆನಲಂಗದನ ಸಂಧಿಯು ರಾಮ ಖತಿಗೊಂಡ ||

ಅತ್ತಲಸುರಾಧಿಪನು ನಿಜದು |
ರ್ವೃತ್ತವನು ಬಗೆಯುತ್ತೆ ದುಗುಡಕೆ |
ತೆತ್ತು ಮನವನು ರಾಮನದಟನು ನೆನೆದು ಕಳವಳಿಸಿ ||
ಸುತ್ತಲೀಕ್ಷಿಸಿಯೊರ್ವದೂತಂ |
ಗಿತ್ತನಾಜ್ಞೆಯ ಬೇಗದಿಂ ಪೋ |
ಗತ್ತ ರಾಮನ ಪಾಳೆಯದ ಪರಿಯರಿದು ಬಾರೆಂದು ||೧||

ಪೋಗಿ ಚರನರಿದೊಡನೆ ಬಳಿಸಾ |
ರ್ದಾಗದಾಗದು ದೇವ ಕಪಿಗಳ |
ತಾಗಿ ಬದುಕುವರುಂಟೆ ನೆರೆದಿದೆ ಸೇನೆಯಪರಿಮಿತ ||
ಹೋಗಲದರಿಂದೇನು ಸೀತೆಯು |
ನೀಗಳನುವಿಂ ಕಳುಹಿ ನೀನತಿ |
ವೇಗದಿಂ ರಾಘವನ ಮೈತ್ರಿಯ ಬಳೆಯಿಸುವುದೆನಲು ||೨||

ಪೊಳ್ಳೆದೆಯನಿವನಂಜಿದನು ಫಲ |
ವಿಲ್ಲವಿವನಿಂದಿನ್ನು ಶುಕ ನೀಂ |
ನಿಲ್ಲದೀಗಳೆ ಪೋಗಿ ಸುಗ್ರೀವಂಗೆ ಪೇಳುವುದು ||
ಎಲ್ಲಕಪಿಯಂತಲ್ಲ ನೀಂ ಮಿಗೆ |
ಬಲ್ಲಿದನು ಸದ್ವಂಶಜಾತನು |
ಸಲ್ಲುವುದೆ ನಿನಗೆಮ್ಮೊಳೀಪರಿ ಕಲಹವುಳಿಯಿದನು ||೩||

ಫಲವದೇನಹುದೆಮ್ಮ ಸೆಣಸ |
ಲ್ಕಳಿಯಲಿದನೇಂಕೊರತೆ ನಿನಗಹು |
ದೊಲುಮೆಯಿಂದಾವಿಹುದು ಸುಹಿತವು ನಮಗಿದಭಿಮತವು ||
ಲಲನೆಯೊರ್ವಳನೊಂದುಕತದಿಂ |
ಚಲದೊಳಾನಪಹರಿಸೆ ನಿನ್ನಯ |
ಕುಲಕೆ ಕುಂದೇನುಳಿದು ರಾಮನ ಮರಳು ಪುರಕೆಂದು ||೪||

ಅರುಹಿಯಿಂತಿದನರಿಯ ಬಲವಿ |
ಸ್ತರಣದಳೆತೆಯನರಿದು ಬಹುದೆಂ |
ದೊರೆಯಲಸುರಾಧಿಪನ ವಂದಿಸಿ ಪಕ್ಕಿರೂಪಾಂತು ||
ತೆರಳಿದನು ಶುಕನಂದು ವಾನರ |
ರರಸನಿರ್ಪೆಡೆಗಾಗಿ ಗಗನಾಂ |
ತರದೆ ನಿಂದನು ಪೇಳ್ದನಸುರಕುಲೇಂದ್ರನಾಣತಿಯ ||೫||

ಕೇಳುತೀನುಡಿಗಳನು ಕಪಿಕುಲ |
ದಾಳುಗಳು ನಭಕಡರಿಯೊಡನಾ |
ಖೂಳನನು ಪಿಡಿದೊತ್ತಿ ಕೊಲ್ಲಲು ಯತ್ನಗೈಯುತಿರೆ ||
ಪಾಲಿಸೆನ್ನನು ರಾಮ ಪರಮಕೃ |
ಪಾಳು ದೂತನ ಕೊಲುವುದನುಚಿತ |
ಪೇಳಿ ಬುದ್ಧಿಯನಿವರ್ಗೆ ನನ್ನನು ಸಲಹು ನೀನೆಂದು ||೬||

ಮೊರೆಯಿಡಲು ತಾಂ ಕೇಳಿ ರಘುಪತಿ |
ಕರುಣದಿಂದವನನ್ನು ಮನ್ನಿಸಿ |
ಮರಳಿ ಶಯಸಂಗೊಂಡು ಭಜಿಸಲ್ಕಂಬುಧೀಶನನು ||
ಬರಲು ತಳುವಿದೊಡವನು ಕೋಪಿಸಿ |
ಯುರಿಯನುಗುಳ್ವಕ್ಷಿಗಳಿನೀಕ್ಷಿಸಿ |
ಮೆರೆವ ಕೋದಂಡವನು ಕೊಂಡೊಡನಂಬುಜೋಡಿಸುತೆ ||೭||

ಎಲವೆಲವೊ ಸಾಗರನೆ ನನ್ನನು |
ಬಲವಿಹೀನರೊಳೆಣಿಕೆಗೈದೆಯ |
ಚಲವ ಮಾಳ್ಪೆಯ ತನ್ನ ಪರಿಯನು ತೋರ್ಪೆನಿನಗೆಂದು ||
ತಳಮಳಂಗೊಂಡಬುದಿ ಕುದಿಯಲು |
ಜಲಚರಂಗಳು ಬೆಂದು ಬೇಗುದಿ |
ಗೊಳುತೆ ತೇಲಲು ಕಣೆಯನೆಚ್ಚನು ದಾಶರಥಿ ಮುಳಿದು ||೮||

ಇನಿತು ಗೈದೊಡಮಿದಿರೊಳೈದದೆ |
ವನಧಿರಾಜನು ಮರಸಿಕೊಂಡಿರ |
ಲಿನಕುಲೇಂದ್ರನು ಮತ್ತೆ ರೋಷಾವಿಷ್ಟಮನನಾಗಿ ||
ಅನುಪಮಾನಬ್ರಹ್ಮಶರವನು |
ಧನುವಿಗೇರಿಸಿಯಿವನನಿಂಗಿಪೆ |
ನೆನುತೆ ಗರ್ಜಿಸೆ ಬಂದು ನಿಂದನು ಬೆದರಿ ಸಿಂಧುಪತಿ ||೯||

ಜಯಜಯಾನತರಕ್ಷ ರಾಘವ |
ಜಯಜಯಾಮರಪಕ್ಷ ಮಾಧವ |
ಜಯಜಯಾಹಿತಶಿಕ್ಷ ಕೇಶವ ಜಯ ಮಹಾದೇವ ||
ನಯವಿದೂರನು ನಾನು ನತಜನ |
ಭಯವಿದಾರನು ನೀನು ನನ್ನನು |
ದಯದೆ ರಕ್ಷಿಪುದೆಂದು ಕೆಡೆದನು ರಾಮನಂಘ್ರಿಯೊಳು ||೧೦||

ಒಡನೆ ನುಡಿದನು ದೇವ ಮೊರೆವೀ |
ಕಡಲು ನೆಲದಂತಹುದು ಕೋಡಗ |
ಗಡಣ ನಡೆಗಿದರೊಳಗೆ ಭಯವಣಮಿಲ್ಲ ಮುಂದಿದಕೆ ||
ಕುಡುವುದಾಜ್ಞೆಯ ನಿಮ್ಮ ನಳನಿಗೆ |
ತಡೆಯದೀಗಳೆ ಸೇತುವನು ನೀ |
ನೊಡರಿಸೆಂದಾನಾತನಿಟ್ಟುದನೆಲ್ಲ ತೇಲಿಪೆನು ||೧೧||

ಎಂದು ವರುಣನು ನುಡಿದು ತೆರಳ |
ಲ್ಕಂದು ರಘುಪತಿಯಾಜ್ಞೆಗುಡೆ ನಳ |
ನಿಂದೆ ಬಳೆದುದು ನೂರುಯೋಜನದುದ್ದದಲಿ ಸೇತು ||
ತಂದುತಂದಡಕಿದುದು ವಾನರ |
ವೃಂದ ಪರಿಪರಿಗುಂಡುಗಲ್ಗಳ |
ನೊಂದಿಗೊಡ್ಡಿತು ಪರ್ವತಂಗಳ ಕಿತ್ತು ತಳದೊಡನೆ ||೧೨||

ಇಂತು ಸೇತುವನೊಪ್ಪುವಂತೆ ಸ |
ಮಂತು ನಿರ್ಮಿಸಿ ಬಳಿಕ ತನ್ನಯ |
ಕಾಂತೆಯನು ತಳುವಿಲ್ಲದೀಕ್ಷಿಪೆನೆಂದು ರಘುಪತಿಯು ||
ಸಂತಸವನಾಂತಾವಿಭೀಷಣ |
ಮುಂತೆ ನಡೆಯುತೆ ತೋರೆ ಪಥವನು |
ಪಿಂತೆ ನಡೆದನು ಜಯಜಯೆಂದುಲಿದಾಡೆ ಸುರನಿಕರ ||೧೩||

ರಾಮಸೇತುವೊ ರಾಕ್ಷಸಾನ್ವಯ |
ಧೂಮಕೇತುವೊ ರಾವಣನ ಸಿರಿ |
ಕಾಮಿಸುತೆ ರಾಮಂಗೆ ನೀಡಿದ ಕರವೊ ತಾನೆನಿಪ ||
ಆಮಹೋದಧಿಯಡ್ಡಗಟ್ಟೆಯ |
ನೇಮಹತ್ತ್ವದೆ ಕಟ್ಟಿನಡೆದರೊ |
ರಾಮಕಿಂಕರರೇನನಾಗಿಸರವನ ಕೃಪೆಯಿರಲು ||೧೪||

ನಡೆಯುತೀಪರಿ ಮೂರುದಿನಗಳು |
ತಡಿಯ ಸೇರಿತು ಪಾಳೆಯವು ಬಳಿ |
ಕೊಡನೆನಿಲ್ಲದೆ ಮುಂದೆ ತೆರಳಿತು ವೈರಿಜನಪದಕೆ ||
ಬಡವ ಭಾಗ್ಯವ ಕಂಡವೊಲು ಮುಂ |
ಗಡೆಯೊಳೆಸೆವಾ ರಾಜಧಾನಿಯ |
ಬೆಡಗನೀಕ್ಷಿಸಿ ಬೆರಗುಗೊಂಡಿತು ಕೋಡಗದ ಗಡಣ ||೧೫||

ನಿಲಲಿ ಪಯಣವು ದೇವರೀಕ್ಷಿಪು |
ದಲಗಣಸು ಸುರತತಿಗೆ ಲಂಕೆಯು |
ಚೆಲುವಬೀರುತೆ ತನ್ನ ಸೊಬಗಿಂ ಪಳಿಯುತಿತರವನು ||
ಗೆಲವನಲ್ಲದೆ ಸೋಲನರಿಯದ |
ಚಲವು ತನಗಿಹುದೆಂಬುದನು ನೆರೆ |
ನೆಲಕೆ ತೋರ್ಪಂತೆಸೆವುದೆಂದನು ರಘುಜಗಸುರೇಂದ್ರ ||೧೬||

ಭಾನುವಂಶಲಲಾಮನಾಗಳೆ |
ವಾನರೇಶಂಗೀಯಲಾಜ್ಞೆಯ |
ಸೇನೆ ಬಿಟ್ಟುದು ಬೀಡನಲ್ಲಿಯೆ ಧರಣಿಯಗಲದೊಳು ||
ಮೌನವನು ಕಡೆಗೊತ್ತಿ ಪಡೆ ಸು |
ವ್ಯಾನದಿಂದಬ್ಬರಿಸೆಯಾಲಿಸಿ |
ದಾನವೇಶ್ವರನಾರಯಲು ಕಳುಹಿದನು ಸಾರಣನ ||೧೭||

ಹರಿಯ ವೇಷದೊಳವನು ಬಲದೊಳು |
ಬೆರೆದನೆಂಬುದನಾವಿಭೀಷಣ |
ನರಿದು ಸೆರೆಗೈದವನ ನಿಲಿಸಲು ರಾಮುಸಿದಿರಿನೊಳು ||
ಕರುಣದಿಂ ಮನ್ನಿಸಿ ನೃಪಾಲನು |
ಮೆರೆವ ಕಪಿಸೇನೆಯನು ತೋರಿಸಿ |
ಬರಿಸಿ ಶುಕನನು ಪೋಗಿಮಿನ್ನೆಂದಿರ್ವರನು ಕಳುಹೆ ||೧೮||

ಕಂಡರೊಡ್ಡೋಲಗದೆ ಲಂಕಾ |
ಮಂಡಲೇಶನನವರು ಸಾಕಿದು |
ಕೆಂಡದೊಡನಿನ್ನಾಟ ಕಳುಹಿಸು ಜೀಯ ಜಾನಕಿಯು ||
ಗಂಡುಗಲಿಗಳು ಸುರರು ವೇಷಂ |
ಗೊಂಡು ಕೋತಿಗಳಂತೆ ಬಂದಿಹ |
ರಂಡಜಧ್ವಜನಿಂದು ರಾಮಾಕೃತಿಯೊಳೈದಿಹನು ||೧೯||

ಜೇಯ ವುಸಿಯಲ್ಲೆಮ್ಮ ನುಡಿ ನಿ |
ರ್ದಾಯದಲಿ ನಮ್ಮೆಲ್ಲರನು ಗೆ |
ಲ್ದಾಯತಾಕ್ಷಿಯ ಸೆರೆಯ ಬಿಡಿಸುವನಾ ರಘೂದ್ವಹನು ||
ನೋಯಲಾಗದು ದೇವ ನಾವ |
ನ್ಯಾಯನುಡಿವವರಲ್ಲ ನಿಮಗ |
ಶ್ರೇಯವಲ್ಲದೆ ಲೇಸು ಕಾಣಿಸದೆಂದರಾ ಚರರು ||೨೦||

ಹೊಯಿರಿ ಬಾಯನು ಕಲಿತುದೆಲ್ಲವ |
ನಯವಿಹೀನರು ಗಳಹುತಿರ್ಪರು |
ಭಯವು ತನಗಲೆ ವಾನರರ ಹುಲುನರರ ದೆಸೆಯಿಂದೆ ||
ಜಯವು ರಾಮುಂಗಹಹ ದನುಜ |
ಕ್ಷಯವು ಕೋತಿಗಳಿಂದೆ ತನಗುಂ |
ಲಯವು ಮೂಮೂ ಸತ್ಯವಾದಿಗಳಿವರು ದಿಟವೆಂದು ||೨೧||

ಕರೆದು ಸಚಿವನನಾ ಪ್ರಹಸ್ತನ |
ನಿರದೆ ನೀನಿಂದೆಮ್ಮ ಬಲವನು |
ಧುರಕೆ ತೆರಳಿಸು ಭದ್ರಪಡಿಸುವನಾಗು ಕೋಟೆಯನು ||
ಇರುವೆ ನಾನುತ್ತರದ ಬಾಗಿಲೊ |
ಳರಿಗಳಾರ್ಭಟಿಯತ್ತ ಘನಮಿಹು |
ದಿರಲಿ ಸುರಪಜಿದಾದಿಸುಭಟರು ಮಿಕ್ಕ ದೆಸೆಗಳೊಳು ||೨೨||

ಕಳುಹು ಶಾರ್ದೂಲನನು ರಾಮನ |
ಬಳಿಗೆ ಕರೆಯಲಿ ಯುದ್ಧಕವನನು |
ತಳುವದೀಗಳೆ ಪೋಗಲೆಂದಸುರೇಂದ್ರನಾಣತಿಸೆ ||
ಬಲವ ಜೋಡಿಸಿಯಾ ಪ್ರಹಸ್ತನು |
ನಿಲದೆ ಪೋಗೆಂದಟ್ಟಲಾಖಳ |
ತಿಲಕ ನಡೆದನು ಕೂಡೆ ನುಡಿದನು ರಾಮಚಂದ್ರಂಗೆ ||೨೩||

ರಾಯ ದನುಜರ ದೇವನಾಣತಿ |
ನೋಯಲಾಗದು ಮನದೆ ನೀನ |
ಬ್ಜಾಯತಾಕ್ಷಿಯ ಮೇಲಣಾಶೆಗೆ ಬಿಡು ಜಲಾಂಜಲಿಯ ||
ಗಾಯವಡೆಯದೆ ನಿನ್ನ ಕೋಮಲ |
ಕಾಯದೊಡನೀಗೈದಯೋಧ್ಯೆಗೆ |
ತಾಯಿತಮ್ಮಂದಿರನು ಸೇರ್ದತಿಸುಖದೆ ನೀಂ ಬಾಳು ||೨೪||

ಕೇಳದೊಡೆ ನೀನೀಹಿತೋಕ್ತಿಯ |
ನೇಳು ಕಾಳೆಗಕಲ್ಲಿ ರಕ್ಕಸ |
ರಾಳುಗಳ ಕೈಬಾಯ್ಗೆ ಸಿಲುಕಿಯೆ ಸಾವೆ ಸತ್ಯವಿದು ||
ಕೀಳುಮೇಲಿವುಗಳೊಳದಾವುದೊ |
ಕೇಳಿ ನಿನ್ನವರಿಂದಮುದುನುರೆ |
ಪೇಳಲದಕಿನ್ನೇನು ತಕ್ಕುದೊ ಗೈವೆವಾವದನು ||೨೫||

ರಾವಣೇಶ್ವರನಾಜ್ಞೆಯಿಂತಿದ |
ಕಾವುದುತ್ತರವೆಂಬ ಚರನನು |
ಪಾವನಾತ್ಮನು ಲೆಕ್ಕಿಸದೆ ಸುಗ್ರೀವನನು ಕರೆದು ||
ಈವಿಕಾರಿಯ ನುಡಿಗಿದುತ್ತರ |
ವೀವನೇಚರತತಿಯ ನಡೆಯಿಸಿ |
ಯಾವಿರೋಧಿಯ ಪುರಕೆ ಮುತ್ತಿಗೆಯಿಡುವುದಿನ್ನೆನಲು ||೨೬||

ಜಗವಿದೆಲ್ಲವು ನಡುಗಿತೆನಲಾ |
ವಿಗಡಕೋಡಗವಡೆಯು ನಡೆದುದು |
ಬಗೆಬಗೆಯ ಕಲ್ಗುಂಡುಮರಗಳನಾಂತು ಕೈಗಳೊಳು ||
ನಗರವನು ಮುತ್ತಿದುದು ಮುದದಾ |
ನೆಗಳೊ ತಾವೆನೆ ಕಿಳ್ತು ಸಕಲವ |
ನಗಳುಗಳ ತುಂಬುತ್ತೆ ಕಾಪಿನ ದಡಿಗರನು ಬಡಿದು ||೨೭||

ತಡೆವರಾರಿದನಕಟ ಲೋಕಕೆ |
ಕಡೆಯದಿನವಿಂದಾಯ್ತು ಕಪಿಗಳ |
ಪಡೆಯೊ ದಡವನು ಜಡಿದು ವಿಾರ್ರೈತರ್ಪ ಪೆರ್ಗಡಲೊ ||
ಪೊಡವಿಯಿಾದುದೊ ಮೋಹರವನೆಮು |
ಗೊಡೆಯರಿನ್ನಾರಿಹರು ರಕ್ಷಕ |
ರೆಡೆಯ ಕಾಣದೆ ಕೆಟ್ಟೆವೆಂದುದು ಕರ್ಬುರರ ಪಡೆಯು ||೨೮||

ದೂರು ಕೇಳಿಸಿತಸುರರಾಣ್ಮಂ |
ಗೇರಿದನು ಪುರದಾಳುವೇರಿಯ |
ವೀರಕಪಿಸಾಗರವ ಕಂಡನು ಬೆಚ್ಚಿಬೆದರಿದನು ||
ತೋರಿಸದೆ ಮನದಸುವನರಿಪರಿ |
ವಾರದಲಿ ಸತ್ವೈಕದೃಢರನು |
ತೋರೆನಲ್ ಶುಕನಿತ್ತ ತೋರುತ್ತಿರಲು ಬಳಿಕತ್ತ ||೨೯||

ಇಡಿದ ಕಹಳೆಗಳುಘ್ಘಡಿಸುತಿರೆ |
ಪಿಡಿದ ಬೆಳ್ಗೊಡೆ ಸಾಲ ನೆಳಲೊಳು |
ಪಡಿಯಿವಕ್ಕಿಲ್ಲೆನಿಸಿ ಬೆಳಗುವ ಮಕುಟಗಳ ಧರಿಸಿ ||
ಕಡುಪರಾಕ್ರಮವುಳ್ಳರೊಳು ದ |
ಕ್ಕಡಿಗನಿವನೆಂದೆಂಬ ಬಿಂಕದ |
ಬೆಡಗಿನವನಾರೆಂದು ರಾಘವರರಸ ಬೆಸಗೊಂಡ ||೩೦||

ದೇವರೀಕ್ಷಿಪುದೀತನೇ ಖಳ |
ರಾವಣನು ಮೂಲೋಕದಲ್ಲಣ |
ನಾವಿರಂಚಿಪ್ರಮುಖಸುರರನು ಗೆಲ್ದ ಪಟುಭಟನು ||
ಹೇವರಿಸದಿಂದಿವನು ನಿಮ್ಮಯ |
ದೇವಿಯನು ಕಳ್ದೊಯ್ದ ಪಾಪಿಯು |
ಸಾವು ಸಮನಿಸೆ ಬಂದನೆಂದನು ವರವಿಭೀಷಣನು ||೩೧||

ಈತನಂತಹ ಸತ್ವಶಾಲಿಯೆ |
ಭೀತಿಯರಿಯದ ಭಟನೆ ನಾವಿ |
ನ್ನೀತನನು ಗೆಲುವಾಶೆ ಬೀತುದೆ ಇರಲಿ ನೋಡುವೆನು |
ಪೂತೆಯಾದಾ ಸೀತೆಯೊಳು ಬಗೆ |
ಸೋತ ಪಾಪಿಗೆ ಜಯವದೆಂತಹು |
ದೇತಕಿಂ ತಡವಿವನ ಗರ್ವವ ಮುರಿವೆನಿಂದೆಂದು ||೩೨||

ಒದರಿದನು ನಿಜಧನುವನದಕುರೆ |
ಹೆದೆಯನೇರಿಸಿ ಕಣೆಯನೆಚ್ಚನು |
ಮದಿಸಿದಸುರಾಧಿಪನ ಸತ್ತಿಗೆ ಮುರಿಯೆ ರಾಘವನು ||
ಅದುಬುತವನೇನೆಂಬೆನನಿತರೊ |
ಳೊದೆದ ಭಾನುಜನಡಿಯ ಹತಿಯಿಂ |
ದುದುರಿ ಕೆಡೆದುವು ನೆಗ್ಗಿ ರಾವಣಶಿರದ ಮಕುಟಗಳು ||೩೩||

ಬೆದರಿದನು ರಾವಣನು ರಾಕ್ಷಸ |
ರೆದೆಯು ನಡುಗಿತು ನಟ್ಟವೌಸದ |
ಕೆದರುದಲೆಯಾದೈತ್ಯ ದುಗುಡದೊಳೈದಿಯುರಮನೆಗೆ ||
ಪದುಳವಲ್ಲೀಭಂಗವೆನಗರಿ |
ಯದಟು ಘನವಾವಾನರಾಧಿಪ |
ನಧಮುಬಲನಲ್ಲಿವರ ವೈರದೆ ಕೆಟ್ಟೆನಕಟೆಂದು ||೩೪||

ಬಲಿದ ಚಿಂತೆಯೊಳಸುರನಿರುತಿರೆ |
ಬಲಿಲಲಾಮನು ಕಪಿಗಳರಸನು |
ನೆಲದೊಡೆಯನಿದಿರಿನೊಳು ತಂದರಿಮುಕುಟಗಳನಿಳುಹಿ ||
ಖಳನ ತಲೆಗಳನೊಪ್ಪುಗೊಳುವುದು |
ನೆಲದ ರಿಣವಿಂದಿವಗೆ ಕಳೆದುದು |
ಮುಳಿಯಲಾಗದನುಜ್ಞೆವಡೆಯದೆ ಗೈದ ತಪ್ಪಿತಕೆ ||೩೫||

ಎಂದು ನುಡಿದಡಗೆಡೆದು ವಿನಯದೆ |
ನಿಂದು ಮುಕುಟಂಗಳೊಳು ಮಸ್ತಕ |
ಮೊಂದುಮಂ ನೆರೆ ಕಾಣದೇನಿಂತಾದುದೀಗೆಂದು |
ಬೆಂದ ಬಿದಿ ನಗೆಗೇಡನಿಂದೆನ |
ಗೊಂದಿಸಿತೆ ರಿಪುಶಿರಗಳಿಲ್ಲಕ |
ಟೆಂದು ಪುಸಿದೆನೆ ರಾಘವಾಂಘ್ರಿಯೊಳೆಂದು ಮನನೊಂದು ||೩೬||

ಒಪ್ಪದಿನ್ನಿಲ್ಲಿಹುದು ಖಳಪತಿ |
ಯಿಪ್ಪೆಡೆಗೆ ಮುಗುಳ್ದೈದಿ ಶಿರಗಳ |
ನೊಪ್ಪದಿಂ ತಂದೊಡೆಯಗೊಪ್ಪಿಸದಿರ್ದೊಡೆನಗುಳಿವೆ ||
ತಪ್ಪನೀಗಳೆ ತಿದ್ದಿಯನ್ನತವ |
ತಪ್ಪಿಸಲುಬೇಕೆಂದು ನಭಕುರೆ |
ಕುಪ್ಪಳಿಸುತಿರಲರಿದು ಭಕ್ತನ ಮನದ ಸಂಶಯವ ||೩೭||

ಏನಿದೇನಿದು ಸಖನೆ ಮನದೊಳ |
ಗಾನುವುದೆ ನೀನಾಯಸವನಿಂ |
ದೇನುಕೊರತೆಯು ನಿನ್ನ ಸಾಹಸಕೇಕೆ ಚಿಂತಿಸುವೆ ||
ದಾನವೇಂದ್ರನ ವರಕಿರೀಟಕೆ |
ಹಾನಿಯಾಯ್ತೆನಲವಗೆ ಸಾವದು |
ನೀನು ಭಾವಿಸು ಕೊಲೆಯೊಳಪ್ಪ ವಿಶೇಷವಿನ್ನೇನು ||೩೮||

ಎಂದು ರಾಘವನವನ ಕರವನು |
ಚಂದದಿಂ ನೆರೆ ಪಿಡಿದು ನೀನಕ |
ಟೆಂದು ಪೇಳನೆ ತನಗೆ ವಂಚನೆಗೈದು ಪೋದೆಯಲಾ ||
ಮುಂದಿಮಾರ್ಬಲಬೆರಸಿದಹಿತನ |
ಮುಂದೆ ನೀನೇಕಾಂಗಿಯೈದಿದು |
ಧಂದವೇನೈ ರಾಜನಾದಂಗಲ್ಲ ನೀತಿಯಿದು ||೩೯||

ಉಳಿದು ಭರತಂಗಿಳೆಯ ಸಿರಿಯನು |
ತೊಳಲುತಡವಿಯೊಳಿರ್ಪಕಾಲದೆ |
ಕಳವಿನಿಂ ಬಳಸೊಯ್ಯಲರಸಿಯ ನಿಲ್ಲದಿರೆ ನೆರವು ||
ಬಲಯುತನು ನೀಂ ನಿನ್ನ ದೆಸೆಯಿಂ |
ಲಲನೆಯನು ಮಗುಳೊಂದಬೇಕೆಂ |
ದೆಳಸಿ ಕಾದಿರ್ಪೆನ್ನ ಕಜ್ಜವನಕಟ ಭಾವಿಸಪೆ ||೪೦||

ಮುಡುಕಿ ನೀನಿಂದಸುವ ನೀಗ |
ಲ್ಕೊಡನೆ ಶತ್ರುವ ಕೊಂದು ಲಂಕೆಯ |
ಪೊಡವಿಗೊಡೆಯನನೆಸಗಿ ಬಿಡದೆ ವಿಭೀಷಣನ ಬಳಿಕ ||
ಒಡಲ ನೀಗುವೆನಲ್ಲದಿರಿಸೆನು |
ಮಡದಿ ಸೋದರರೆಲ್ಲ ನೀನಿರ |
ದೆಡೆಯೊಳೇಕಿನ್ನವರ ನೊಲ್ಲೆನು ನಂಬು ನೀನಿದನು ||೪೧||

ಇಂತು ನುಡಿದರಸಂಗೆ ಪಡಿವಾ |
ತೆಂತುಪೇಳುವುದೆಂದು ಭಾನುಜ |
ನಂತರಂಗದೆ ಚಿಂತಿಸುತ್ತಿರಲವನ ಹುರಿಗೈದು ||
ಚಿಂತೆಯೇಕಿದಕಿನ್ನು ಮುಂದ |
ತ್ಯಂತಘನಕಾರ್ಯಂಗಳುಳಿದಿಹು |
ವೆಂತು ನಿರ್ವಹಿಸುವೆವು ಮುಂದಣ ಹವಣದೇನೆನಲು ||೪೨||

ಮಂಗಳಾಂಗನೆ ನಿನ್ನ ಬೆಸನನು |
ಡಿಂಗರಿಗನಾದಾನು ನಡೆಯಿಪು |
ದಂಗವೆನಗದು ಬೇರೆ ಮತವೆನಗಿಲ್ಲ ಬೆಸಸೆನಲು ||
ಡಂಗುರವ ಪೊಯಿಸಿನ್ನು ಸಕಲರು |
ಸಂಗರಕೆ ಸನ್ನದ್ಧರಾಗಿರ |
ಲಂಗದನ ನೀಂ ಬರಿಸು ಕಳುಹಲುಬೇಕು ಪಗೆಯೆಡೆಗೆ ||೪೩||

ಎಂದು ನುಡಿದಾರಾಮಚಂದ್ರನ |
ಮುಂದೆ ನಿಂದಂಗದನು ಕೈಮುಗಿ |
ದೆಂದನೊಡೆಯನೆ ಪೇಳ್ವುದೂಳಿಗವೇನು ತನಗಿಂದು ||
ಕೊಂದು ರಾವಣಕುಂಭಕರ್ಣರ |
ನಿಂದು ಮುರುಳುವುದೆಂದೊ ಬೆಸನಾ |
ನ್ಮುಂದಿಮಾರ್ಬಲವೆರಸನಂದಿರ ಪಿಡಿದು ತಹುದೆಂದೊ ||೪೪||

ಒರೆವುದೆನಗೆಂದೆಂಬ ವಾಲಿಯ |
ತರುವಲಿಯ ತಾಂ ನೋಡಿ ರಘುಕುಲ |
ವರನು ಮೆಚ್ಚುತ್ತಹುದು ಮಗನೇ ದಿಟ ಸಮರ್ಥನಹೆ ||
ಧುರನ ತೊಡಗದ ಮುನ್ನ ಪಗೆಗದ |
ಗರುಹಿ ಗೈವುದು ಶಾಸ್ತ್ರಸಮ್ಮತ |
ವರಸುಗಳಿಗಿದು ನೀತಿ ಸೀನದರಿಂದಮಿಾಗಿರದೆ ||೪೫||

ತೆರಳಿ ಲಂಕಾಪುರಿಗೆ ದಾನವ |
ರರಸನೊಡನೀಮಾತನೆಂಬುದು |
ಹರಣದಾಸಿಯದಿರಲು ಜನಕಾತ್ಮಜೆಯನೊಪ್ಪಿಸಿಯೆ ||
ಶರಣುವುಗು ನೀನಲ್ಲದಿರ್ದೊಡೆ |
ಧುರಕೆ ನಿಲ್ಲೆಂದವನನೆಚ್ಚರಿ |
ಸಿರದೆ ಮರಳುವನಾಗು ಬುದ್ಧಿಯಿನೆಸಗು ಕಾರ್ಯವನು ||೪೬||

ರಾಯಗಜ್ಜವಿದೆಣಿಸಲಿತರರಿ |
ಗಾಯವೆನಿಸದು ನಿನಗೆ ಸುಲಭಮು |
ಪಾಯದಿಂ ಸೀನಿದನು ಸಾಧಿಪೆಯೆಂಬ ಭರವಸವು ||
ಆಯುವಂತನೆ ನಿನ್ನೊಳಿನಗುಂ |
ಟಾಯತೋದ್ಯಮನೆನಿಸಿ ನೀನನ |
ಪಾಯದಲಿ ಜಯವೊಂದಿ ಮರಳೆಂದರಸ ನೇಮಿಸ್ಕಿದ ||೪೭||

ಏತರತಿಶಯವರಸ ನಿನ್ನ ಕೃ |
ಪಾತಿಶಯಮಿರಲಾವುದಸದಳ |
ವೈತಹೆನು ಚಣದೊಳಗೆ ಕಾರ್ಯವನೆಸಗಿ ನಾನೆಂದು ||
ಜೋತು ಶಿರವನು ನಮಿಸಿ ಲೋಕ |
ಖ್ಯಾತವಾಲಿಸುಜಾತನಹಿತ |
ವ್ರಾತವೈದ್ಯುತಚಾತವೇದನು ಲಂಕೆಗಭಿಗಮಿಸಿ ||೪೮||

ತಡೆಯಲೈದಿದ ಕಾಹಿನವರನು |
ಪಿಡಿದಘನತರುಶಿಲೆಗಳಿಂ ಸಡೆ |
ಬಡಿದು ಮೇಲಾರೈಕೆಯಸುರರನಿರದೆ ಮರ್ದಿಸುತೆ ||
ಕಡೆಯ ಕಾಲದ ರುದ್ರನಂದದೆ |
ಕಿಡಿಯನಕ್ಷಿಗಳಿಂದಮುಗುಳುತೆ |
ಫಡಫಡೆಲವೋ ತೋರು ನಾರೀಚೋರನಾರೆನುತೆ ||೪೯||

ಕಂಡಕಂಡರನಿರದೆ ಕೇಳುತೆ |
ಗಂಡುಗಲಿಯಾವೂರೊಳೈತರೆ |
ಕಂಡು ಮತ್ತಂ ಹಿಂದಿನಾತನೆ ಬಂದನಿಂದೆನುತೆ ||
ಮಂಡೆಗಳ ಮರೆಯಿಸುತೆ ಪೌರರು |
ದಿಂಡುಗೆಟ್ಟೊಡೆ ಕಂಡು ಹೋಹೋ |
ಕೆಂಡದೂಳಿಗದಾತ ತಾನಲ್ಲಂಜದಿರಿವೆಂದು ||೫೦||

ತೋರಿರೈ ನಿಮ್ಮೊಡೆಯನನು ರಘು |
ವೀರನೆಂದುದನಾಡಿಪೋಪೆನು |
ಬೇರೆ ಕಾರ್ಯದ ನೇಮವೆನಗಿಂದಿಲ್ಲವೊಡೆಯನನು ||
ತೋರಲೇನೋ ಎಂಬ ಭೀತಿಯು |
ಕೌರುವಂತಿದೆ ನಿಮ್ಮ ವದನದೆ |
ಸಾರಿಮಿನ್ನೆಂದಸುರರರಸನ ಮನೆಯನರಸುತ್ತೆ ||೫೧||

ಮೂರುಲೋಕದ ಗಂಡನಾವನೊ |
ವಾರಿಜೋದ್ಭವವಿಷ್ಣುಶಂಕರ |
ರಾರನುಜ್ಞೆಯ ಮೀರಿ ನಡೆಯಲ್ಕಂಜೆ ವರ್ತಿಪರೊ ||
ವೀರನಾದಶಶಿರನು ಸಭೆಯೊಳ |
ಗೇರುಗದ್ದುಗೆಯಲ್ಲಿ ಮಂಡಿಸಿ |
ಭೂರಿವೈಭವದಿಂದೆ ಮೆರೆದಿರೆ ಕಂಡನಾತನನು ||೫೨||

ವಿಗಡರಕ್ಕಸರಿವನ ತಡೆಯಲು |
ಬಗಲೊಳವರಸಿರ-ಂಕಿಯೌಂಕಿಯೆ |
ಬಗೆಯದಾರುಮನಸುರನಾಥನ ಪೀಠದಿದಿರಿನೊಳು ||
ಬಿಗಿದು ಕುಂಡಲಿಯಂತೆ ಬಾಲದೆ
ಜಗುಲಿಯನು ಮೇಲೇರಿ ನಗುನಗು |
ತೊಗುಮಿಗೆಯ ಸುಮ್ಮಾನದೊಳು ನುಡಿಸಿದನು ಖಳಪತಿಯ ||೫೩||

ಮರೆಯನೀತನು ಬಾಲಮೈತ್ರಿಯ |
ನಿರುವೆನಿವನೊಳು ಕೆಲವುದಿನವೆಂ |
ದರಿತು ನಾಂ ಬರಲೆನ್ನ ತಡೆಯಿಸಿ ನೂಕಿಸಿದೆ ನೀನು ||
ಅರಿಯದಾಳ್ಗಳ ದೋಷವೆಂದದ |
ಸರಕುಗೈಯದೆ ನಿನ್ನ ಬಳಿಗೈ |
ತರಲದೇತಕೆ ಮಾನಿವೊಲ್ಮಾತಾಡದಿಹೆಯೆನಲು ||೫೪||

ಅರಸನಿದಿರೊಳು ಕುಳಿತು ತೋರ್ದಂ |
ತರಚುವೀಕಪಿಯಾವುದೋ ಕೇ |
ಳ್ದರಿವೆನೆಂದೆನುತಾ ಪ್ರಹಸ್ತನು ಮಂತ್ರಿಪುಂಗವನು ||
ಕೆರಳಿ ನುಡಿದನದಾರು ನೀನೆಲೊ |
ಮರಣದಂಡನೆಗಂಜದೈತಂ |
ದಿರದೆ ಗಳಹುತ್ತಿರ್ಪೆ ನಿನ್ನಯ ಪರಿಯದೇನುಸಿರು ||೫೫||

ಹಲುಗಿರಿಯಿಸಿಂದ್ರನನು ಪಾವಕ |
ನಳವನಡಗಿಸಿ ವಾಯುವಿನ ಬಲು |
ಛಲನೆಯನು ಬಂಧಿಸಿ ಕೃತಾಂತನ ಜೈಸಿ ಶಂಕರನ ||
ನೆಲೆಯನಲುಗಿಸಿ ಧನದನುಜ್ಜ್ವಲ |
ಬಲವ ಭಂಗಿಸಿ ಮೆರೆವನಿದಿರೊಳ |
ಗುಲಿವೆ ಹುಲುಕಪಿ ನಿನ್ನ ಹವಣೇನುಸಿರು ನಿಶ್ಚಯವ ||೫೬||

ಎಂದ ಮಂತ್ರಿಯ ಮಾತ ಬಗೆಯದೆ |
ಮುಂದೆ ಕುಳಿತಿಹ ದಾನವೇದ್ರಂ |
ಗೆಂದನನೃತವನಿವನು ಗಳಹಿದೊಡೇಕೆ ಸುಮ್ಮನಿಹೆ ||
ಪಿಂದಿನಾ ಡಳಿತಗಳನರಿಯದೆ |
ಮಂದಮತಿಯಿವನಾಡುತಿರ್ದೊಡೆ |
ಚಂದವಲ್ಲೆಂದೆನ್ನದಸುರರನೆಲ್ಲ ವಂಚಿಪುದೆ ||೫೭||

ಮರೆದು ನೀನಿರಲೆಚ್ಚರಿಪೆನದ |
ನರಿಗೆ ನಿನ್ನೀಸಭಿಕರೆಲ್ಲರು |
ಹರೆಯದಿಂ ನೀನುಬ್ಬಿ ತೋಳ್ಗಳ ತೀಂಟೆಗಳೆಯಲ್ಕೆ ||
ಅರಿಯದಿಂದ್ರನ ಸುತನ ಸತ್ವವ |
ನರಿಯದಂದದೊಳವನ ಕಿಬ್ಬದಿ |
ಗೆರಗಿ ಕಕ್ಷದೆ ಸಿಲುಕಿ ನಾಯವೊಲಲ್ಲಿ ನರಲುತಿರೆ ||೫೮||

ಇರುಬಿನೊಳು ನೀನಿಹುದನೆಣಿಸದೆ |
ಪರಮಸಾಹಸಿ ವಾಲಿ ನಾಲ್ಕುಂ |
ಶರಧಿಯೊಳು ಮುಳುಮುಳುಗಿ ಸಂಧ್ಯಾದಿಗಳನಾಚರಿಸಿ ||
ಮರಳಿ ಪುರಕೆಂದಭ್ರಮಾರ್ಗದೆ |
ಚರಿಸುತಿರೆ ನೀಂ ಪಟದ ಬಾಲದ |
ತೆರದೊಳಿತ್ತತ್ತೊಲೆಯುತುಬ್ಬಸವಾಂತು ಕಣ್ಗೆಟ್ಟು ||೫೯||

ಪರಿದ ಕರುಳಿನ ಮರಿಗೆ ಕರುಣದ |
ಪರಮಸಂಜೀವನವ ನೆರೆಯೈ |
ಹರಣ ತೆಗೆಬಗೆಯಾಂತುದುಳಿಸ್ಯೆ ಶರಣು ನೀನೆನುತೆ ||
ಮೊರೆಯಿಡಲು ನೀನಾಗಳೀಕ್ಷಿಸಿ |
ಯರಿದು ದಿಟ ಪೊಸಪುಳುವಿದೆನ್ನುತೆ |
ಕರದೊಳಾಂತೈತಂದು ಶಿಶುವಿನ ತೊಟ್ಟಿಲಿಗೆ ಬಿಗಿದು ||೬೦||

ಆದಯಾಂಬುಧಿ ತೆರಳಲೊಡನಾ |
ದಾದಿಯರು ಬಳಸುತ್ತೆ ದಣಿವಿಂ |
ದೇದುತಿಹುದನು ಕಂಡು ಕನಿಕರಗೊಂಡು ಪಾಲೂಡಿ ||
ಆದರಂಮಿಗೆ ಬಿಚ್ಚಿ ನಿನ್ನನು |
ಮೋದದಿಂದಾಡಿಸುವ ಸಮಯದೊ |
ಳೈದಿ ದೂರಕೆ ಚಿಗಿದು ಭೋಂಕನೆ ನಭಕೆ ನೀಂ ಸರಿದೆ ||೬೧||

ಈತನಾರೆನ್ನಂದಿನೆಸಕವ |
ನೇತಕೆತ್ತಾಡುವನು ವಾಸವ |
ಜಾತನಲ್ಲದೆ ಮಿಕ್ಕರರಿಯರು ತನ್ನ ಪರಿಭವವ ||
ಭೀತಿಗೊಳ್ಳದೆ ನುಡಿವನೆನ್ನು ತೆ |
ಖಾತಿದಾಳದಿರಸುರನಾಥ ವಿ |
ನೀತನಾಗಿಯೆ ಕೇಳೆ ಪೇಳ್ವೆನು ತನ್ನ ಸಂಗತಿಯ ||೬೨||

ನಿನ್ನ ಪೂರ್ವವನನ್ಯರರಿವರೆ |
ರನ್ನದೊಟ್ಟಿಲೊಳೆಸೆದು ಮಲಗಿದ |
ಚಿಣ್ಣನೊರ್ವನೆ ಬಲ್ಲನಾಗಿರಬೇಕು ಹಗರಣವ ||
ಎನ್ನನಾರೆಂದರಿವೆ ನಾನೇ |
ಚಿಣ್ಣನಾಗಿರ್ದವನು ನಿನ್ನೀ |
ಕಣ್ಣ ಮುಂದಿಹೆನೀಗಳಂಗದನೆಂಬ ಪೆಸರೆನಗೆ ||೬೩||

ಬಂದುದೇನ್ನೈ ಸ್ಮೃತಿಗೆ ಪೂರ್ವದೊ |
ಳೊಂದಿದಾದಶೆ ತನ್ನ ಬರವಿಂ |
ಗಿಂದು ಕಾರಣವದುವೆ ಬಾಲ್ಯಸ್ನೇಹದನುಬಂಧ ||
ಬಂಧುಬಳಗಗಳೊಡನೆ ಕಾಲನ |
ಮಂದಿರಕಕಾಲದೊಳು ಪಯಣವ |
ಸೊಂದಿಸುವ ದುಷ್ಕಾರ್ಯವೊಂದನು ಗೈದೆ ನೀನೆಂದು ||೬೪||

ಕೇಳಿದೆನು ನಾನಲ್ಲದೆನಗಿಂ |
ದೂಳಿಗವು ಬೇರುಂಟು ರಾಮನ |
ದೇಳು ಬೇಗದೊಳದರಿನೊಡತಿಯ ಸೆರೆಯ ಬಿಡಿಸಿನ್ನು ||
ಖೂಳತನದಿಂದರಿಯದೆಸಗಿದ |
ಕೇಳುಗಜ್ಜವನೆಣಿಸಲಾಗದು |
ಪಾಲಿಸೆಂದವನೀಶನಡಿಗಳಿಗೆರಗು ಭಕ್ತಿಯೊಳು ||೬೫||

ಆದಿನಾರಾಯಣನೆ ನರನಾ |
ಗೈದಿ ದುಷ್ಟರನಿರಿಯುತಿಹನಳಿ |
ವಾದುದಾರಿಂದಾಖರಾದಿಮಹಾಬಲಾಢ್ಯರಿಗೆ ||
ಆದರದೆ ನಿನ್ನಸುವನುಳಿಸಿದ |
ಭೂಧರೋಪಮಬಲನು ಕಿಷ್ಕಿಂ |
ಧಾಧಿಪನದಾರಿಂದೆ ಮಡಿದನು ಕೇಳ್ದು ನೀನರಿಯಾ ||೬೬||

ಹಿಂದೆ ಕಾರಾಗೃಹದೆ ನಿನ್ನನು |
ಬಂಧಿಸಿದಾ ಕಾರ್ತವೀರ್ಯನ |
ಕೊಂದ ಘನಬಲಪರಶುರಾಮನ ಭಂಗಿಸಿದರಾರು ||
ಬಂದು ಶರಣೆನೆ ವರವಿಭೀಷಣ |
ನಂದೆನಿನ್ನೀಪಟ್ಟವಿತ್ತವ |
ಗಿಂದು ಶರಧಿಗೆ ಸೇತುವನು ನೆರೆ ಬಂಧಿಸಿದರಾರು ||೬೭||

ಇನಿತುಮಂ ನೀನರಿತು ಸಂಧಿಯ |
ನನುಮತಿಸದಿರೆ ನಿನ್ನ ಬಂಧುಗ |
ಳನುಜಪುತ್ರಜ್ಞಾತಿಮಿತ್ರರುವೆರಸಿ ನೀಸ್ಸೈದೆ ||
ಮಿನುಗುತಿಹ ರಘುರಾಮನಂಬಿನ |
ಕೊನೆಯ ಸವಿಯನು ನೋಳ್ಪೆಯರಿದಿರು |
ನಿನಗೆ ತಿಳಿಪಿದೆನಿಂತು ರಾಮನು ಬೆಸಸಿದರ್ಥವನು ||೬೮||

ತಿಳಿವು ನಿನ್ನಯ ಮನದಭೀಷ್ಟವ |
ನುಳಿವುಪಾಯವೊ ಕೊಳುಗುಳವ ಹೊ |
ಕ್ಕಳಿವುಪಾಯವೊ ನುಡಿವುದೆನಲಾರಾವಣನು ಮುಳಿದು ||
ಎಲೆಲೊ ಹೊಯ್ಯೊಯ್ಕಲಿತುದೆಲ್ಲವ |
ಗಳಹುತಿರ್ಪುದು ದುಷ್ಟಕಪಿಯಿದ |
ಕಲಲೆ ಚಕ್ರಾಧೀಶವಾರ್ತೆಯ ಎನುತೆ ಗರ್ಜಿಸಿದ ||೬೯||

ಹುಲುನರಾಧಮನಗ್ಗಳಿಕೆಯನು |
ಹಲುಗಿರಿದು ಬೆರೆತಾಡುತಿರ್ಪುದು |
ನಿಲಲಿ ಸಾಕೀಕೀಚುಪಾಚದಕಿಲ್ಲಿ ರಾವಹುದೆ ||
ನಿಲಲು ನೆಳಲನು ಕಾಣದಲ್ಲ |
ಲ್ಲಲೆದು ಕಪಿಗಳ ಸೇರಿ ಜೀವಿಪ |
ಖಳನ ರಾಮನ ಸಭೆಯಿದೆಂದರಿದಿಂತು ಪೇಚುವುದು ||೭೦||

ಪೊಸತು ರಾವಣದಿಗ್ವಿಜಯಕಥೆ |
ವಸುಧೆಗಿದು ಸೋಜಿಗವು ವಾನರ |
ರಸಮಕಾವ್ಯಗ್ರಥನರೀತಿಯನಿಂದುಕೇಳಿದೆವು ||
ಹುಸಿಯುಮಂ ಹಸನೆನಿಸಿ ಮೆರೆವವೊ |
ಲುಸಿರುತಿರ್ಪುದು ಕೋತಿಗೀಪರಿ |
ಯೆಸೆವಕುಶಲತೆಯುಂಟೆ ಕಲಿಸಿರಬೇಕು ರಾಘವನು ||೭೧||

ಎಲವೊ ನಿಮ್ಮಯ ರಾಮನನ್ವಯ ।
ದೊಳಗೆ ಪೆರರಿಗೆ ಸೆರಗನೊಡ್ಡಿದ |
ಲಲನೆಯರೊಳೀನೆಗ್ಗನೆಣಿಸರೆ ಪುರುಷರಾದವರು ||
ಪಲವುಕಾಲದೆ ಸನ್ನ ಮನೆಯೊಳು |
ಮಲಗಿನಿದ್ರಿಪ ಸೀತೆಯನು ನಿ|
ರ್ಮಲಿನಭಾವದೊಳೊಂದಲೆಳಸಿಹನೇಸೊ ರಾಘವನು ||೭೨||

ಆದೊಡಂ ತಾನಾಗಬಹುದಿದು ।
ಸೋದರರು ನಿಮ್ಮಯ್ಯಗಳು ತಾಂ ।
ಭೇದವಿರದಂತೊರ್ವನರಸಿಯನೊರ್ವನನುಭವಿಸಿ ||
ಹಾದಿದೋರಿಹರವರ ಮಾರ್ಗವೆ |
ಮಾದರಿಯು ತನಗೆಂದು ರಾಮನು |
ಭೇದವಿಡನಾಸತಿಯ ಶುದ್ಧಾಶುದ್ಧಚರಿತದೊಳು ||೭೩||

ದಿಟ್ಟಗಂಡಸುತನವಿದಮಮಾ |
ಹುಟ್ಟದಿತರರಿಗಾದೊಡೊಳ್ಳಿತು |
ಬಿಟ್ಟುಕಳುಹಿದೊಡಲ್ತೆ ಮಡದಿಯ ಮತ್ತೆ ಕೂಡುವುದು ||
ಇಟ್ಟಣಿಸಿ ಮೇಲೆಸೆವ ತಾರೆಗ ।
ಳೊಟ್ಟುಗೂಡೀನೆಲಕುರುಳ್ದಂ |
ದಿಟ್ಟುಕೊಂಡಿಹ ಸೀತೆಯನು ಜಗಜಟ್ಟಿಯುಳಿಯುವನು ||೭೪||

ಕೇಳಿದನು ತಾಂ ವಾಲಿಜನು ಕೇ |
ಡಾಳಿಕಾಮುಕನಾದುರುಕ್ತಿಯ |
ನಾಳಿದನ ಸೌಭಾಗ್ಯದೇವಿಯೊಳೀದುರಾತ್ಮಕನು ||
ಕೀಳುನುಡಿವನು ಕೇಳಿಯಿನ್ನಾಂ |
ತಾಳಲಾಗದೆನುತ್ತೆ ಪೀಠದಿ |
ನೇಳದಿದ್ದಂತೊದೆಯೆ ಬಿದ್ದನು ರಾವಣನು ನೆಲಕೆ ||೭೫||

ಕಂಡು ರಕ್ಕಸರೊಡನೆ ಕೋಪಂ |
ಗೊಂಡು ತಮತಮಗುಳ್ಳತೋಮರ |
ಭಿಂಡಿವಾಳಗದಾಯುಧಂಗಳಿನೆಚ್ಚರರಿಭಟನ ||
ಕೊಂಡು ತಾನವನೆಲ್ಲ ದಿಟವುಟ |
ಚೆಂಡಿಸಂದದೆ ಹಾರಿ ಸಾಕಲೆ |
ಷಂಡರಿರ ಬಲ್ಗೈದುಬಿಜ್ಜಿಯಿದೇಕೆ ನಿಮಗೆಂದು ||೭೬||

ಘುಡುಘುಡಿಪ ಕೋಪದಲಿ ಕಂಗಳ |
ಕಿಡಿಗೆದರುತತ್ಯುಚ್ಚತರುವನು |
ಜಡಿಯುತೋಲಗದುಬ್ಬಿನಾಳ್ಗಳ ಬಡಿದು ಕೊಬ್ಬಿಳುಹಿ ||
ಬಿಡದೆ ಮತ್ತೆ ದಶಾಸ್ಯನಾಮುಡಿ |
ವಿಡಿಯುತೆತ್ತುತುಮಿಳುಹುತೌಂಕುತೆ |
ಘಡಘಡೆಲವೋ ಸುಳ್ಳನಾಡಿದುದಕ್ಕೆ ಫಲವಿದೆಕೊ ||೭೭||

ಕೆಂಡಮೆನ್ನದೆ ತಂದು ಬಲುಹಿನ |
ಖಂಡಲಕ್ಷ್ಮಿಯ ಮುಟ್ಟಲಂಜಿಕೆ |
ಗೊಂಡು ಬರಿಯಪಮಾನಕಾಸ್ಪದವಾಗಿ ಜೀವಿಸುಕೆ ||
ಬಂಡುನುಡಿಗಳನಾಡೆ ನಿನ್ನೀ |
ಬಂಡವಾಳವನರಿತ ಜನಗಳು
ಕಂಡು ನಂಬುವರೆಂದು ಬಗೆದೆಯ ಬಂಡರಕ್ಕಸನೆ ||೭೮||

ಇದೆಕೊ ಪೋಪೆನು ಮರೆಯಬೇಡೆಂ |
ದೊದೆದು ಭೋಂಕನೆ ಚಿಗಿದು ಗಗನಕೆ |
ಪದುಮನಾಭನ ರಾಣಿಯಿರವನು ಕಾಣ್ಬುದಭಿಮತವು ||
ಬೆದರುವೆನು ರಘುರಾಮನಾಜ್ಞೆಗೆ |
ವಿಧಿಸಲಿಲ್ಲದನೆನಗೆ ತಾನಿ |
ನ್ನಿದಕೆ ಚಿಂತಿಸಿ ಫಲವದೇನೆಂದರಸನಿದ್ದೆಡೆಗೆ ||೭೯||

ಚಂಡದನುಜರ ಗಂಡನರಿಭೇ |
ರುಂಡನಂಗದನೈದಿ ತನ್ನಯ |
ಮಂಡೆಯನು ಚಾಚುತ್ತೆ ರಾಘವನಂಘ್ರಿಕಮಲದೊಳು ||
ಚಂಡನಾದಸುರನನು ಸಭೆಯಲಿ |
ಕಂಡು ಬುದ್ಧಿಯನೊರೆಯೆ ತನ್ನಯ |
ಖಂಡೆಯದಲುತ್ತರವನಿತ್ತನು ದೇವರರಿವುದೆನೆ ||೮೦||

ಕೂಳರಕ್ಕಸನವನು ತಾಂ ಕ |
ಟ್ಟಾಳೆನುತ್ತುರೆ ನಂಬಿ ನಮ್ಮನು |
ಕೀಳುಗಂಡನೆ ಕೊರತೆಯೇನೆಂದರಸು ಕೈವೀಸೆ ||
ಮೇಲುವರಿದತ್ತಬುದಿಯೆನೆ ಕಪಿ |
ಜಾಲವೆಳ್ದುದು ಮೊರೆಯುತಿರ್ದುದು |
ಶೈಲತರುಗಳ ಕರದೊಳಾಂತುದು ಮುತ್ತಿದುದು ಪುರವ ||೮೧||

ಎರಡನೆಯಸಂಧಿ ಸಂಪೂರ್ಣಂ

## ಮೂರನೆಯ ಸಂಧಿ.

ಸೂಚನೆ || ರಿಪುತಿಮಿರಮಾರ್ತಾಂಡ ರಾವಣಿ |
ಕುಪಿತನಾಗಾನಾಗಶರದಿಂ |
ತಪನಕುಲಜರ ಕೆಡಹಲಹಿರಿಪುವವರನುಳುಹಿದನು ||

ಲೆಕ್ಕವಿಲ್ಲದ ವಾನರರು ಮದ |
ಸೊಕ್ಕಿ ಲಂಕಾಪುರಿಗೆ ಮುತ್ತಿಗೆ |
ಯಿಕ್ಕಿದಾವಾರ್ತೆಯನು ಕೇಳಿ ನಿಶಾಚರಾಧಿಪತಿ ||
ಉಕ್ಕುವತಿಕೋಪದಲಿ ನಾಲ್ಕುಂ |
ದಿಕ್ಕುಗಳ ಬಲಪಡಿಸಿ ರಕ್ಕಸ |
ರುಕ್ಕಿನಾಳ್ಗಳುವೆರಸು ಬಂದನು ರಾಮನಿಹ ದೆಸೆಗೆ ||೧||

ಒತ್ತಿದುದು ಬಲವೆರಡು ಕೈಕೈ |
ಹತ್ತಿದುದು ರಕ್ಕಸರು ಬಲುಗೈ |
ಗತ್ತಿಗಳನೆತ್ತೆತ್ತಿ ಹೊಯ್ದ್ಡಡೆ ಶೂರವಾನರರು ||
ಮತ್ತೆತರುಗಳನೆಸೆಯುತಸುರರ |
ನೆತ್ತಿಗಳ ಪೋಳ್ಗೈದು ಗಿರಿಗಳ |
ಕಿತ್ತು ಮೇಲಿಡಲಂಜಿ ಸರಿದುದು ಸಿಂದಕರಿಬಲವು ||೨||

ನೋಡಿ ತನ್ನವರಾಂತ ಹಾನಿಯ |
ನಾಡಲಸದಳವೆನಿಪ ರೋಷದೆ೦ |
ಳೌಡುಗಚ್ಚುತುಮೆಲವೊ ಕೋಡಗಖಂಡಿಗಿಸಿತದಟೆ ||
ಪಾಡೆ ನೀವಸುರರಿಗೆ ನಿಮ್ಮನು |
ಕೂಡಿ ಬದುಕಲು ಬಂದಯೋಧ್ಯೆಯ |
ಹೇಡಿಗಳ ಬರಹೇಳಿ ನೀವೆಂದಿಂದ್ರಜಿತ್ತೆರಗೆ ||೩||

ಕಂಡನಿದನಂಗದನು ಕೋಪಂ |
ಗೊಂಡು ಮೇಲ್ವಾಯ್ದಲವೊ ನಿಲುನಿಲು |
ಬಂಡದಾನವ ಬರಿದೆ ಸೇನೆಯನೇಕೆ ಬೆದರಿಸುವೆ ||
ಗಂಡುಗಲಿ ನೀನಾದೊಡಿನ್ನು |
ದ್ದಂಡಸತ್ವದ ಸವಿಯ ನೋಡಿದ |
ನುಂಡು ಬದುಕಿದೊಡೆಂದುಮುಳಿವಿಲ್ಲಕಟ ನಿನಗೆಂದು ||೪||

ಸಾಗಿ ಬೊಬ್ಬಿರಿದೊಡನೆ ಮುಷ್ಟಿಯ |
ತೂಗಿ ಲಂಘಿಸಿ ತಾಗಿ ಹೊಯ್ಯ |
ಲ್ಯಾಗ ಮುರಿದುದು ರಥವು ಕುದುರೆಗಳೊರಗಿದುವು ನೆಲಕೆ ||
ಬೇಗನಿರದಿಂದ್ರಾರಿ ಸರಳಿನ |
ವೇಗದಿಂದಾ ವಾಲಿಸೂನುವ |
ನಾಗ ನೆಲದೊಳಗೊರಗಲೆಚ್ಚನು ಕೂಡೆ ಬೊಬ್ಬಿರಿದು ||೫||

ಹೋದನಿವನೆಂದಸುರನೊಡನಾ |
ಮೇದಿನೀಶರ ಮೇಲೆ ಶರಗಳ |
ನೈದೆ ಸುರಿಯಲು ಕಂಡು ಲಕ್ಷ್ಮಣನಾಗಳೆದುರಾಂತು ||
ಹೋದೆ ಹೋಗಿನ್ನೆಲವೊ ನಿನ್ನನು |
ಕಾದುಕೊಳ್ವವರಾರು ಸಜ್ಜನ |
ಬಾಧೆ ನಿಂದುದು ಜಗದೊಳೆಂದಾರ್ದೆಚ್ಚನುರುಶರವ ||೬||

ಎಚ್ಚ ಲಕ್ಷ್ಮಣನಂಬನಾಗಳೆ |
ಕೊಚ್ಚಿ ರಾವಣಿಯೆಲೆಲೊ ಲಕ್ಷ್ಮಣ |
ಬಚ್ಚಣೆಯ ಬರಿಕೋಲಿನೆಮ್ಮನು ಗೆಲಲು ಬಗೆಯುವೆಯ ||
ಎಚ್ಚ ಮಂತ್ರಾಸ್ತ್ರಂಗಳಿರಲಿವ |
ನುಚ್ಚುಬಿಲ್ಲಿಂದೆನ್ನು ತನನಸು |
ಮುಚ್ಚಿ ಬಾಣಂಗಳಲಿ ಲಕ್ಷ್ಮಣನವನು ತರಿದೊಟ್ಟಿ ||೭||

ಹಿಂದೆ ಸುರಪನನಂಜಿಸಿದ ಕೊ |
ಬ್ಬಿಂದೆ ಕೈಕೊಂಡೆಮ್ಮ ಸರಿಸದೆ |
ಬಂದು ನಿಂದ್ಯೆ ಸಲ್ಲದೆಲೆ ನಿನಗೆವ್ಮೊಳತಿಮಥನ ||
ಮಂದಮತಿಯಾಗಕಟ ಕೆಡದಿರು |
ಸಂದೆಗವೆ ನಮ್ಮಿಂದೆ ಶರವಿ |
ನ್ನೊಂದು ಹೊರವಡಲುಸಿರು ನಿಲುವುದೆ ನಿನ್ನ ದೇಹದಲಿ ||೮||

ಗಾರುಗಿಡದಿರೆನುತ್ತೆ ಲಕ್ಷ್ಮಣ |
ನಾರುಶರಗಳಿನವನ ಬಿಲ್ಲಿನ |
ನಾರಿಯನು ಹರಿಗಡಿಯಲಭ್ರಕೆ ಹಾರಿ ಮಾಯೆಯಲಿ ||
ತೋರಗಿಡಿಗಳ ಮಳೆಯ ಕರೆಯುತೆ |
ಕೂರಸಿಡಿಲನು ಬಿಡದೆಯೊಡರಿಸು |
ತಾರುಭಟೆಯಿಂದಾಗಳಂಜಿಸುತಸುರಪತಿಸೂನು ||೯||

ವಿಾರಿ ವಿಸ್ಮಯಗೊಳಿಸುತಿರಲಸು |
ರಾರಿ ರಾಘವನದನು ಕಾಣುತೆ |
ಭೂರಿಸತ್ವನರಾತಿ ವುಸಿಯಲ್ಲೆಂದು ಹೊಗಳುತಿರೆ ||
ಘೋರವಿಷವುಗುಳ್ವ*ಹಿಯ ಶರವನು |
ದಾರಸಾಹಸನಿಂದ್ರಜಿತ್ತುವು |
ವಾರಣೆಯು ಗೈಯರಿಬಲವನೆಂದೆಸೆಯಲಾಕ್ಷಣದೆ ||೧೦||

ಉಕ್ಕಿಹಾಯ್ದುವು ಶರದಿನದರಿಂ |
ಲೆಕ್ಕವಿಲ್ಲದಫಣಿಗಳಹಿತರೊ |
ಳಿಕ್ಕತುಳರನು ಬಿಡದೆ ಮುತ್ತುತೆ ಕಚ್ಚಿ ಕೆಡಹಿದುವು ||
ಮಿಕ್ಕನುಸಿಗಳ ಪಾಡನಾರಕ |
ಟೊಕ್ಕಣಿಸುವರು ವಿಷದ ಗಾಳಿಗೆ |
ಸೊಕ್ಕಿ ಮಲಗಿದರರಿಯದೇನುಮನಿದ್ದ ಠಾವಿನೊಳು ||೧೧||

ನೋಡಿದರು ರಾಘವರು ಕಪಿಗಳು |
ಕೇಡುಗೆಟ್ಟುದನದನು ಸೈಸದೆ |
ಹೂಡಿದರು ಗರುಡಾಸ್ತ್ರವನು ತಾವೊಡನೆ ಕಾರ್ಮುಕಕೆ ||
ಜಾಡಿಸುತ್ತದನಸುವನಿತರೊಳ |
ಗಾಡಲೇನದನಹಿಗಳೊಗುಮಿಗೆ |
ಗೂಡಿದುವು ಮೆಯ್ಗಲುಗಲೀಯದೆ ನೃಪರ ಕೀಲ್ಗಳನು ||೧೨||

ತ್ರಾಣಗುಂದಿದ ನೃಪನನಸುರನು |
ತಾನು ಕಂಡಿವರಳಿದರೆಂದ |
ಜ್ಞಾನದಿಂ ಮಿಗೆ ಸಂಭ್ರಮಂಗೊಂಡರಮನೆಗೆ ನಡೆದು ||
ರಾಣಿವಾಸದೊಳಿರ್ದ ತಾತಂ |
ಗಾಣೆಯಿಟ್ಟಪೆನನೃತವಣಮಿ |
ಲ್ಲಾನರಾಧಮರೆನ್ನ ಕೈಯಿಂದಳಿದರಿಂದೆನುತೆ ||೧೩||

ಪರಮಸಂಭ್ರಮದಿಂದಮುರುಹಲು |
ಖರಯವೇನಿದು ಮಗನೆ ಹಗೆಯದು |
ಹರಿದು ಪೋದುದೆ ತಂಗಿಗಿತ್ತೆಯ ಪರಿದ ನಾಸಿಕವ ||
ಕರಣಿವಂಶದ ಮೂಗ ಕೊರೆದೈ |
ಧರಣಿಜೆಯ ನೀನಿಲ್ಲೆ ಬಲಿದೈ |
ತರಳ ನಿನ್ನಿಂದೆನ್ನ ಚಲ ತಾಂ ದಕ್ಕಿತಿಳೆಯೊಳಗೆ ||೧೪||

ಸತ್ಯವೀನುಡಿ ಕುವರ ಕೇಳಿ |
ನ್ನೆತ್ತಲಾದೊಡಮೆಯ್ದಲಾದು |
ವೃತ್ತನಂಗನೆ ಮಾಡುದಿಂದೆನ್ನೆದೆಯ ಗಾಯವದು |
ಹೊತ್ತು ಮೀರಿತು ಮಗನೆ ನಿಜಗೃಹ |
ದತ್ತ ತೆರಳೈ ಶ್ರಮವ ಕಳೆಯೆಂ |
ದುತ್ತಮಾಂಗವ ಸವರಿ ಕಳುಹಿದನವನನಸುರಪತಿ ||೧೫||

ಬಳಿಕ ಕರೆಯಿಸಿ ಜಾನಕಿಯ ಕಾ |
ವಲಿನ ಸರಮೆಯನವಳೊಳೆಂದನು |
ಜಲಜಮುಖಿಯನು ಕೊಂಡು ಪೋಗಿಯೆ ಕಳದೊಳಸುವಳಿದು ||
ನೆಲದೊಳೊರಗಿರ್ಪವಳ ರಮಣನ |
ಹಳಸಿದೊಡಲನು ತೋರು ಮುಂದಿ |
ನ್ನೆಳಸದಿರಲಾಮನುಜಮಾತ್ರನನಾವಗಂ ಮನದೆ ||೧೬||

ಒಳ್ಳಿತಾಗಲೆನುತ್ತೆ ಸರಮೆಯುಂ |
ನಿಲ್ಲದೈದಿ ವಿಮಾನದೊಳು ರಘು |
ವಲ್ಲಭನ ಸತಿಯೊಡನೆ ಕುಳ್ಳಿರ್ದಾಗಸಕ್ಕಡರಿ ||
ಎಲ್ಲಿ ರಾಮನ ಮೋಹರವೊ ತಾ |
ನಲ್ಲಿ ನಿಲ್ಲಿಸಿ ವರವಿಮಾನವ |
ನೆಲಿಹನೊ ಬಿಡದರಸಿ ತೋರಿದಳರಸಿಗರಸನನು ||೧೭||

ಕಂಡಳಂಗನೆ ಚಂಡಕರಕುಲ |
ಮಂಡಲಾಧಿಪರೆನಿಸಿ ಬಾಳಿಯೆ |
ದಂಡದಂದದಿನೊರಗಿ ನೆಲದೊಳು ತಮ್ಮ ಮೈಗಳೊಳು ||
ಕುಂಡಲಾಕೃತಿಗೊಂಡು ಕೀಲ್ಗಳ |
ನಂಡಲೆದು ಪೆಡೆದಿರ್ಪ ಫಣಿಗಳ |
ತಂಡದಿಂ ಕಳೆಯುಡುಗಿ ಮೌನದೊಳಿರ್ಪ ತನ್ನವರ ||೧೮||

ಅಕಟ ಕೆಟ್ಟೆನು ಕೆಟ್ಟೆನೌ ಸಲೆ |
ಯುಕುತಿಯಿನ್ನೇನೆನಗೆ ಪೇಳೌ |
ಮುಕುತಿರಾಜ್ಯಕ್ಕಧಿತಿಯೌ ಮತ್ಪತಿಯು ರಘುಪತಿಯು |
ವಿಕಳಮತಿಯಾದೆನ್ನ ಕೈವಿಡಿ |
ದಖಿಲಸಾಮ್ರಾಜ್ಯವನು ವರ್ಜಿಸಿ |
ಸುಖವನರಿಯದೆ ನನ್ನ ಕಜ್ಜದೊಳಸುವ ನೀಗಿದನು ||೧೯||

ಗತಿಯದಾರೌ ಸರಮೆ ತನಗಿ |
ನ್ನಿತರವೇನಿರ್ದೇನು ಫಲವೆ |
ನ್ನತುಳವೆಂದೆನಿಪೋಲೆಯೈಸಿರಿಯಕಟ ಜಾರಿದುದು ||
ಮತವು ತನಗಿನ್ನರಸನೊಡನಾ |
ಚಿತಿಯ ಪುಗುವುದು ನಿಲ್ಲಲಾಗದು |
ಪತಿಯೆ ಗತಿ ಸತಿಗೆನುತೆ ಪುಷ್ಪಕದಿಂದಮುರುಳಿದಳು ||೨೦||

ಇಂದು ಕಾಂತನ ಬಳಿಯ ಸೇರಿದೆ |
ನೆಂದು ಮೇಲಕ್ಕೆಳ್ದು ನಿಲ್ಲು |
ತ್ತಂದು ಕಂಡಳು ಮೊದಲ ಪುಷ್ಪಕದಲ್ಲಿ ತಾನಿಹುದ ||
ಸಂದೆಗವು ಮನಕಾಗೆ ಸರಮೆಯ |
ನಂದು ಕೇಳಿದಳೇನಿದಚ್ಚರಿ |
ಯಂದವಾಗಿದೆ ಕಾಂತನೆಡೆಯೊಳು ಬೀಳದೆಂತುಳಿದೆ ||೨೧||

ಎಂದ ಮಾತಿಗೆ ಸರಮೆ ನುಡಿದಳು |
ಕುಂದಲಾಗದು ತಾಯೆ ಮನದೊಳ |
ಗಿಂದು ಜೀವಕ್ಕುಂಟೆ ಕೊರತೆಯು ನಿನ್ನ ರಮಣಂಗೆ ||
ಇಂದ್ರವೈರಿಯ ಸರ್ಪಶರದಿಂ |
ದೊಂದಿರಲುಬೇಕಿವರು ಮೂರ್ಛೆಯ |
ನೊಂದೆರಡುಚಣವಿರ್ದೊಡಿಲ್ಲಿಯೆ ಕಾಣ್ಬೆವತಿಶಯುವ ||೨೨||

ಆದಿಮಾತೆಯು ನೀವಲಾ ನಿಮ |
ಗೈದುವುದೆ ವೈಧವ್ಯವನ್ಯತವಿ |
ದಾದೊಡಂ ಬೇರೊಂದು ಕುರುಪುಂಟದನು ಪೇಳುವೆನು ||
ಐದೆತನವಿರದಬಲೆಯನು ತಾ |
ನೈದೆ ಪುಷ್ಪಕವಾನಲವ್ಮ್ರದು |
ಭೇದವಿಲ್ಲೀಸುಡಿಯೊಳೊಪ್ಪುವುದೆನ್ನ ಬಿನ್ನಪವ ||೨೩||

ಈವಿಮಾನದ ಮಹಿಮೆಯತಿಶಯ |
ವಾವುದೆನೆ ಕೇಳ್ ತನ್ನೊಳಿರ್ಪುದ |
ನಾವಗಂ ತಾಂ ದೂರಗೈಯದೆ ಸೆಳೆದು ಕೊಂಡಪುದು ||
ಈವಿಧದೊಳಿದು ಮಹಿಯ ಪೋಲ್ಪುದು |
ದೇವಿಯಿಾಯಾಕರ್ಷಣದ ಬಲ |
ವೇ ವಿಮಾನದಿನಿಳೆಗೆ ಬೀಳಿಸದುಳಿಸಿದುದು ನಿನ್ನ ||೨೪||

ಎನುತಿವರು ಮಾತಾಡುತಿರಲ |
ತ್ತಿನತನೂಜವಿಭೀಷಣಾದಿಗ |
ಳೆಣಿಕೆಯಾ ಸುತುಪಾಯವೇನೆಂದಾ ಸುಷೇಣನನು ||
ಜನಪರುಳಿವಿಂಗೌಷಧವನುಸಿ |
ರನಿಮಿಷೋತ್ತಮವೈದ್ಯಸೂನುವೆ |
ನಿನಗೆ ತಿಳಿಯದುದುಂಟೆ ಲೋಕದೊಳೆನುತೆ ಬೆನಗೊಳಲು ||೨೫||

ಮೆರೆವ ಚಂದ್ರದ್ರೋಣಪರ್ವತ |
ಕಿರದೆ ಬೇಗನೆ ಪೋಗಿತರ್ಪುದು |
ವರಮಹೌಷಧವಿರ್ಪುದಲ್ಲಿಯೆನುತ್ತುಮವನುಸಿರೆ ||
ಭರದೊಳನಿಲಜನೀಗಳೇ ತಾಂ |
ತರುವೆನೆಂದಾಗಸಕೆ ನೆಗೆಯಲು |
ಗರುಡನೀಕ್ಷಿಸಿಯವನನೊಡಗೊಂಡಿಳಿದನಿಳೆಗಾಗಿ ||೨೬||

ರಕ್ಕೆಯಿಂ ಬಿಡದೆಳ್ದ ಗಾಳಿಗೆ |
ಸೊಕ್ಕಿಯುಳಿದುವು ಕಟ್ಟಿನಹಿಗಳು |
ದಿಕ್ಕುದಿಕ್ಕಿಗೆ ಪರಿದುಪೊಕ್ಕುವು ಕಂಡಬಿಲಗಳನು ||
ಅಕ್ಕಟೇನೀಗರುಡನಾಗಮ |
ವಕ್ಕಜವು ಹರಿಲೀಲೆಯೆನುತಂ |
ದುಕ್ಕುವಾನಂದದೊಳು ಮುಳುಗಿತು ಸಕಲಕಪಿಬಲವು ||೨೭||

ತಿಳಿದುದಾಗಳೆ ಮೂರ್ಛೆ ರಾಮಂ |
ಗೊಲಿದುಸುಡಿಸಿದನಂದು ಗರುಡನ |
ನಿಳೆಗೆ ನೀನೈತಂದು ನಮ್ಮನು ಕಾದೆ ಕಷ್ಟದೊಳು ||
ಸಲವಿನಿಂ ನೀನೈದಿ ನಿನ್ನಯ |
ನೆಲೆಯ ಸೇರೆಂದವನ ಕಳುಹಿಸಿ |
ಯುಲಿದನೊಸೆದು ವಿಭೀಷಣಾದಿಪ್ರಮುಖರನು ಕರೆದು ||೨೮||

ಬಾಧೆ ತನಗಾಯ್ತೆನುತುಮಿನಿತಕೆ |
ಖೇದವಾಂತುವೆ ನಿಮ್ಮ ಹೃದಯಗ |
ಳೀಧುರಕ್ಕೈತಂದ ಭಟರೇನೆಲ್ಲರುಳಿದಪರೆ ||
ಹೋದವರು ಹೋಗಲ್ಕೆ ಮತ್ತಿನ |
ಯೋಧರದಕೆದೆಗೆಟ್ಟು ಸಮರದೆ |
ಕಾದದುಳಿವರೆ ತಮ್ಮ ಕಾರ್ಯಕ್ಕೊಣೆಯವ ತಹರೆ ||೨೯||

ಬಿದ್ದೊಡಾನಿಂದೊರ್ವನೀಜಗ |
ವದ್ದಿ ಪೋಪುದೆ ಮುನ್ನ ದೊರೆವಡೆ |
ದಿದ್ದದೊರೆಗಳುಮಳಿದರವರೊಡನೈದಿತೇನಿಳೆಯು ||
ಬುದ್ಧಿಯಲಿ ಸುರಗುರುವ ಗೆಲ್ದೀ |
ಯುದ್ಧದಲಿ ಶತ್ರುಗಳ ನಿಗ್ರಹಿ |
ಪುದ್ಧತರು ನೀವಿರಲು ಕೊರತೆಯೆ ಜಯಕುಲಾಂಗನೆಗೆ ||೩೦||

ದುಷ್ಟದಶಕಂಧರನ ಶಿಕ್ಷಿಸಿ |
ಶಿಷ್ಟೆಯಹ ಸೀತೆಯನು ರಕ್ಷಿಸು |
ವಿಷ್ಟದೃಢಸಂಕಲ್ಪದಿಂದೈತಂದು ನೀವಿಂದು ||
ನಷ್ಟನಾದೊಡದೊರ್ವನೆಲ್ಲರು |
ಮಷ್ಟುಮಾತ್ರಕೆ ಧರ್ಮಮಾರ್ಗ |
ಭ್ರಷ್ಟರೆನಿಸುವುದೊಪ್ಪಿತವೆ ರಣಧೀರರೆನಿಸರಿಗೆ ||೩೧||

ಇಂತು ಹುರಿಗೊಳಿಸುತ್ತೆ ಕಪಿಗಳ |
ನಂತಕಾಂತಕನುಗ್ರಚಾಪಕ |
ಸಂತಶರಗಳ ಪೂಡಿಯಿಸಲಂದಹಿತಸೇನೆಯೊಳು ||
ಆಂತ ಬಿರುದರ ಲಕ್ಷವಳಿದುದು |
ಪಿಂತೆ ಬೆಂಬಲಕಿರದೆ ಬಂದವ |
ರಂತು ಮಡಿಯುತ್ತಿರಲಸಂಖ್ಯರು ಮತ್ತೆ ಗಗನದೊಳು ||೩೨||

ತಾಯೆ ನೋಡೌ ನಿಮ್ಮ ರಾಯನು ।
ಮಾಯದಾನರನಲ್ಲವೇನೌ ।
ನೋಯಿಸುವುವೇನಲ್ಪಸರ್ಪಗಳೀತನಂಗವನು ॥
ಶ್ರೀಯರಸನಿವನದಿರಿನಿಲ್ಲಿಗ ।
ಜೇಯವಿನತಾ ಪುತ್ರಸ್ಸೈತಂ ।
ದಾಯುಸವ ಹರಿಸಿದನು ಮಿಕ್ಕರಿಗುಂಟೆ ಪುಣ್ಯವಿದು ॥೩೩॥

ಇಂದಿನಾಕ್ರೋಶದಲಿ ರಾವಣ ।
ನಂದಗಿಡದೇನುಳಿಯಲಾರ್ಪನೆ ।
ಕೊಂದಪನು ನಿಮ್ಮರಸನವನನು ಬನ್ನಿ ಪೋಗುವೆವು ॥
ಎಂದು ಸರಮೆಯು ಧೈರ್ಯವೀಯು ।
ತ್ತಿಂದುಮುಖಿಸೀತೆಯನು ಮರಳಿಸಿ ।
ತಂದು ಬಿಟ್ಟಳಶೋಕವನದೆಡೆಗಾಗಳನುಸಯದೆ ॥೩೪॥

ಮೂರನೆಯಸಂಧಿ ಸಂಪೂರ್ಣಂ.

## ನಾಲ್ಕನೆಯ ಸಂಧಿ.

ಸೂಚನೆ ॥ ನದೆದು ವಾನರರಗ್ರಗಣ್ಯರ ॥
ನೊದೆದು ಶಕ್ರಾತ್ಯಯುಧವ ಲಕ್ಷ್ಮಣ ।
ನೆಡೆಯನೋಯಿಸಿದ ಸುರಪತಿಯನು ರಾಮ ಭಂಗಿಸಿದ ॥

ಒಂದುಕಡೆಯೊಳಗೆರಡುಕೋಟಿ ।
ಸ್ಯಂದನವ ನೆಗ್ಗಿದನು ಲಕ್ಷ್ಮಣ ।
ನೊಂದೆಡೆಯ ಮುಕ್ಕೋಟಿಗಜಗಳ ಕೊಂದನನಿಲಜನು ॥
ಹಿಂದುಮುಂದಾಯ್ತುಸುರಸೇನೆಯು ।
ಮುಂದುವರಿದೈತರ್ಪುದಡಗಿತು ।
ಬಂದು ಮುಟ್ಟಿತು ವಾರ್ತೆಯಿದು ರಾವಣನ ಕಿವಿಯ ॥೧॥

ಎಲೆಲೆ ಸುರಪನ ಜೈಸಿದಾತನ ।
ಗೆಲವದೇನಾಯ್ತುರಿಗಳುಳಿದರೆ ।
ಫಲಿಸದಾಡುದೆ ಬೊಮ್ಮನಿತ್ತಂಬಿವರೊಳಿಂದಕಟ ॥
ಅಳವುಗೆಟ್ಟಿಮ್ಮವರು ತಾವುರೆ ।
ಬಳಲುತೋಡುವರಿದುವೆ ಚೋದ್ಯವು ।
ಛಲರೆ ರಾಮನ ಮೈಮೆಯುಸದಳವೆಂದನಸುರೇಂದ್ರ ॥೨॥

ಅಸುರವಲ್ಲಭನಾ ಮುಖಾವಳಿ |
ಮುಸುಕಿದತಿಚಿಂತೆಯೊಳು ಕಂದಿರ |
ಲಸಮವೀರರು ಕಂಡು ಪೀಳೆಯಗೊಂಡು ಮುಂಕೊಂಡು ‖
ವಸುಧೆ ಕಂಪಿಸಲೊದೆದು ನೆಲಸನು |
ವಿಷಮರಣವಿಂದೆಮಗೆ ತಮಗೆಂ |
ದುಸಿರು ಮಗುಚದ ತೆರದೊಳಾರ್ಭಟಿಸುತ್ತೆ ತೆರಳಿದರು ‖೩

ಮುರಜಡಿಂಡಿಮಪಟಹರಭಸದೆ |
ಪರಿಪರಿಯೊಳಬ್ಬರಿಸಿ ದಾನವ |
ರುರುಚತುರ್ಬಲವೈದೆಕಂಡದನಾವಿಭೀಷಣನು |
ಕರೆದು ಸುಗ್ರೀವಂಗೆ ನುಡಿದನು |
ವರಮಹಾರಥರೈದುವಂತಿದೆ |
ಬರುತುಮಿರ್ಪೀಸೇನೆಯುವರದು ನಮ್ಮ ಬಲಕರಿದು ‖೪‖

ಬೀಳುಕುಡು ನಾಯಕರನಿವರೊಡ |
ನಾಳುತನವಿತರರಿಗೆ ಹರಿಯದು |
ಮೇಳವಿಸು ಬೇಗೆನಲು ಹೊಕ್ಕರು ವಾನರೇಶ್ವರರು ‖
ಸೀಳಿದರು ಕರಿತುರಗತತಿಯನು |
ಹೋಳುಗಳೆದರು ನಿಖಿಲರಥವನು |
ಬೀಳಹೊಯ್ದರು ಬಹುಪದಾತಿಯನಿರದೆ ಮುಷ್ಟಿಯೊಳು ‖೫‖

ಗಜರಿಗರ್ಜಿಸಿ ಹೊಯ್ವ ಮರುದಾ |
ತ್ಮಜನ ಬಿಂಕವ ನಿಲಿಪೆನೆಂದುರು |
ಭುಜಬಲನು ಧೂಮ್ರಾಕ್ಷನೆಂಬವನೈದಿ ರಥದೊಳಗೆ ‖
ಗಜತುರಂಗಪದಾತಿಗಳ ನಜು |
ಗಿಜಿಯಗೈದಾಪೌರುಷಾದ್ರಿ |
ವ್ರಜವ ಭೇಧಿಪ ವಜ್ರವಿದೆಕೊಳ್ಳೆನ್ನು ತಾರ್ಭಟಿಸಿ ‖೬‖

ಸರಲ ಸರಿಯನು ಸುರಿಯೆ ಮಾರುತಿ |
ಸರಕುಗೈಯದೆ ಹಾಯ್ದು ರಿಪುವನು |
ಭರದೆ ಪಿಡಿದಂದೆತ್ತಿಯೊಗೆದನು ಧರೆಯಮೇಲಿರದೆ ‖
ಸರಿಯಲವನಸುವದನು ಕಂಡೊಡ |
ನುರುಪರಾಕ್ರಮಿ ವಜ್ರದಂಷ್ಟ್ರನು |
ಕರೆದು ಕೆಣಕಿದನನಿಲಜನನಾಹವಕೆ ನಿಲ್ಲೆಂದು ‖೭‖

ಕಂಡನದನಂಗದನು ನಿಲುನಿಲು |
ಭಂಡ ದುನುಜಾಧಮನೆ ತನ್ನನು |
ಕಂಡು ಮೊದಲಲಿ ಬದುಕಿದಾ ಬಳಿಕತ್ತ ಪೋಗೆನುತೆ ||
ಕೊಂಡು ಬಂಡೆಯನೊಂದನವನನು |
ದಿಂಡುದರಿವೆನೆನುತ್ತು ಮೆಸೆಯಲ |
ಖಂಡಶರಗಳ ಸುರಿದು ದಾನವನದನು ಪುಡಿಗೈದ ||೮||

ಫಡಫಡೆನುತಂಗದನು ತರುವನು |
ಬುಡದೊಡನೆ ಕಿಳ್ತೊಂದನಾತನ |
ಮುಡಿಗೆ ಗುರಿಗಟ್ಟುಗ್ರಕೋಪದಿನಿಡಲು ತಲೆಯೊಡೆದು ||
ಕೆಡೆಯಲವನಿಳೆಯೊಳಗೆ ಸೈಸದೆ |
ದೃಢಪರಾಕ್ರಮನಾದಕಂಪನ |
ನೊಡನೆ ಮುಳಿದೈತಂದು ಕಣಕಿದಸಂದು ಪವನಜನ ||೯||

ಅಂಕದೊಳು ರಥವೇರಿ ಮಿಗೆ ನಿ |
ಶ್ಶಂಕನಾಗವನೈದಿಯಂಬನು |
ಬಿಂಕದಿಂದೆಸೆಯಲ್ಕೆ ಕಂಡುರೆ ಮಸಗಿ ಮನದೊಳಗೆ ||
ಹೂಂಕರಿಸಿ ಹುರಿಯೇರಿ ಬಾಲದ |
ಸಂಕಲೆಯೊಳಾತನನು ಬಂಧಿಸಿ |
ಲಂಕೆಗಿದು ಬಲಿಯೆಂದು ಮಾರುತಿ ಗುದ್ದಲವನಳಿದ ||೧೦||

ಜಗಳದಲಿ ಧೂಮ್ರಾಕ್ಷನಳಿದನು |
ಚಿಗಿದುದಸುವಾ ವಜ್ರದಂಷ್ಟ್ರನ |
ನಗಲಿ ಹಾ ಹತವಿಧಿಯುಕಂಪನ ನೆಳಲನೊರೆಸಿದುದು ||
ನಗುವರೆಡೆಯೊಳಗೆಡಹಿಬಿದ್ದೆವು |
ವಿಗಡರಕ್ಕಸರಾಟ ನಿಂದುದು |
ಹಗೆಗಳುನ್ನತದಶೆಯನಾಂತರೆನುತ್ತೆ ಮರುಮರುಗಿ ||೧೧||

ಮರುಗಿ ಫಲವೇನೊಡೆಯನನುಪಿಂ |
ಗೆರಡ ಬಗೆಯದೆ ಶಿರವನೀವುದು |
ಪರಮನೀತಿಯೆನುತ್ತು ಮೊರೆವರು ಬಲ್ಲಕೋವಿದರು ||
ಅರರೆ ನಾನಂತಲ್ಪಬಲನೇ |
ನಿರಿವೆನಾ ಹರಿಹರರು ಬಂದೊಡ |
ಮೊರೆಯಲೇಕೆಂದಾ ಪ್ರಹಸ್ತನು ಸಮರಕನುವಾದ ||೧೨||

ಮೊಳಗಿದುವು ನಿಸ್ಸಾಳಪಟಹಗ |
ಳಳುಕಿದುದು ವಾನರರ ಸೇನೆಯು |
ಖಳನ ರಥವಡ್ಡೈಸಿ ನಿಂದುದು ಕಣದ ಮಧ್ಯದಲಿ ||
ಎಲೆಲೆ ರಾಕ್ಷಸರಾಜಕಟಕವ |
ಗೆಲುವವನ ಹೆಸರೇನು ತಾನವ |
ನಳವುದೋರಲದೇಕೆ ತಡವೆಂದಸುರ ಗರ್ಜಿಸಿದ ||೧೩||

ಅದಟಿದೊಳ್ಳಿತು ಬಂದುದಾಯಿತು |
ಕದಲಬೇಡಿಲ್ಲಿಂದೆ ನೀನೆಂ |
ದೊದರಿಯಾರ್ಭಟಿಸುತ್ತುಮಾಸುಗ್ರೀವನುರೆ ಕೆರಳಿ ||
ಪದದ ಘಾತಕೆ ಕುಸಿಯೆ ಫಣಿಪತಿ |
ಯೆದೆಗಳದಿರಲ್ದಿಗ್ಗಜಂಗಳಿ |
ಗಿದಿರೊಳೈದಿ ರಥಾಶ್ವವನು ಬಿಡದೊದೆದನಂಘ್ರಿಯೊಳು ||೧೪||

ಸೊಕ್ಕಿ ಯೊರಗಿದುವಿಳೆಗೆ ಬಾಯಿಂ |
ದುಕ್ಕಿ ಸುರಿದುದು ರುಧಿರವದನಾ |
ರೊಕ್ಕಣಿಸುವರು ಮೃತಿಯನೊಂದಿದುವಿರದೆ ತೇಜಿಗಳು ||
ಅಕ್ಕಜದ ಭಟನಾರೊ ಈತನ |
ಸೊಕ್ಕ ಮುರಿಯುವೆನೆಂದು ಶರಗಳಿ |
ನಿಕ್ಕಲಸುರನು ತಸುವ ಮರೆದನು ವಾನರಾಧಿಪನು ||೧೫||

ಘುಲ್ಲಣೆಯ ನಿಲಿಸೆಲವೊ ನೀನಿ |
ನ್ನೆಲ್ಲಿಗೈದುವೆ ನಿನ್ನ ಪೌರುಷ |
ವಿಲ್ಲಿ ಕೊಳ್ಳದೆ ಬೀರಪಡೆವಳನೆನ್ನನೇನರಿಯಾ ||
ಖುಲ್ಲ ನೀನಿಂದೆಮ್ಮ ಪತಿಯನು |
ಮೆಲ್ಲನೊರಗಿಸಿ ಜಾರಲೆಳಸುವೆ |
ನಿಲ್ಲು ಕೊಳ್ಳಿದನೆಂದು ರಭಸದೆ ನೀಲನಡಹಾಯ್ದು ||೧೬||

ಅಂದು ತಾಗಿದೊಡರಿಯ ಸಾರಥಿ |
ಸಂದುಪೋದನು ಬೆದರಿದಸುರನು |
ಮುಂದುಗೆಟ್ಟನು ಬಳಿಕ ಧುಮ್ಮಿಕ್ಕಿದನು ಧಾರಿಣಿಗೆ ||
ಇಂದು ನಿನಗಾಯ್ತಿಳೆಯ ಋಣಸಂ |
ಬಂಧವೆಲವೋ ಕೋತಿ ಕೊಳ್ಳಿದ |
ನೆಂದು ಗದೆಯಿಂದಂದು ಹೊಯ್ಯಲು ನೊಂದನಾನೀಲ ||೧೭||

ಕೆರಳಿದನು ಕಪಿವರನು ದೈತ್ಯನ |
ಶಿರಕೆ ಲಂಘಿಸಿ ಬಂಡೆಯೊಂದನು |
ಭರದಿನಿಡಲದು ತಾಕೆ ಖಳನಸು ಜಾರಿತಾಕ್ಷಣದೆ ||
ಮರಳಿ ತರುಗೊಂಡೆಲವೊ ರಕ್ಕಸ |
ನೊರಜುಗಳೆ ಫಡ ತೊಲಗಿ ನೀವೆಂ |
ದೆರಗಿ ಹಾಯ್ದನು ಬಟ್ಟಬಯಲಾಯ್ತಸುರಸೇನೆಯೊಳು ||೧೮||

ಚೆಲ್ಲಿ ಕಳೆದುಳಿದಸುರರೆಣ್ದೆಸೆ |
ಗಲ್ಲಿಗಲ್ಲಿಗೆ ಚಿಗಿದುಪೋದರು |
ತಲ್ಲಣಿಸುತಾಗಜಹಯಾವಳಿಯೆಲ್ಲೊ ಸೇರಿದುವು ||
ಬಲ್ಲಿದರು ಸುಗ್ರೀವನಾಳ್ಗಳು |
ನಿಲ್ಲಲರಿದಸುರರ್ಕಳೆಂಬಾ |
ಘುಲ್ಲಣೆಯು ಕೇಳಿಸಿತು ರಾವಣ ಬೆಚ್ಚಿಬೆದರಿದನು ||೧೯||

ಹುತವಹನಸುತನಿಂ ಪ್ರಹಸ್ತನು |
ಗತಿಸಿಪೋದಾವಾರ್ತೆ ಹಬ್ಬಿತು |
ಚತುರರಣಮಲ್ಲಂಗವಿಾದುರ್ಗತಿಯೆ ಶಿವ ಎನುತೆ ||
ರಥವ ಮಂಡಿಸಿ ತನ್ನ ಮೆಚ್ಚಿನ |
ರಥಿಕರನು ಕೂಡುತ್ತುಮಪ್ರತಿ |
ಹತನು ರಿಪುಹುತವಹನು ನಡೆದನು ರಣಕೆ ದಶಶಿರನು ||೨೦||

ಕೊಳುಗುಳದ ನಿಸ್ಸಾಳಭೇರಿಗ |
ಳಳವಿಗುಡುವವರಿದ್ದೊಡ್ಡೈದಲಿ |
ತಲೆಯನುಳುಹಿಸಿ ಕೊಳ್ವರೆರಗಲಿ ಭೂಪನಡಿಗಳಿಗೆ ||
ತಳುವಲಾಗದು ಬೇಗಬಹುದೆಂ |
ದುಲಿವುಬೆನೆ ಮೊಳಗಿದುವು ದಾನವ |
ಬಲವು ಮಿಗೆ ಕಲಿಯೇರಿ ಬಂದುದು ದೊರೆಯ ಬೆಂಬಲಕೆ ||೨೧||

ಫಡ ನಿಶಾಚರಕುನ್ನಿ ನಿನ್ನಯ |
ಪಡೆಗೆ ಬೆದರುವೆವೆಂದು ಬಗೆದೆಯ |
ಕಡೆಯ ಕಾಲವು ನಿನಗೆ ನಿನ್ನಯ ಪಡೆಗವೊದವಿದುದು ||
ದುಡುಕಿನಿಂ ನೀನೈದಿ ನಮ್ಮಯ |
ನಡುವೆ ಸಿಕ್ಕಲುಬಹುದೆ ನಿನ್ನನು |
ಬಿಡಿಸಿಕೊಳ್ವವರಿಲ್ಲಲಾಎಂದನಿಲಜಾದಿಗಳು ||೨೨||

ಒಂದುಕಡೆಯೊಳಗೆಂಟುಕೋಟಿ |
ಸ್ಯಂದನಂಗಳ ನೆಗ್ಗಿ ಗರ್ಜಿಸು |
ತೊಂದುಕಡೆಯೊಳಗೈದುಕೋಟಿಯ ಗಜವ ಕೆಡಹಿದರು ||
ಸಂದಹಯತತಿಯಾರುಕೋಟಿಯು |
ಕೊಂದಕಾಲಾಳೆಣಿಕೆಯಿಲ್ಲವು |
ಮುಂದುವರಿದುರೆ ಬೀದಿವರಿದರು ಮಿತ್ತುರೂವಿಸಲಿ ||೨೩||

ಉಂಟೆ ನಿಮಗಿನಿತದಟು ನೀಂ ಬೆ |
ನ್ನಂಟುವದಟೆಗರಹಿರೊ ನಮ್ಮೊಳ |
ಗುಂಟು ದಿವ್ಯೌಷಧವು ತವಿಸಲ್ ಮದವನಿದನೆಂದು ||
ಎಂಟುದಿಕ್ಕುಗಳಲುಗೆ ಕೆದರು |
ತ್ತೆಂಟುಸಾಸಿರಕಣೆಗಳನು ದಶ |
ಕಂಠನಾಲಿದನಾಗಳವನೀತಲವು ಬಿರಿವಂತೆ ||೨೪||

ಬಿದ್ದನನಿಲಜನದಿರಿ ಜಾಂಬವ |
ನದ್ದನಂಬಿನ ಸರಿಯೊಳಂಗದ |
ಸಿದ್ದನಲುಗದೆ ನೀಲಗವಯಗವಾಕ್ಷರೊರಗಿದರು ||
ಸುದ್ದಿಯೇನೋಕಪಿಗಳರಸನ |
ಸದ್ದುಕೇಳಿಸದಾಯ್ತು ರಾವಣ |
ಗೆದ್ದನೆಂಬಬ್ಬರವ ಕೇಳ್ದನು ಕಪಿಕುಲಾಧಿಪನು ||೨೫||

ಎಲೆಲೆ ರಘುರಾಜೇಂದ್ರವಾಹಿನಿ |
ಬಳಲಿತೇ ರಿಪುವಹಹ ಗೆಲಿದನೆ |
ಬಲಿದ ಮೂರ್ಛೆಯೊಳೆನ್ನನೊರಗಿಸುತಿಂತು ಗೈದನಲಾ ||
ಖಳನ ಮೂಳೆಯು ಮುರಿವೆನೆಂದುರೆ |
ಮುಳಿದು ರಭಸದಿನೆದ್ದು ಹಗೆಯನು |
ಕಳದೊಳರಸುತೆ ತಾಗಿ ಹೊಯ್ದನು ರಥವ ಬೊಪ್ಪರಿದು ||೨೬||

ತೇರುಮುರಿಯಲ್ಕಾದಶಾಸ್ಯನು |
ಹಾರಿದನು ಪಡಿದೇರ್ಗೆ ಮಾಮಾ |
ಶೂರನೀತನು ಸತ್ವಮುಂಟಿವಗೆಂದು ಬಿಲ್ದುಡುಕಿ ||
ಕೂರಲಗಿನಿಸಲಾತನದನುರೆ |
ಜಾರಿಸುತೆ ಮೇಲ್ವಾಯ್ದು ರಿಪುಶಿರ |
ಮೇರುವಡೆಯಲ್ಕರದೊಳಪ್ಪಳಿಸಿದನು ಬೀಳೆನುತೆ ||೨೭||

ಮರೆದನಂಗವನಾಗಳಸುರನು |
ಭರದಿನಾಗಳೆ ಚೇತರಿಸಿಯಾ |
ಸರಸಿಜೋದ್ಭವ ಮಂತ್ರಪೂರಿತಬಾಣವನು ಹೂಡಿ ||
ಬಿರುನುಡಿಯ ಗಡಣದಲಿ ಭಂಗಿಸಿ |
ಜರಿಯುತಿಸಲದು ಭಾನುನಂದನ |
ನುರವಪೊಕ್ಕುದು ಮರವೆಯಿತ್ತುದು ಕೆಡಹಿತುರ್ವಿಯೊಳು ||೨೮||

ಕಂಡನಿದನಗ್ನಿಜನು ವಿಲಯದ |
ಖಂಡಪರಶುವಿನುಗ್ರಕೋಪವ |
ಕೊಂಡು ಬಾಲವ ಬೆಳಸಿಯಸುರನಕಟ್ಟಿರಥದೊಡನೆ ||
ಚಂಡಬಲನಾದೊಡಿದನಿಂದೆಲೆ |
ಭಂಡ ದನುಜಾಧಮನೆ ಬಿಡಿಸಿಕೊ |
ಗಂಡತನವನು ಕಾಣ್ಬೆನೆಂದಿರದೆಸೆದನಂಬರಕೆ ||೨೯||

ಮರಳಿ ನೆಲಕದು ಬೀಳುವನಿತರೊ |
ಳಿರದೆ ಪೊಸರಥದೊಳಗೆ ಕಾಣಿಸು |
ತುರುವ ಶರಗಳಿನಿಸುತುಮಿರ್ದನು ರಾವಣನು ಕಪಿಯ ||
ಅರುಹಲಪ್ಪುದೆ ನೀಲನೇಂ ಸಂ |
ಗರದರಿದ್ರನೆ ಪಗೆಯ ಪೆಗಲೊಳು |
ಮೆರೆಯುತಣೆಕಲ್ಲಾಡಿದನು ತಚ್ಛಿರದ ಮಕುಟಗಳ ||೩೦||

ಪಿಡಿವೆನಿವನನೆನುತ್ತೆ ರಾವಣ |
ಹೆಡತಲೆಗೆ ಕೈನೀಡಲದನವ |
ನೆಡದ ಕೈಯಿಂ ಪಿಡಿದು ಮುಷ್ಟಿಯಿನೆರಗಿದೊಡೆ ಶಿರಕೆ ||
ಸಿಡಿಲುಬಡಿದವನಂತವನು ತಡ |
ಬಡಿಸಿ ತೇರಿಂದಿಳೆಗೆ ಬೀಳಲು |
ದೃಢಪರಾಕ್ರಮಿ ನೀಲನೊದೆದು ತಿರುಂಗಲಾಕ್ಷಣದೆ ||೩೧||

ಹೇಯವೆಂಬುದನರಿದು ಮೆಳ್ದಾ |
ಗ್ನೇಯಬಾಣದೆ ಖಳನು ನೀಲನ |
ನೋಯಿಸಲು ಪಿಂದೆಸೆಯಿನಿರದವನಿಳೆಯ ನೆಮ್ಮಿದನು ||
ಬಾಯ ಬಿಟ್ಟುದು ಪಡೆಯು ಸೇನಾ |
ನಾಯಕಂಗಳಿವೆಂದು ಕೇಳ್ದದ |
ವಾಯುನಂದನನಟ್ಟಿ ನಿಲಿಸಿದನಂದು ರಾವಣನ ||೩೨||

ಕೂಡೆ ಖಳ ಬೆರಗಾಗಿ ಸಿಡಿಲ ಸ |
ಗಾಢಕೆಯೊಳಾರ್ಭಟಿಸಿ ತಿರುವಿಗೆ |
ಜೋಡಿಸುತೆ ಮಾರ್ಗಣವನೆಸೆಯಲ್ಕಂಡು ಪವನಜನು ||
ನೋಡಲೀಹುಲುಗಣೆಯಿನೆನ್ನ ಸು |
ನಾಡಕೋಡಗವೆನ್ನು ತೆಚ್ಚನು |
ಮೂಢನಂದಿನ ನಗರದಹನವ ಮರೆದನೆಂದೆನುತೆ ||೩೩||

ಎಸೆದ ರಾವಣನಂಬ ಮುರಿಯುತೆ |
ನಸುನಗೆಯೊಳಿಂತೆಂದನೆಲವೋ |
ಅಸಮಭುಜಬಲನೆಂಬ ಜಸವಾಂತಿರ್ಪೆ ಲೋಕದೊಳು ||
ಪುಸಿಯೊ ನಿಜವೋ ನೋಳ್ಪೆನೆಮಗಿಂ |
ದೆಸೆವಬಲಮೆನಿತುಂಟದೆಲ್ಲವ |
ಪಸರಿಸಿರ್ದರು ಮೂರುಮೂರುಂಗುದ್ದಸೀವುದೆನೆ ||೩೪||

ಒಪ್ಪಿತೊಪ್ಪಿತು ಮಾತು ಕಪಿ ನೀಂ |
ತಪ್ಪಲಾಗದು ಜೋಕೆ ಸಾರಥಿ |
ಯಿಪ್ಪನಿಲ್ಲಿಯೆ ಸಾಕ್ಷಿಯಪ್ಪನು ನಮ್ಮ ನಡೆವಳಿಗೆ ||
ಒಪ್ಪಿಕೊಳ್ಳೊದಲೆನ್ನದನು ನೀ |
ನಪ್ಪಿಕೊಳ್ಳೀನೆಲನನೆನುತಂ |
ದಪ್ಪಳಿಸಿದನು ಬಲಿದಮುಷ್ಟಿಯಿನಸುರನನಿಲಜನ ||೩೫||

ಕರಣ ಕಳವಳಗೊಳಲು ಹನುಮನ |
ಹರಣ ತೆಗೆಬಗೆಯಾಯ್ತು ಪವನನ |
ತರಳನಾದುದರಿಂದೆ ಬದುಕಿದನಲ್ತೆ ಬೇರುಳಿವೆ ||
ಮರಳಿದುವು ಸಕಲೇಂದ್ರಿಯಂಗಳು |
ತೆರದುವಕ್ಷಿಗಳಾಗ ನಿರುಕಿಸಿ |
ಕಿರುನಗೆಯ ರಾವಣನನೆದ್ದನು ಮುಷ್ಟಿಯನು ನೆಗಹಿ ||೩೬||

ಭಲರೆ ದನುಜೇಶ್ವರನೆ ನಿನ್ನಯ |
ಬಲಕೆ ನಾಂ ಮೆಚ್ಚಿದೆನು ಕಾಣೆನು |
ನೆಲದೊಳಾರುಮನಹಹ ನಿನಗೆ ಸಮಾನರೆನಿಪರನು ||
ಚಲವ ಗೈದೆನು ನಿನ್ನೊಳರಿಯದೆ |
ಫಲವದೇನಿನ್ನಾಡಲದನಿಂ |
ದುಲಿದತಪ್ಪಿಂಗಿದನು ಕೊಳ್ಳೆಂದಾರ್ದು ಗುದ್ದಿದನು ||೩೭||

ಸುರರುಘೇಯೆಂದುಬ್ಬಿ ನಲಿದರು |
ಮೊರೆದುವಗಣಿತವಾದ್ಯವಭ್ರದೆ |
ನಿರಿನಿಳಿಲು ಸಿಟಿಲೆನಿಸಿತವನಿಯೊಳದ್ದನೆಂಬಂತೆ ||
ಸುರವಿರೋಧಿಯು ನೆಲದೆ ಪವಡಿಸಿ |
ಗೊರಗೊರೆಂಬುತ್ಕ್ರಮಣನಿನದದೆ |
ಪರಿಯೆ ರಕ್ತದ ಧಾರೆ ಬಾಯಿಂದಳಿದನೆನಿಸಿರಲು ||೩೮||

ಹೆದರಿದನು ಚಿತ್ತದೊಳು ಹನುಮನು |
ಪದರಿದನು ಸರಿಯಲ್ಲೆನುತ್ತೀಂ |
ಗದರುವನೊ ರಘುಪುಂಗವನು ಮೇಣೊಪ್ಪುವನೊ ಮನದೆ ||
ಸದೆದೆನೇಕಿಂದಿವನನಿನಿತಕೆ |
ಚದರಲೇಕಿವನಸುವು ವಿಧಿಯಿದ |
ನೊದವಿಸಿತೆ ತನಗೆಂದು ಚಿಂತೆಯೊಳದ್ದಿ ಮುಳುಗಿದನು ||೩೯||

ಅಸಿತರೊಳಗುಸ್ಸೆಂಬ ಸುಯ್ಲಿನ |
ನಿಸದ ಕೇಳ್ದುದು ಕಣ್ಮಿನೆವೆಗಳು |
ಚಣದೆ ತೆರೆದುವು ಕೀಲ್ಗಳಳ್ಳಾಡಿದುವು ಖಳಪತಿಯ ||
ಜನದರಿವು ಮನಕಾಯ್ತು ಮಾನಸದ |
ಘನಸರೋವರ ತುಂಬಿತುಳುಕಿ |
ತ್ತನಿಲಸುತನೆಲ್ಲೆನ್ನುತವನೆಲ್ಲೆಡೆಯನೀಕ್ಷಿಸಿದ ||೪೦||

ಕಂಡು ನುಡಿದನು ಹನುಮ ಬಾ ದೋ |
ರ್ದಂಡಬಲಿ ನೀನಹುದು ತನ್ನೊಳು |
ಚಂಡಿಸಿದ ಪಟುಭಟರನರಿಯೆನು ಮೂರುಲೋಕದೊಳು ||
ದಂಡಧರಭೈರವರ ಬಲ್ಲೆನು |
ಗಂಡತನವಿನಿತಿಲ್ಲವವರಲಿ |
ಗುಂಡಿಗೆಯ ಸತ್ರಾಣ ನಿನಗುಂಟಿದನು ಕೊಳ್ಳೆನುತೆ ||೪೧||

ಎಲೆಲೆ ಹೋದನು ಹನುಮನೀಬಲ |
ದೊಳಗೆ ಮಿಡುಕುಳ್ಳವರು ಬಿಡಿಸಿರೊ |
ತಳುವದಿರಿ ಬಳಿಕಳಲಿ ಫಲವಿಲ್ಲಕಟ ಸಾರಿದೆನು ||
ಉಳಿಯಲರಿಯನು ಚಲದ ಗುದ್ದಿದು |
ಭಳಿರೆಯೆಂದತ್ಯುಗ್ರರೋಷೋ |
ಜ್ಜ್ವಲನು ಮುಷ್ಟಿಯ ಬಲಿದು ಗುದ್ದಿದನವನನಿಳೆ ಬಿರಿಯೆ ||೪೨||

ಕೆಟ್ಟಿತಕಟಾ ಕಜ್ಜಮೆಂದಿರ |
ದಟ್ಟಿದೊಡೆ ವೈದ್ಯರಸು ವಿಬುಧರು |
ದಿಟ್ಟನಿವನಿಂದೇಳೆ ತನ್ನಯ ಬಟ್ಟೆಯೇನೆನುತೆ ||
ಗುಟ್ಟಿನೊಳು ರಾವಣನು ಜಾರಿದ |
ನಟ್ಟಹಾಸವ ತೋರಿದನು ಜಗ |
ಜಟ್ಟಿ ರಾಘವನಿರ್ಪದೆಸೆಗಂದಟ್ಟಿ ನಿಜರಥವ ||೪೩||

ಉರವಣಿಸಿಯೈತರ್ಪ ದಾನವ |
ನಿರವನೀಕ್ಷಿಸಿ ದೈತ್ಯರಿಪುವಂ |
ದಿರದೆ ತಾಂಕರೆದಾ ವಿಭೀಷಣನನ್ನು ಕೇಳಿದನು ||
ಬರುವದೈತ್ಯನದಾರು ಕಂಗಳು |
ಬೆರಗುಗೊಳುತಿವೆ ಹೆಸರದೇನೆನೆ |
ಕರಗಳನು ಮುಗಿದಿಂತು ನುಡಿದನು ಭಕ್ತನೊಲವಿನಲಿ ||೪೪||

ಈತನಲ್ಲವೆ ಜೀಯ ದಿವಿಜ |
ವ್ರಾತವನು ಸೆರೆವಿಡಿದ ಭುವನ |
ಖ್ಯಾತನೀತನೆ ಕಳವಿನಿಂ ತ್ರೈಲೋಕ್ಯಜನನಿಯನು ||
ಭೀತಿಯಂ ತೊರೆದುಯ್ದ ಪಾತಕಿ |
ಯೀತನೇ ರಾವಣನು ನಿನ್ನಯ |
ಕೌತುಕದ ಮೊನೆಗಣೆಯೊಳೀತನ ಧಾತುಗಿಡಿಪುದೆನೆ ||೪೫||

ಎಲೆಲೆ ರಾಮಗೆ ಮೀಸಲೀತನು |
ತಿಳಿಯದಿಂತಿದನೇನಗೈದೆನು |
ಕೊಳುಗುಳದ ಭಂಗಿಯಲಿ ಕೈದಪ್ಪಾಯ್ತಲಾ ಎನುತೆ ||
ಘಳಿಲನಣ್ಣನ ಬಳಿಗೆ ನಡೆತಂ |
ದಳುಕುತಂಜುತೆ ನಡೆದ ಪರಿಯನು |
ತಿಳುಹುತಿರಲತ್ತೊಡನೆ ರಾವಣನೆಳ್ದು ಗರ್ಜಿಸಿದ ||೪೬||

ಎಲ್ಲಿ ನರಪಶುವೆತ್ತ ಜಾರಿತು |
ನಿಲ್ಲದೋಡಿತೆ ಭಲರೆಯೆಂದಾ |
ಖುಲ್ಲನಸುರನ ಪಳಿವ ಕೇಳ್ದಾಕ್ಷಣದೆ ಲಕ್ಷ್ಮಣನು ||
ನಿಲ್ಲದೈತಂದೆಚ್ಚು ಶರವನು |
ಬಿಲ್ಲ ಮುಕ್ಕಡಿಗೈದೊಡಾಗಳೆ |
ಹಲ್ಲಮೊರೆದವನಿಡಲು ಪಶುಪತಿದತ್ತಶಕ್ತಿಯೊಳು ||೪೭||

ಹೊದ್ದಿದುದೆ ಲಕ್ಷ್ಮಣಗೆ ದುರ್ಗತಿ |
ವೃದ್ಧಿಯಾದುದೆ ಪಾಪಿದನುಜಂ |
ಗದ್ದಿಪೋದುದೆ ಸುರರ ಕಾರ್ಯವು ಭೂತಳದೊಳಿಂದು ||
ಬಿದ್ದವೇ ನಾವೆನ್ನುತಮರರು |
ಸದ್ದುಗುಡಲಾಶಕ್ತಿಯಿಂದವೆ |
ವಿದ್ಧನಾಗುರುಳಿದನು ಲಕ್ಷ್ಮಣನಾಯು ತೀರಿತೆಸೆ ||೪೮||

ಎಸೆವ ಭೂಸುರ ವಂಶದಲಿ ಬಂ |
ದಸುರಕೃತ್ಯವನಾಚರಿಸಲೀ |
ವಸುಧೆ ನಿನ್ನನದೆಂತು ಹೊರುವುದು ಜಾತಿಬಾಹ್ಯನನು ||
ಮುಸುಡನೀಕ್ಷಿಸಲಹುದೆ ನಿನ್ನಯ |
ಪೆಸರ ವಚಿಸಲುಬಹುದೆ ನಿನ್ನನು |
ಕುಸುರಿದರಿವೆನೆನುತ್ತೆ ಲಕ್ಷ್ಮಣನಾಗಳಡಹಾಯ್ದ ||೪೯||

ಭಾಪುರೇ ಸೌಮಿತ್ರಿಭಲರೇ |
ಚಾಪವಿದ್ಯಾಭ್ಯಾಸನಿನಗಿರ |
ಲೀಪರಿಯ ದುರ್ಭಾಷೆ ಸಲುವುದೆ ನುಡಿಸು ಕಾರ್ಮುಕವ ||
ಭೂಪತಿಯ ವಂಶದಲಿ ಬಂದವ |
ರೀಪರಿಗೊಳಾಡುವರೆ ರವಿಕುಲ |
ದೀಪರೇ ನೀವೆಂದು ಸುರಿದನು ಸರಲನಸುರಪತಿ ||೫೦||

ದಿಟ್ಟನಹುದೋ ದೈತ್ಯಕುಲದಾ |
ಜಟ್ಟಿಯಹುದೋ ಶುಕ್ರನಿಂನೀ |
ನಿಷ್ಟುಕಲಿತೆಯ ಬಾಣದಿಸುಗೆಯ ಜಾಣನಹೆ ನೀನು ||
ದಿಟ್ಟನಾದೊಡೆ ನನ್ನ ಬಾಣದ |
ಸೃಷ್ಟಿಯಂದವನೀಕ್ಷಿಸೆಂದಾ |
ದಿಟ್ಟಲಕ್ಷ್ಮಣನಂಬು ತಾಗಿತು ಬಿದ್ದನಸುರೇಂದ್ರ ||೫೧||

ತೀರಿತಿವನವತಾರವೀತನ |
ತೋರಿ ಜನಕಜೆಗಿಂದು ತನ್ನಯ |
ಪೌರುಷವ ಮೆರೆಯಿಸುತುಮಾಕೆಯ ಮನದ ಸಂಶಯವ ||
ಆರಿಸಲುಬೇಕದಕೆ ನಿಜರಥ |
ವೇರಿಸುವೆನೆಂದಾಗಳವನನು |
ತೋರತೋಳ್ಗಳಿನೆತ್ತಲೇಳದೆ ಭಾರವಾಗಿರಲು ||೫೨||

೪೯, ೫೦, ೫೧ ನೆಯ ಪದ್ಯಗಳನ್ನು ಓದಿದನಂತರ ೪೬, ೪೭, ೪೮ ನೆಯ ಪದ್ಯಗಳನ್ನು ಓದಿಕೊಳ್ಳುವುದು.

ಬೆರಗುಗೊಂಡನು ದಾಶರಥಿಗಳ |
ಪರಿಯು ಸೋಜಿಗವರಿಯಲಾಗದು |
ಬರಿಯು ಪೆಣನನು ನೆಗಹಲೆನ್ನಿಂ ಹರಿಯದಾದುದಲಾ ||
ಕಿರಿಯನೇ ನಾಂ ಬಲದೊಳೇನ |
ಚ್ಚರಿಯೊ ಕಾಣೆನೆನುತ್ತುಮವನುರೆ |
ತಿರವ ತೂಗುತ್ತಿರ್ಪ ಸಮಯಕೆ ಬಂದನಾ ಹನುಮ ||೫೩||

ಏನೆಲವೊ ಚೋರಾಗ್ರಗಣ್ಯನೆ |
ನಾನು ಮರೆದೊರಗಿರ್ಪ ಸಮಯದೆ |
ಮಾನವೇ ನೀಂ ಗೈದ ಪಂತದ ಗೋಣ ಮುರಿದೀಗ ||
ಕೇಣಸರವನು ನೀಗಿ ಪಿಂದೆಗೆ |
ದೇನುಮಂ ತಿಳಿಯದನವೋಲಿಹೆ |
ನಾನದಾರಿತ್ತೀಕ್ಷಿಸೆನ್ನುತೆ ಗುದ್ದಿದನುಖಳನ ||೫೪||

ದಡದಡಿಸಿ ಬಿಸಿರಕುತವೊಡನು |
ಗ್ಗಡಿಸಿ ಬಾಯ್ಮೂಗುಗಳದೆಸೆಯಿಂ |
ಬಿಡದೆ ಸುರಿಯಲು ರಥವನೇರಿಸಿ ಸೂತನಾತನನು ||
ಕಡುಜವದೆ ಜಾರಿದೊಡೆ ಹೋಗೆಲೊ |
ಬಡನರಿಯೆ ಹೋಗಿನ್ನು ನಿನ್ನನು |
ಕಡಿವವನು ಬೇರಿಹನು ನಾನಲ್ಲೆಂದು ಪವನಜನು ||೫೫||

ತಿರುಗಿ ಲಕ್ಷ್ಮಣನಿರವ ಕಂಡನು |
ಮರುಮರುಗಿದನು ಮನದೆ ತಾನೀ |
ಪರಿಯು ಸಹಜವೆ ರಾಘವೇಶ್ವರನನುಜಗೆಂದೆನುತೆ ||
ಕರವ ಮೂಗಿನ ತುದಿಯೊಳಿಟ್ಟ |
ಲ್ಲೆರಲ ಸಂಚಾರವನೆ ಕಾಣದೆ |
ಹರಣವನು ಸೆಳೆದಾತನೆಲ್ಲಿಹನಾವನೆನ್ನುತ್ತೆ ||೫೬||

ಬಡಿವೆನಿಂದಾ ಯಮನನಬ್ಜಜ |
ಮೃಡಮಧುದ್ವಿಷದಾದಿಸುರರನು |
ಕಡಲೊಳಗೆ ಮುಳುಗಿಪೆನು ಹರಣವನೀಯಲಿರದಿಂದು ||
ದುಡುಕದಿವನನು ಕೊಂಡುಪೋಗೆ |
ನ್ನೊಡೆಯನಿದಿರೊಳಗಿರಿಸಿಯಾಣತಿ |
ವಡೆದು ಬಳಿಕೆನ್ನಳವ ಮೆರೆವೆನೆನುತ್ತೆ ನಿಶ್ಚೈಸಿ ||೫೭||

ತಂದನವನನು ರಾಘವೇಶನ |
ಮುಂದೆ ಕಂಪಿಸುತಿಳುಹಿದನು ಜೀ |
ಯಿಂದು ತನ್ನನು ಕೊಲ್ಲು ಮೇಣಂತಲ್ಲದಿರೆ ಕಳುಹು ||
ತಂದು ನಾನಿವನಸುವನೀಗಳೆ |
ಚಂದದಿಂ ಬದುಕಿಸುವೆನೆಂದೆನ |
ಲಂದು ರಾಘವನಳುಕಿ ತಮ್ಮನ ಮುಖವ ನೋಡಿದನು ||೫೮||

ಅರಿದನಿಂದಿದು ಮೂರ್ಛೆಯಲ್ಲದೆ |
ಕೊರತೆಯಸುವಿಂಗಿಲ್ಲವೆಂಬುದ |
ನೊರೆದು ಸಕಲರ್ಗದನು ತಮ್ಮನ ಪರಿಯನಾರಯ್ದು ||
ಪರಮಕರುಣಾಕರನು ಮರುಗು |
ತ್ತರಿಯ ಮೇಲಂದಿರದೆ ಕೋಪಿಸಿ |
ಶರವ ಪೂಡಿದನೆತ್ತಲಿರ್ಪನು ಖಳನು ತೋರೆನುತೆ ||೫೯||

ಅದೆಕೊ ನೋಳ್ಪುದು ಖೂಳನಸುರನು |
ಬೆದರಿಯೋಡುತ್ತಿರ್ಪನಿಲ್ಲಿಯೆ |
ಕದನಗುಡುವುದು ತನ್ನ ಪೆಗಲಿದನೇರಿ ತಾವಿಂದು ||
ಹದನಿದಲ್ಲವು ರಥದೊಳವನಿರೆ |
ಪದದೆ ತಾಂ ನಿಂದಿಹುದು ಕರುಣಿಪು |
ದಿದನೆನುತೆ ಮಾರುತಿಯು ಬೇಡಲ್ಕೊಪ್ಪಿದನು ನೃಪತಿ ||೬೦||

ಏಕೆ ತೊಲಗುವೆ ದಾನವೇಶ್ವರ |
ನೂಕು ನಿನ್ನಯ ರಥವನಿತ್ತಲು |
ಲೋಕರಕ್ಷಕನೈದಿಹನು ಬೆದರೇಕೆ ಚಿತ್ತದೊಳು ||
ಆಕಮಲೆಯನು ಕರೆಯಿಸೀಕರು |
ಣಾಕರನ ಪದಕಮಲಕೊಪ್ಪಿಸಿ |
ಸಾಕು ನೀನೆಂದೆರಗು ಬಾರೆಂದಾರ್ದನನಿಲಜನು ||೬೧||

ಕೇಳಿ ದಶಶಿರನದನು ರೋಷ |
ಜ್ವಾಲೆಯಂಗವ ಸುಡಲು ರಥವನು |
ಖೂಳರಾಘವನತ್ತ ತಿರುಗಿಸು ಸೂತ ನೀನೆಂದು ||
ಬಾಲೆ ಜಾನಕಿ ಲಕುಮಿ ದಿಟಮೆಂ |
ದಾಲಿಸಿದ ಬಳಿಕವಳನುಳಿವೆನೆ |
ಹೇಳು ಸಿರಿಗಂ ಬೇರೆ ವಸ್ತುವೆ ಎಂದನನಿಲಜಗೆ ||೬೨||

ಘಡ ನಿಶಾಚರಕುನ್ನಿ ನಿನ್ನೀ |
ಯೊಡಗಿಗಾಂ ತಾಮೆಂದು ಶರಗಳು |
ಸಡಗರಿಸಿ ಮುಂಬರಿದು ಹಾಯ್ವುವು ತಿನ್ನಲದಸೀಗ ||
ತಡವ ಮಾಡದೆ ಬೇಗ ನಿನ್ನೀ |
ಯೊಡಲನೊಪ್ಪಿಸು ಬರಿದೆ ಸಲ್ಲದ |
ನುಡಿಗಳೇಕೆಂದಿರದೆ ರಾಘವನೆಚ್ಚನಂಬುಗಳ ||೬೩||

ಇಟ್ಟಣಿಸುತಿವನೆಚ್ಚ ಶರವನು |
ತಟ್ಟನಾ ದಶಮುಖನು ಖಂಡಿಸಿ |
ಬಿಟ್ಟೊಡತಿಶಯಮೆನಿಪ ನೂತನಬಾಣಸಂತತಿಯ |
ಹುಟ್ಟುಗಿಡಿಪೆನೆನುತ್ತೆ ರಾಮನು |
ಸಿಟ್ಟಿನಿಂ ದಿವ್ಯಾಸ್ತ್ರದಿಂದದ |
ನಿಟ್ಟುಕೊಚ್ಚಿದೊಡಾಗ ರಾವಣನಿರದೆ ಖತಿಗೊಂಡ ||೬೪||

ಮೂರುಲೋಕದ ವೀರ ತಾಂ ಗಡ |
ಹೋರಿಕೊಂದನು ಮನುಜಮಾತ್ರನ |
ಧೀರತನಕಿದು ಸೊಗಸೆ ತೆಗೆಯೆಂದೆನ್ನನಾಡುವರು ||
ಕ್ರೂರ ನಿನ್ನಯ ಕೃತ್ಯವೆಣಿಸಲ |
ಸಾರರಾಕ್ಷಸವೀರರಳಿದರು |
ದೂರಿಗಾನಿನ್ನಂಜಿ ನಡೆದರೆ ಪಳಿವು ಪೊದ್ದುವುದು ||೬೫||

ಎಣಿಕೆಯಿನ್ನೇಕೆನ್ನುತರಸನ |
ತೃಣಕೆ ಬಗೆಯುತೆ ಕಲಿಸುರಾರಿಯು |
ಕಣೆಯ ಸರಿಯನು ಸುರಿಯೆ ಪೊಕ್ಕುವು ರಾಮನಂಗದೊಳು ||
ಹಣಿದಗಾಯವ ಬಗೆಯದರಸನು |
ಬಣಗುರಕ್ಕಸಕುನ್ನಿ ನಿನ್ನಯ |
ಪಣೆಯ ಬರೆಹವನೊರಸುವಂಬನು ನೋಡು ನೀನೆಂದು ||೬೬||

ಉತ್ತಮಾಸ್ತ್ರದಿನಾತನಾಬಿ |
ಲ್ಛತ್ರಿಕೆಗಳನಿರದೆ ಖಂಡಿಸಿ |
ಮತ್ತೆ ಬಿಡದೆಸೆದವನ ರಥವನು ಕತ್ತರಿಸಿ ಕೆಡಹಿ ||
ಮೆತ್ತಿಯವನಂಗದಲಿ ಸರಳನು |
ಬಿತ್ತಲೆಯು ನೀನಾದೆ ನಿನ್ನನು |
ಸತ್ತ ಪೆಣನನು ಬಡಿವನಲ್ಲಾನತ್ತ ತೊಲಗೆನಲು || ||೬೭||

ನೋಡಿದನು ದಶಶಿರನು ತನಗೀ |
ಪಾಡು ಸವುವೇನಕಟ ಬೊಮ್ಮನ |
ಬೇಡದಾದೆನು ಮನುಜಪಶುವಿಂ ಸಾವು ಬೇಡೆಂದು
ಆಡಿ ಫಲವೇನಿನ್ನು ದೇಹವು |
ಬಾಡಿ ಕಂಗೆಟ್ಟಿಹುದು ಶಕ್ತಿಯು |
ಕೂಡಿ ನಾಳೆಯೊಳಿವನ ಕೊಲ್ಲುವೆನೆಂದು ತಿರುಗಿದನು ||೬೮||

ಒದರಿದುವು ನಿಸ್ಸಾಳವಭ್ರದೆ |
ಕದನಜಯದುತ್ಸವಕೆ ದಿವಿಜರ |
ಸುದತಿಯರು ಮಂಗಳವ ಪಾಡುತೆ ಚೆಲ್ಲಿದರು ಸುಮವ ||
ಒದವಿದನುವರದಲ್ಲಿಯುಂ ತ |
ನ್ನೆದೆಯೊಳಾಲಕ್ಷ್ಮಣನ ಚಿಂತಿಸ |
ಸದಯರರಸನು ಬಂದು ಕಂಡನು ಕುಶಲಿಯನುಜನನು ||೬೯||

ನಾಲ್ಕನೆಯಸಂಧಿ ಸಂಪೂರ್ಣಂ

## ಐದನೆಯ ಸಂಧಿ.

ಸೂಚನೆ || ಮನದೊಳಂಜುತ್ತಸುರಪತಿ ತ |
ನ್ನನುಜಸಾದಾಕುಂಭಕರ್ಣನ |
ನನುವರಕ್ಕಟ್ಟಲ್ಕೆ ರಾಘವಶರದಿನವನಳಿದ ||

ಧುರದೆ ತನ್ನನು ಗೆಲ್ದೊಡಾ ಶಂ |
ಕರಗೆ ತೀರದು ಮನುಜನಿಂದಾಂ |
ಮುರಿದೆನೆಂಬುದು ಬಗೆಯಲಿಳೆಯೊಳಗಿದು ವಿಚಿತ್ರವಲಾ ||
ತರಣಿವಂಶದೆ ಜನಿಸಿದೀತನು |
ಸಿರಿಯರಸನಾಗಿರಲೆವೇಳ್ಕುಂ |
ಬರಿಯ ನರನಲ್ಲೆಂದು ದನುಜೇಶ್ವರನು ಬೆದರಿದನು ||೧||

ಮೊದಲು ಮಾವನು ಬಳಿಕಮೊಡವು |
ಟ್ಟಿದನು ಪರಿಪರಿ ಬುದ್ಧಿವೇಳಿದ |
ರದನು ಕೇಳದೆ ಕಾರ್ಯಗಿಡಿಸುತ್ತಿಂದು ಹಲುಬಿದೊಡೆ ||
ಕೆದರಿ ಮೇರುವಿಗಿಕ್ಕಿ ಕಿಚ್ಚನು |
ಬೆದರಿ ಮೊಗೆನೀರೆರಚಿ ನಂದಿಸ |
ಲದನು ಬರಿಯಾಯಾಸಗೊಳ್ಳನ ತೆರವನಾಂತೆನಲಾ ||೨||

ಬಳ್ಳಿತಿದಕಿಂತೇಕೆ ಚಿಂತೆಯು ।
ಒಲ್ಲಿದರು ವಿಧಿಹರಿಮಹೇಶ್ವರ ।
ರೊಲ್ಲೆವೆನ್ನದೆ ತನ್ನ ಸೊಲ್ಲಿಂಗಂಜಿ ನಡೆಯುತಿರೆ ॥
ಪೊಳ್ಳುಮಾನಿಸರಾದಿವಂದಿರು ।
ಹುಲ್ಲಿಗಂ ಕಡೆಯಲ್ತೆ ತನ್ನಿದಿ ।
ರಲ್ಲಿ ನಿಲ್ಲುವ ಸತ್ವವೆಲ್ಲಿಹುದೆಂತು ಸಲ್ಲುವುದು ॥೩॥

ಎಂದು ಧೃತಿಯನು ತಂದು ಮತ್ತಂ ।
ಹಿಂದೆಹಿಂದಕೆ ಸೆಳೆವ ಚಿತ್ತವ ।
ನೊಂದುಗೂಡಿಸುವದಟು ಸಾಲದೆ ಹಂದೆ ತಾನಾಗಿ ॥
ನೊಂದನೋವನು ನೆನೆದು ಸನಿಹದ ।
ಬಂಧು ತನಗಾರೆಂದು ಚಿಂತಿಸಿ ।
ಯಂದು ತಮ್ಮನ ಕುಂಭಕರ್ಣನ ನೆನೆದನಸುರಪತಿ ॥೪॥

ಕರೆದು ತನ್ನಿರೊ ಕುಂಭಕರ್ಣನ ।
ಧುರದೊಳಾಂತರಸಿರಿವ ಭೀಮನ ।
ಮೆರೆವ ಮೇರೂಪಮಶರೀರನ ಬೇಗದಿಂದೆನಲು ॥
ಹರಿದರೊಡನೆಯೆ ಭೃತ್ಯರಾತನು ।
ಸರಸಿಜೋದ್ಭವನಿತ್ತವರದಿಂ ।
ದರೆವರುಷದುರು-ನಿದ್ರೆಯೊಳಗಿರಲಂದು ನೋಡಿದರು ॥೫॥

ಏಳಿಸುವೆವೆಂತಿವನನೆನ್ನುತೆ ।
ಮೇಳವಿಸಿದರು ಲಕ್ಷರಾಕ್ಷಸ ।
ರಾಳುಗಳನೊಡಗೊಂಡು ಕೂಗಿದರಳ್ಳೆಯೊಡೆವಂತೆ ॥
ಸಾಲಭೇರಿಯ ಹೊಡೆಸಿದರು ಮೈ ।
ಮೇಲೆ ನಿಂದರು ಜಗ್ಗಿತುಳಿದರು ।
ಸೋಲಲಿಲ್ಲವು ನಿದ್ರೆ ಪೆರ್ಚಿತು ಮೊದಲಿಗಿಮ್ಮಡಿಸಿ ॥೬॥

ಬರಿಸಿ ಮತ್ತಗಜಂಗಳನು ಪೇ ।
ರುರದ ಮೇಲಂದಿರದೆ ತುಳಿಯಿಸ ।
ಲರೆದೆರೆದುವಕ್ಷಿಗಳು ಕೈಕಾಲಲುಗಿತಸುರಪನ ॥
ಅರಿವು ತಲೆದೋರಿದುದು ಸುತ್ತಲು ।
ಸೆರೆದ ಪರಿವಾರವನು ನೋಡುತೆ ।
ಘುರಿದು ಮೈಯನು ಹಾಸಿಗೆಯ ಮೇಲೆದ್ದು ಕುಳ್ಳಿರ್ದು ॥೭॥

ಏನಿರೋ ನೀವೆನ್ನ ನಿದ್ರೆಯ |
ನೇನುಕಾರಣ ತಪ್ಪಿಸಿದಿರಿಂ |
ದೇನರಿಷ್ಟವು ನಮ್ಮ ಲಂಕಾಪುರಿಗೆ ಸಮನಿಸಿತು ||
ದಾನವೇಶನು ಕುಶಲಿಯೇ ಸ |
ತ್ರಾಣನೆನಿಸಿರ್ಪಿಂದ್ರಜಿತ್ತುವ |
ನೂನಸುಖದಿಂದಿಹನೆ ನುಡಿವುದು ಬೇಗದಿಂದೆನಲು ||೮||

ಜೀಯ ಕುಶಲಿಯು ನಮ್ಮ ರಾಯನ |
ಜೀಯನವನಾತ್ಮಜನು ಸುಖಿ ತಮ |
ಗಾಯಸವನಿತ್ತೆಬ್ಬಿಸಿದೆವಿಂದೊಡೆಯನಾಜ್ಞೆಯಲಿ ||
ನೋಯಲಾಗದು ಬಿಜಯಗೈವುದು |
ರಾಯನೋಲಗಕೆನಲು ದೂತರ |
ಪಾಯವಿಂದುಂಟೆನುತೆ ಬಂದನು ಕಂಡನಗ್ರಜನ ||೯||

ಬಂದ ತಮ್ಮನನಿದಿರುಗೊಂಡಾ |
ನಂದದಿಂ ಬಿಗಿದಪ್ಪಿ ಮನ್ನಿಸಿ |
ಯಂದು ತನಗೊದವಿರ್ಪ ಕಷ್ಟವನೆಲ್ಲವನು ತಿಳುಹಿ ||
ಮುಂದೆ ನಿನ್ನಿಂದಸುರವಂಶವಿ |
ದೊಂದಬೇಕಭಿವೃದ್ಧಿಯನು ಒಗೆ |
ದಂದು ಸಲಹುವುದೆಂದನನುಜಂಗಂದು ರಾವಣನು ||೧೦||

ಅಣ್ಣನಿಂತೆನೆ ಕೇಳ್ದು ದನುಜನು |
ಕಣ್ಣಿನಲಿ ನೀರ್ಮುಕ್ಕಳಿಸಿದನು |
ಹೆಣ್ಣಿಗೋಸುಗ ರಾಕ್ಷಸರ ಕುಲ ತಣ್ಣಗಾದುದಲಾ ||
ಇನ್ನು ನುಡಿದೇಂ ಬೆಂಕಿಯೆಡೆಯಣ |
ಬೆಣ್ಣೆ ಕರಗುತ್ತಳಿವತೆರದೊಳು |
ನನ್ನು ತಾಂಗಿಗೆ ಸೀತೆಗಳಿಪಿದನಳಿಯದುಳಿದಪನೆ ||೧೧||

ಆತನಾರೆಂದರಿದೆ ರಾಮನ |
ನಾತಳೋದರಿ ಸೀತೆ ಮನುಜೆಯೆ |
ಪಾತಕಿಯು ನೀನೆನಿಸೆ ನಿನ್ನನು ಘಾತಿಸಲು ಬಂದ ||
ಚೇತನಾತ್ಮಕನಾದಿಲಕ್ಷ್ಮಿಯು |
ಭೂತಳದೆ ಭಾರವನು ತಗ್ಗಿಸ |
ಲೀತೆರದೊಳೈದಿರ್ಪರವರಿದನರಿದು ನಡೆಯೆಂದ ||೧೨||

ಕುಲದೊಳೊರ್ವನು ಜನಿಸಿ ತನ್ನಯ |
ಕುಲವನಳಿಸಿದ ಪಾಪಿಯೆಂಬಾ |
ಪಳಿವಿಗಾಕರವಾಗಿ ಕಿಡದಿರು ಕಳುಹು ಸೀತೆಯನು ||
ನಳಿನನಾಭನ ವೈರವಾಗದು |
ಕಲಿಗಳೇ ನಾವಾತನಿದಿರೊಳ |
ಗುಳಿವುಪಾಯವ ಕಾಣ್ಬದೆನಲಿಂತೆಂದನಸುರಪತಿ ||೧೩||

ಫಡಫಡೆಲವೋ ತಮ್ಮ ನೀಂ ಬಾ |
ಯ್ಬಡಿಕನೆಂಬುದನರಿದೊಡಂ ತಾಂ |
ಕಡೆಯೊಳಾಪತ್ಕಾಲಕೊದವುವನೆಂದು ಬರಿಸಿದೆನು ||
ನುಡಿದು ಫಲವೇನಿನ್ನು ಪೋಗಾ |
ಬಡನರೇಂದ್ರನ ಸೇರಿ ಸೇವಿಸು |
ಪಿಡಿದ ಛಲವನು ಮಾತ್ರರಾವಣ ಬಿಡುವನಲ್ಲೆಂದ ||೧೪||

ಕಂಡನಣ್ಣನ ಮೂರ್ಖಬುದ್ಧಿಯ |
ನಂಡಲೆದು ಫಲವಿಲ್ಲವೆನ್ನು |
ದ್ದಂಡತನವನು ತೋರಿ ಹರಿಯೊಳು ಕಾದಿ ಮಡಿಯುವೆನು ||
ಕೊಂಡಪೆನು ವರಮುಕ್ತಿರಾಜ್ಯವ |
ಚಂಡಿಸುವುದೇಕೆನುತೆ ಬೆಸನವ |
ಕೊಂಡೆನಗ್ರಜ ನನುರಕೆನ್ನನು ಬಿಟ್ಟು ನೋಡೆಂದ| ||೧೫||

ತಿಳಿವನಿದನಡಿಗೊತ್ತಿ ಮರವೆಯ |
ಕಳವಳದೆ ಮನವಿಕ್ಕಿ ಗಾಂಪರು |
ಬಳಸುವಾಹಾಠಯಲಿ ನಡೆಗೊಂಡಾದ ಬಳಿಕೀಗ ||
ಬಲಿದತೋಳ್ಗಳ ಬಲವ ತೋರ |
ಲ್ಕೆಳಸಿದೆಯ ಸಹಭವನೆ ರಿಪುಕುಲ |
ವಳಿದುದಿನ್ನೇಂ ಕೈದುಗೊಳ್ಳೆಂದಸುರಪತಿ ನುಡಿದ ||೧೬||

ಕೈದುವಿಂದೇಂ ಭುಜಗಳಿಂದವೆ |
ಮೋದಿ ಕೆಡಹುವೆನಹಿತರನು ಬಿಡು |
ಖೇದವಿದಕಿನ್ನೇಕೆ ನಿನಗೆಂದಗ್ರಜಂಗೆರಗಿ |
ಕ್ರೋಧವಶದಿಂ ದಾಂಟಿ ಕೋಟೆಯ |
ನೈದುತಿರಲಾಕುಂಭಕರ್ಣನು |
ಮೇದಿನೀಸುತೆಯರಸಕೇಳ್ದನಿದಾವನೆಂದೆನುತೆ ||೧೭||

ಅರಸ ಚಿತ್ತವಿಸಿವನು ರಕ್ಕಸ |
ರರಸನನುಜನು ಕುಂಭಕರ್ಣನು |
ಪಿರಿಯಮೆಯ್ಯವನುರುಪರಾಕ್ರಮಿ ಸತ್ವಯುತನಹನು ||
ಧುರದೊಳಿವನನು ಗೆಲಲು ಮಿಕ್ಕರಿ |
ಗರಿದು ನಿನ್ನಯ ಸರಳ ಮೊನೆಯಲಿ |
ಸಿರವನರಿಯೆಂದೆಚ್ಚರಿಸಿದನು ವರವಿಭೀಷಣನು ||೧೮||

ಫಡಫಡಾನಿರುತಿರಲು ರಕ್ಕಸ ||
ವಡೆಗೆ ಸೋಲಿಂದೆಂಬ ದುರುಳರ |
ಕಡಿದು ಭೂತಂಗಳನು ತಣಿಸುವೆನೀಗ ನೋಡೆನುತೆ ||
ಕಡುಭರದೊಳೈತಂದು ಕೋಡಗ |
ವಡೆಯನಡಿಗಳಿನೊದೆದು ಕೆಡಹು |
ತ್ತೊಡನೆ ಕರದಿಂ ಪಿಡಿದು ಬಡಿದನು ಕುಂಭಕರ್ಣಕನು ||೧೯||

ಕೇಳು ಸೇನಾನಾಥ ನೀಲನೆ |
ಕೇಳು ಜಾಂಬವ ಪಾವಮಾನಿಯೆ |
ಕೇಳು ನೀನಂಗದನೆ ಕೇಳೈ ಕೀಶಪತಿ ಕೇಳು |
ಹೇಳಲಾರೆವು ನೋವನಿದನಾಂ |
ತಾಳಲಾರೆವು ಬೇಗ ಬಂದೀ |
ಖೂಳನತ್ತಣಿನೆಮ್ಮ ಬಿಡಿಸುವುದೆಂದು ಪಡೆ ಮೊರೆಯೆ ||೨೦||

ನೊಂದರಕಟಾ ಕಪಿಗಳೆನುತೈ |
ತಂದು ಮುತ್ತಿದರಗ್ರಗಣ್ಯರು |
ಹಿಂದೆ ಮುಂದಿಕ್ಕೆಲದೊಳೆಸೆದರು ಬಂಡೆಮರಗಳನು ||
ನೊಂದನೇಸಿವನಿದಕೆ ಸನಿಹಕೆ |
ಬಂದು ಮುಷ್ಟಿಯೊಳೆರಗಿಯಿವರನು |
ಬಂಧಿಸಿಯೆ ಕಕ್ಷದೊಳು ಲಂಕೆಗೆ ಸರಿಯಲನುವಾದ ||೨೧||

ಸರಿಯುತಿರೆ ಕಂಡಂದು ಲಕ್ಷ್ಮಣ |
ನುರುವಶರಗಳನಿಸಲು ಕೌಂಕುಳು |
ತೆರಹುಗೊಟ್ಟುದು ಭೂಮಿಗುರುಳಿದರಿವರು ಬುಳುಬುಳನೆ ||
ಉರುಳದೊಯ್ಯನೆ ಕಪಿಗಳರಸನು |
ಕರಗಳನು ನೀಡುತ್ತೆ ದಾನವ |
ನೆರಡುಕಿವಿಗಳ ಬಲಿದು ಪಿಡಿಯುತ್ತೇರಿ ಹಿಂದಲೆಗೆ ||೨೨||

ಭರದೆ ಮೂಗನು ಕಚ್ಚಿ ತುಂಡಿಸಿ |
ಯಿರದೆ ಕಿವಿಗಳ ಹರಿದು ನಭಕುರೆ |
ಪರಿದು ಪಾರಿಯುದಾತ್ತರಾಘವನೆಡೆಯಸೇರಿದನು ||
ಪರಿವ ರಕುತವ ಕಂಡು ಖಳನಿರ |
ದೊರಸಲದನೆಂದಾಗ ಸವರು |
ತ್ತರಿದು ಕಿವಿಮೂಗುಗಳು ಪೋದುದನಾರ್ದನಿಳೆ ಬಿರಿಯೆ ||೨೩||

ತಂಗಿಗಾದಾಮಾನಹಾನಿಯು |
ಸಂಗಡಿಸಿತಲೆ ತನಗುಮಿಂದಾಂ |
ಹೆಂಗಳಿದಿರೊಳಗೆಂತು ನಾಚದೆ ಮುಖವ ತೋರುವೆನು ||
ಸಂಗರದೆ ಹೊಯ್ದಾಡುತಸುವನು |
ಹಿಂಗಿಸುವುದೇ ಮತವು ತನಗಿಂ |
ತಂಗಭಂಗವೆ ಶಿವಶಿವೆನ್ನುತೆ ಮರಳಿದನು ರಣಕೆ ||೨೪||

ಆರಿ ಬೊಬ್ಬರಿದತುಳರೌದ್ರವ |
ಬೀರಿ ರಾಘವನಿರ್ದ ಠಾವನು |
ಸೇರಿ ನೀನತಿಶೂರನಾದೊಡೆ ಬಾರ ಕೆಣಕೆನುತೆ ||
ಮೀರಿ ಮಾತುಗಳಾಡೆ ರಾಮನು |
ಭೂರಿರೋಷವನಾಂತು ಧನುವಿಂ |
ಗೇರಿಸುತೆ ದಿವ್ಯಾಸ್ತ್ರನಿಕರವನೆಚ್ಚನಾ ಖಳನ ||೨೫||

ಅರರೆ ರಾಘವ ಕಣೆಯನಿಸುವಾ |
ಪರಿಯ ಬಲ್ಲೈಯೆಲ್ಲಿ ಕಲಿತೈ |
ಗುರಿಯ ಮೀರದೆ ಪಿದ್ದುವೈ ದಿಟ ಜಾಣ ನೀನಹುದೈ ||
ಉರಿಯ ಕೋಟೆಯ ಸೂರೆಗೊಳಲೆಂ |
ದರಗು ಪುಗುವಂತಾಯ್ತು ನಿನ್ನೀ |
ಬರವದಿಲ್ಲಿಗೆ ಮರಳುವಾಶೆಯ ನೀಗಿ ನಿಲ್ಲೆನುತೆ ||೨೬||

ಕರದೆ ಭುಜವನು ಹೊಯ್ದು ರಕ್ಕಸ |
ನುರುಬಿನಿಂ ಮೇಲ್ವಾಯ್ದು ಬಂದೊಡೆ |
ಕರಗಳೆರಡನು ಕೊಚ್ಚಿ ಶರಗಳಿನಿರದೆ ಮುಗುಳೆಚ್ಚು ||
ಭರದಿನಾತನ ಶಿರವನಿಳುಹ |
ಲ್ಕರರೆ ರಾಘವ ಭಲಭಲೆನ್ನುತೆ |
ಸುರರು ಸುಮಗಳ ಸುರಿದು ನುತಿಸಿದರಸುರಮರ್ದನನ ||೨೭||

ಪಾಯದಳದೊಳಗುಳಿದವರು ಖಳ |
ರಾಯನೋಲಗಸಾಲೆಗೈದಿಯೆ |
ಜೀಯ ಬಿನ್ನಹ ಕುಂಭಕರ್ಣಂಗಾದುದಂತವೆನೆ ||
ಮಾಯವೀನುಡಿ ಸಂಬಲಾಗದು |
ನಾಯಿಗಳ ಕಟವಾಯ ಕೊಯ್ವೆನೆ |
ರಾಯರಾಣೆಗುಮನೃತವಲ್ಲೆಂದರುಹಿದರು ನಮಿಸಿ ||೨೮||

ಕಟಕಟಾ ತಮ್ಮನನು ಮಾಯಾ |
ನಟನೆಯಿಂ ಕೊಂದಿರಲುಬೇಕಿಂ |
ದಟವಿಕಾಚರವೇಷದಾಳಿಹ ಹುಲುನರಾಧಮರು ||
ಘಟಿಸಿದಪಜಯವಧುವಿಗಂಜದೆ |
ಕುಟಿಲಗಾತ್ರಿಯನವಳನೊದೆಯುತೆ |
ಹಟವ ಸಾಧಿಪೆನೀಗಳೆಂದುರಿದೆದ್ದನಸುರೇಂದ್ರ ||೨೯||

ಐದನೆಯಸಂಧಿ ಸಂಪೂರ್ಣಂ

## ಆರನೆಯ ಸಂಧಿ.

ಸೂಚನೆ || ಇಂದಿರನಗೆಲಿದವನ ವಿಧಿಶರ |
ದಿಂದಮೊರಗಿದನೃಪರು ಹನುಮನು |
ತಂದಮೃತಸಂಜೀವನೌಷಧದಿಂದೆ ಬದುಕಿದರು ||

ತಿಳಿದು ನಿಜಪತಿಯುಬ್ಬುಗವ ಕೊಳು |
ಗುಳಕೆ ನಮ್ಮನು ಕಳುಹಿನೋಡುವು |
ದಳುಕಲೇಕೆಂದಾ ನರಾಂತಕನಂತೆಯಾ ತ್ರಿಶಿರ ||
ಚಲದ ದೇವಾಂತಕನ ಕೂಡುತೆ |
ಜಳಪಿಸುತ್ತಸಿಗಳನನುಜ್ಞೆಯ |
ತಳೆದು ಸಂಗರಕಿಳಿದು ಕೆಣಕಿದರಂದು ರಿಪುಭಟರ ||೧||

ಯಾತುಧಾನಾಗ್ರಣಿ ನರಾಂತಕ |
ನಾತುಕೊಂಡನು ಬವರವನು ಪುರು |
ಹೂತಸುತಸೂನುವಿನ ಪಡೆಯತ್ತಧಿಕರೋಷದಲಿ ||
ಆತನುರುಬೆಗೆ ಸಿಕ್ಕಿ ಮಡಿದಾ |
ಕೋತಿಗಳ ಹಿಂಡುಗಳನೀಕ್ಷಿಸಿ |
ವೀತಿಹೊತ್ರನ ತೆರದೊಳುಜ್ಜ್ವಲನಾದನಂಗದನ ||೨||

ಖೂಳ ನಿಲುನಿಲು ಮೆರೆಯದಿರು ಹೆ |
ಚ್ಚಾಳುತನವನು ತೋರಿಸೆಮ್ಮೊಳು |
ಕೋಳ ಕಂಡೂತಿಯನು ಕಳೆವೆನು ನಿನ್ನುಮಂ ಬಡಿದು ||
ಕಾಳೆಗವ ಕೊಳ್ಳೆನುತೆ ವಿಲಯದ |
ಕಾಲನಂದದೊಳೆರಗಿ ಮುಷ್ಟಿಯಿ |
ನಾಲಿ ಹೊಯ್ದೊಡೆ ನಷ್ಟವಾದುದು ಜೀವ ದಾನವ ||೩||

ತ್ರಿಶಿರ ದೇವಾಂತಕನುಮೊಂದೆಡೆ |
ವಿಶಿಖಗಳ ಸುರಿಯುತ್ತೆ ಕಪಿಗಳ |
ಬಿಸಿರಕುತದೊಳಗವನು ತೊಳೆಯುತ್ತ ಸಮಪೌರುಷವ ||
ಪಸರಿಸುತ್ತಿರೆ ಕಂಡು ಹನುಮನು |
ವಿಷಮರೋಷದೊಳವರ ಬಡಿಯುತೆ |
ಕುಸುರಿದರಿದನು ಪೆಸರದಳಿದುದು ನೆಲದೊಳಾ ಖಳರ ||೪||

ದಿಟ್ಟರಿವರಿಂದಳಿದ ವಾರ್ತೆಯು |
ಮುಟ್ಟಲಾಸ್ಥಾನದಲಿ ಕೇಳ್ದನು |
ಥಟ್ಟನಟ್ಟಿದನಾಗಳತಿಕಾಯನನು ರಾವಣನು ||
ಹುಟ್ಟುಗುಟ್ಟುತ್ತರಿಗಳನು ನೀ |
ನಟ್ಟಹಾಸವ ತೋರಿ ಮರಳೆಂ |
ದಿಟ್ಟು ಸೇಸೆಯ ಮಗನ ಕಳುಪಲ್ಕಾತನೈತಂದು ||೫||

ಪಥವ ಬಿಡಿಬಿಡಿ ಮರಳಿ ದೂರಕೆ |
ಮಥನ ಕೊಳ್ಳದು ನಿಮಗೆ ನಮ್ಮೊಳ |
ಗತಿರಥರುವೆರಸೈದಲಿಂದಾದಶರಥಾತ್ಮಜರು ||
ಕ್ರತುಭುಜರು ದಿಕ್ಪಾಲರೆಮ್ಮೊಳು |
ಮಥಿಸುತೇಗತಿಯಾಂತರೆಂಬಾ |
ಕಥೆಯನರಿಯಿರೆ ಎನ್ನುತೆಚ್ಚನು ಕಪಿಬಲವನಸುರ ||೬||

ವಾನರೇಶ್ವರರಿದನು ಕಂಡುರೆ |
ಕೇಣಸರದಿಂ ಕಾದಿ ನೋಯ |
ಲ್ತಾಣೆ ಲಕ್ಷ್ಮಣನಾಗ ಧನುವಿಂಗಂಬನೇರಿಸುತೆ ||
ದಾನವೇಶ್ವರಸೂನು ನೀನಸ |
ಮಾನಕಪಿಕುಲದೊಡನೆ ಹೋರಟೆ |
ಮಾನವೇ ನಿನಗೆನುತೆ ಸುರಿದನು ಸರಲ ವೃಷ್ಟಿಯನು ||೭||

ನಿಂದುದಸುರವರೂಥಸಾರಥಿ |
ಮುಂದುಗೆಟ್ಟನು ಕರದ ಕಾರ್ಮುಕ |
ವಂದು ಮುರಿದುದು ಬೆರಗನಾಂತನು ಖಳನಿದೇನೆನುತ ||
ಸ್ಯಂದನವು ಮತ್ತೊಂದು ಥಟ್ಟನೆ |
ಬಂದೊಡದನೇರಿದನು ಚಳಕದೊ |
ಳಂದು ಪೊಸಮುಸೆವೆತ್ತ ಬಾಣದಿನೆಚ್ಚನಹಿತನನು ||೮||

ಎಲವೊ ರಕ್ಕಸ ನಿನ್ನ ಹರಣವ |
ಸಲಹುವವರಿನ್ನಾರು ಕೊಳ್ಳಿದ |
ನುಳಿದೆಯಾದೊಡೆ ವೀರ ನೀನಹುದೆಂದು ಲಕ್ಷ್ಮಣನು ||
ಸೆಳೆದು ಕರ್ಣಾಂತಕ್ಕೆ ನಾಕಿಯ |
ನಲಗುವುಸೆದಿಹ ಪೊಸಶರಂಗಳ |
ಹಲವನೆಸೆಯುತೆ ಸಿರದ ಬಿಸುಗೆಯ ಬಿಡಿಸಿದನು ಖಳನಾ ||೯||

ಕೇಳಿದನು ರಾವಣನು ತನ್ನಯ |
ಬಾಲಕನ ಮರಣವನು ವಂಶವ |
ಪಾಳುಗೈದೆನೆ ಪಾಪಿ ತನ್ನಿಂ ಪ್ರಳಯುವಾದುದಲಾ ||
ಪೇಳಲೆಮ್ಮತಿಕಾಯಗಾರ್ಸವು |
ಪಾಳಿ ಲೋಕದೊಳಾತನಳಿಪಿದು |
ಕಾಲಧರ್ಮವು ತಪ್ಪದಾಪತ್ತಸುರಕುಲಕೆಂದ ||೧೦||

ಆಡಿ ಮಾಡುವುದೇನು ಫಲ ಕೈ |
ಗೂಡುವಾಪರಿಯಂತ ಕಾದಿಯೆ |
ನೋಡುವೆನು ಬೆದರೇಕೆ ತನಗಿದಕೆಂದು ಬಗೆದಂದು ||
ಜೋಡಿಸಲಿ ಗಜಹಯರಥಾವಳಿ |
ಕೂಡೆ ತೆರಳಲೆನುತ್ತುಮಾಜ್ಞೆಯ |
ನೀಡಲದ ಕೇಳ್ದಮರಪತಿರಿಪು ತಂದೆಗಿಂತೆಂದ ||೧೧||

ತಾತ ನೀನಾಹವಕೆ ತೆರಳ |
ಲ್ಲಾತನೆನಿಪಾನಿರ್ದು ಫಲವೇ |
ನೀತರದ ಭಟರವರು ಕಪಿಗಳು ನರರು ಬಣಗುಗಳು ||
ಆತು ನಿಲುವರೆ ತನ್ನ ಬಾಣ |
ವ್ರಾತಜಂಝೂವಾತಘಾತ |
ಕ್ಕಾತಗಳು ತನಗಿರಲಿ ಸಮರದ ಚಿಂತೆ ನಿನಗೇಕೆ ||೧೨||

ಮಗಸುನಾಶನಿರಲಮಮ ನಿಸಗೀ |
ಬಗೆಯು ಸಲುವುದೆ ನಿಮಿಷಮಾತ್ರದೊ |
ಳುಗುಳಿಸನೆ ಲಕ್ಷ್ಮಣನಬಾಯಿಂದಳಿದ ತಮ್ಮಸನು ||
ವಿಗಡಬಲರಿನ್ನುಳಿದ ದೈತ್ಯರ |
ತೆಗೆಯೆನೇ ಜಠರದಲಿ ಕಪಿಗಳ |
ತೆಗೆಯಿದೇಸರದೆನ್ನುತೇರ್ದನು ಚಿಗಿದು ಮಣಿರಥವ ||೧೩||

ಇತ್ತ ನಿಲ್ಲಿರಿ ಖಳರೆ ನೀವಿ |
ನ್ನೆತ್ತ ಸರಿವಿರಿ ನಿಮ್ಮ ಭಾಗದ |
ಮಿತ್ತುವಿದೆ ಬಂದಿಹೆನು ತಡವನು ಗೈಯದಟ್ಟುವೆನು ||
ಹೆತ್ತ ತಾಯ್ಗಳ ಬಸಿರು ನಿಮ್ಮನು |
ಮತ್ತೆ ಕೊಳ್ಳುವೆ ಸಾಲವವು ನೀ |
ವೆತ್ತಲುಂ ದೆಸೆಗೆಟ್ಟರೆಂದವನೆಚ್ಚನರಿಬಲವ ||೧೪||

ಇವನಲೇ ಶಕ್ರಾರಿ ರಾವಣ |
ಗುವರನೈಸಲೆ ರಾಮಲಕ್ಷ್ಮಣ |
ರಿವನ ಸರ್ಪಾಸ್ತ್ರದಲಿ ಮಲಗರೆ ಹಿಂದಿನಾಹವದೆ ||
ಇವನು ಮರಳೈತಂದನಿವನನು |
ಜವನ ಬಳಿಗಿಂದಟ್ಟಿ ವಾನರ |
ನಿವಹವನು ರಕ್ಷಿಸುವರಿಲ್ಲೆನುತಾಗ ಪಡೆ ಬೆದರೆ ||೧೫||

ನಾಕಜಾರಿಯ ಸಮರದುರುಬೆಯ |
ಭೀಕರತೆಯನು ಕಂಡು ರಾಘವ |
ನೋಕರಿಸಿ ಕಿಡಿಗಳನು ಕಣ್ಗಳಲುಗ್ರಕೋಪದಲಿ ||
ಸಾಕುಸಾಕೆಲೊ ಕುಮತಿ ರಥವನು |
ನೂಕು ನೀನಿತ್ತೆನ್ನುತವನನು |
ಜೋಕೆಯಿಂದಿಡಲಂಬು ನಾಂಟಿದುವಸುರನಂಗದಲಿ ||೧೬||

ಅಂಬುಗಳು ನಾಂಟಿರಲು ಲೆಕ್ಕಿಸ |
ದಂಬುಜೋದ್ಭವ ಪಿತನ ಮೈಯೊಳು |
ತುಂಬಿದನು ಪಡಿಸರಳ ರಾವಣಿ ಮುಯ್ಗೆ ಮುಯ್ಯೆನುತೆ ||
ಜಂಭವೈರಿಯ ಸದೆದೆನೆಂಬಾ |
ದಂಭವೆಮ್ಮೊಳು ಹರಿವುದೆನ್ನುತೆ |
ನಂಬಿ ನೀಂ ಬಂದುದಕೆ ಕೊಳ್ಳೆಂದೆಚ್ಚನಾರಾಮ ||೧೭||

ಹಿಂದೆ ವಿಶ್ವಾಮಿತ್ರಯಾಗದೊ |
ಳಂದು ಬಂದಾ ಮಂತ್ರಶರಗಳ |
ನಿಂದು ಬಿಜ್ಜದೆ ಬರಿಯಕೋಲ್ಗಳಿನೆಮ್ಮ ಬೆದರಿಸಲು ||
ಹಂದೆ ನಿನಗಾನಿಂದು ಸೋಲುವೆ |
ನೆಂದು ಬಗೆದೆಯ ತೆಗೆಯ ತೆಗೆ ನೀ |
ನೆಂದು ರಾವಣಿ ದಿವ್ಯಶರಗಳಿನೆಚ್ಚನಚ್ಯುತನ ||೧೮||

ಶಿವಶಿವಾ ಸಾಹಸಿಗನ್ಯೆ ಮಝು |
ದಿವಿಜಪತಿಜಿತ್ತಲ್ತೆ ಇವನೆ |
ಚ್ಚವಿರಳಾಸ್ತ್ರವಿವೇನನೆಸಗವು ತಡೆವರಾರಿವನು ||
ಇವನ ಮುಂದೆಮ್ಮ ಧಟು ಸಲುವುದೆ |
ಶಿವನ ಗಿರಿಯೆತ್ತಿದನ ತನುಜನೊ |
ಳೆವಗೆ ದಂಡಿಯೆ ಎನುತೆ ರಾಘವನೆಚ್ಚನಹಿತನನು ||೧೯||

ಒಂದುಕಡೆಯೊಳಗೆಂಟುಕೋಟಿಯ |
ನಂದು ಮುರಿದನು ರಥವ ಹನುಮನು |
ಕೊಂದನೊಂದೆಡೆ ಮೂರುಕೋಟಿಯ ಗಜವನಂಗದನು ||
ಮುಂದುವರಿದಶ್ವಗಳು ನೀಲನಿ |
ನೊಂದುಕೋಟಿಯು ಮಡಿದುವಾಕಪಿ |
ವೃಂದದೊಡೆಯನಿನಳಿದುವಗಣಿತಕೋಟಿ ಕಾಲ್ಬಲವು ||೨೦||

ಉಸಿರಲೇನದನಸುರಬಲವಿಂ |
ತಸುವನೀಗುತ್ತಿರಲು ದಾನವ |
ವೃಷಭನದನರಿದಾಗಳುಜ್ಜ್ವಲಿಸಗ್ನಿಯಂದದಲಿ ||
ಒಸರಿಸುತೆ ಕಣ್ಗಿಡಿಯನರಿಗಳ |
ಪೆಸರನೊರಸುವೆನೆನುತೆ ಕಾರ್ಮುಕ |
ಕಸಮವಿಧ್ಯಸ್ತ್ರವನು ತೊಟ್ಟನು ದೆಸೆಯು ಕಂಪಿಸಲು ||೨೧||

ಮುಸಕಮಂ ತಳೆದಿಂದ್ರಜಿತ್ತಾ |
ವಿಶಿಖವನುಮಂತ್ರಿಸುತೆ ಪೂಡ |
ಲ್ಕುಸಿರದಡಗಿತು ಚಲಸೆಯುಡುಗಿತು ವಾನರರ ಪಡೆಯ ||
ಅಸುರರಿಪು ನಿಜಸೋದರಂಬೆರ |
ಸಸಮರಣರಂಗದಲಿ ತಾಂ ಪವ |
ಡಿಸಿದನುರುಮೂರ್ಛೆಯಲಿ ಕಳ್ತಲೆ ಮುಸುಕಿದುದು ಜಗವ ||೨೨||

ಶರಣು ದೇವರ ದೇವ ಶಂಕರ |
ಹರ ಮಹೇಶ್ವರ ನಿನ್ನ ಭಕ್ತನ |
ಧುರದೆ ರಕ್ಷಿಸಿವಿಜಯಿಯೆನಿಸಿದೆ ಶರಣು ಭಯನಾಶ ||
ಪರಮರೂಪನೆ ಗಿರಿಜೆಯೋಪನೆ |
ಶರಣು ಶರಣೆಂದೆನುತೆ ಹರುಷದೆ |
ಪುರಕೆ ತಿರುಕಿದನಿಂದ್ರಜಿತ್ತುವು ತಂಡೆಗಿದನರುಹೆ ||೨೩||

ಇತ್ತ ಕಳದೊಳಗಖಿಳರುಂ ಪುರು |
ಷೋತ್ತಮನುಮೊದಲಾಗಿ ಸಲದೊಳು |
ಹತ್ತಿಕೊಂಡಿರೆ ವರವಿಭೀಷಣನೊರ್ವನಜಶರಕೆ ||
ತುತ್ತದಾಗದೆ ಬಲದೊಳಾರಾ |
ರೆತ್ತಲೊರಗಿಹರರಿವೆನೆಂದರ |
ಸುತ್ತೆ ನಡೆತಂದಜನ ತನಯನ ಕಂಡು ನುಡಿಸಿದನು ||೨೪||

ಕಂಡಿರೇ ಜಾಂಬವರೆ ಖಳಸು |
ದ್ದಂಡತನವನು ನಮ್ಮ ಸೇನೆಯ |
ದಿಂಡುಗೆಡಹಿ ಪುರಕ್ಕೆ ಸಾರ್ದನು ವಿಜಯಘೋಷದಲಿ ||
ತಂಡತಂಡದೊಳಖಿಳಕಪಿಗಳ |
ಹಿಂಡು ಕೆಡೆದಿದೆ ಸಗರಕುಲವಾ |
ರ್ತಂಡರೇನಾಗಿಹರೊ ಕಾಣಿಸರವರು ನಿಶೆಯೊಳಗೆ ||೨೫||

ಎಂದು ನುಡಿಯುತ್ತವನ ಜತೆಯಲಿ |
ಮುಂದೆ ನಡೆಯುತೆ ವಾನರೇಶ್ವರ |
ನಂದವನು ಮೇಣ್ಪಾಲಿಯಾತ್ಮಜನಿರವನೀಕ್ಷಿಸುತೆ ||
ಅಂದು ಮರುಗುತೆ ರಾಮಸೇವಾ |
ನಂದಿಮಾರುತನಂದನನ ಕಂ |
ಡೊಂದಿ ಕೋಪವನವನ ಕೇಳ್ದನು ಭೂಪರೆಲ್ಲೆನುತೆ ||೨೬||

ಶಿವಶಿವೇನಿವರಿಂತು ಕೇಳುವ |
ರವನಿಜಾಪತಿ ಕಾಣಿಸನೆ ಮೂ |
ಭುವನದೊಳಗೆಲ್ಲಿರೆಯುಮರಸುತ್ತಿಂದು ತಹೆನೆಂದು ||
ಪವನಜನು ಸಡಗರಿಸಲಜಸಂ |
ಭವನು ವೀಕ್ಷಿಸಿ ತಡೆಯ ತಡೆಯೆಂ |
ದವನ ನಿಲ್ಲಿಸಿ ನುಡಿದನತಿಹಿತಮಪ್ಪ ನುಡಿಗಳನು ||೨೭||

ಕಂದ ಮುಖ್ಯಪ್ರಾಣ ನೀನಿರೆ |
ಕುಂದನೇನೊಂದುವನೆ ರಘುವಂ |
ಶೇಂದು ನೀನಾ ಪರಮಪುರುಷನ ಭಕ್ತವರ್‍ಯನಲಾ |
ಇಂದು ನಿನ್ನನು ಕಂಡ ಬಳಿಕೆಮ |
ಗೊಂದಿನಿಸುಸಂದೆಯವುಮಿಲ್ಲವು |
ಮುಂದೆ ಭೂಪರನರಸುವೆವು ನಾವೆಂದು ತೆರಳಿದರು ||೨೮||

ಸರಳಿನೇಟಿಗೆ ಸೊಕ್ಕಿ ಸಲೆ ಮೈ |
ಮರೆತು ನೆಲದಲಿ ಲಕ್ಷ್ಮಣಂಬೆರ |
ಸೊರಗಿ ನಿದ್ರಿಪನಂತೆ ತೋರ್ಪಾ ಪರಮಪುರುಷನನು ||
ಧುರದ ಭೂಮಿಯೊಳಾಗ ತಾಂ ಕಂ |
ಡೆರಗಿ ಭಕ್ತಿಯೊಳರರೆ ಲೋಕದ |
ಪರಮದೈವಕ್ಕೀಯವಸ್ಥೆಯೆ ಎನುತೆ ಮರುಗಿದರು ||೨೯||

ಅನುವದೇನಿದಕೆನುತೆ ಚಿಂತಿಸಿ |
ವನಜಭವಸುತನಾಗ ಕರೆದನು |
ಹನುಮನನು ನಿನಗಹುದು ಸಾಧ್ಯವಸಾಧ್ಯವಿತರರಿಗೆ ||
ಎಣಿಕೆಗೇಳೀಗಳಿಗೆಯಿರ್ಪುದು |
ದಿನಪನುದಯಕ್ಕೋಷಧಿಯನೀ |
ನನಿತರಲಿ ತರಲಿವರು ಜೀವಿಪರುಳಿದೊಡಳಿದಪರು ||೩೦||

ಸಾರಿ ಲಂಘಿಸಿಯಾ ಹಿಮಾದ್ರಿಯ |
ಮೀರಿ ಕೈಲಾಸಾದ್ರಿಯನು ಗಂ |
ಭೀರವಾದುತ್ತರದ ಶರಧಿಯ ದಾಂಟಲಾಚೆಯಲಿ ||
ಭೂರಿತರುಪಶುಪಕ್ಷಿಮೃಗಕಾ |
ಧಾರಚಂದ್ರದ್ರೋಣಗಿರಿಯದ |
ನೇರು ನೆತ್ತಿಯೊಳಿಹುದು ಮೃತಸಂಜೀವನೌಷಧಿಯು ||೩೧||

ಸುರರ ಕಾವುಂಟದಕೆ ನೀನೆ |
ಚ್ಚರದೆ ಸಾಧಿಪುದೆನಲು ಮಾರುತಿ |
ಯೆರಗಿದನು ರಘುರಾಯನಡಿದಾವರೆಗೆ ಭಕ್ತಿಯಲಿ ||
ಭರದಿನಂಬರಕಡರಿ ಜಾಂಬವ |
ರೊರೆದಸರಿಯೊಳ್ದಾಂಟಿಯೆಲ್ಲವ |
ನರೆಗಳಿಗೆಯೊಳ್ಸೇರಿ ಗಿರಿಯನು ದಣಿದು ಬಾಯಾರಿ ||೩೨||

ಜಲವನರಸುತ್ತಲ್ಲಿ ಕಾಣದೆ |
ತಳೆದು ಶುಭರುದ್ರಾಕ್ಷಮಾಲೆಯ |
ಪೊಳೆವ ಭಸ್ಮವ ತೊಡೆದು ತನುವೊಳು ತಾಪಸೋತ್ತಮರ ||
ಪಳಿವತೇಜದೊಳೆಸೆವ ಯತಿಯನು |
ಬಳಿಯೊಳೊರ್ವನ ಕಂಡು ಜಲವಿಹ |
ನೆಲೆಯನರುಹಲ್ಬೇಕು ನೀವೆಂದೆರಗಿದನು ಪದಕೆ ||೩೩||

ಕಾಲನೇಮಿಯೆನಿಪ್ಪ ದನುಜನು |
ಖೂಳರಾವಣನೊರೆಯಲಿರುಳಿನ |
ವೇಳೆಯೊಳಗೀಘೋರಕಾನನದಲ್ಲಿ ವೇಷವನು ||
ತಾಳಿ ತನ್ನಯ ಕಜ್ಜಕೆಡರನು |
ಮೇಳವಿಸಲೈತಂದ ಬಲುಕೇ |
ಡಾಳಿಯಿವನೆಂದರಿವನೆಂತಾ ಹನುಮನಕುಟಿಲನು ||೩೪||

ಖಳನು ಬಳಿಕೊಡನಲ್ಲಿ ನಿರ್ಮಿಸಿ |
ಕೊಳನನೊಂದನು ಜಳವನೀಂಟಿನ |
ಲಿಳಿದು ಹನುಮನು ತೃಷೆಯ ಕಳೆಯುತ್ತಿರ್ಪ ಸಮಯದಲಿ ||
ಘಳಿಲನಂಘ್ರಿಯ ಪಿಡಿದು ನೆಗಳೊಂ |
ದೆಳೆಯ ತೊಡಗಲ್ಕಾಗಳಂಘ್ರಿಯ |
ಬಲುಹಿನಿಂ ಜಾಡಿಸಲು ನಿಲ್ಲದೆ ಮತ್ತೆ ನುಂಗಿದುದು ||೩೫||

ಏನಿದಿಂತಹಶಕ್ತಿಯಿದಕೆಂ |
ದಾನವವ್ಯಾಕರಣಪಂಡಿತ |
ನಾನುತತಿವಿಸ್ಮಯವನರಿದನು ಕೃತ್ರಿಮವಿದೆನುತೆ ||
ತಾನು ತಳುವಲ್ಕಾಗದೆಂದೊಡ ।
ನಾನೆಗಳ ಸೀಳಿದನು ಕಪಟದ |
ದಾನವನ ಮುಡಿಪಿಡಿಯುತಪ್ಪಳಿಸಿಳೆಯೊಳೊರಗಿಸಿದ ||೩೬||

ಬಳಿಕ ದಿವ್ಯೌಷಧಿಯ ಪುಡುಕುತೆ |
ತಿಳಿಯದದ ನಿರ್ಧರಿಸಲಿಂತೆಂ |
ದಳಿಮನದೆ ಬೇಸತ್ತು ತನ್ನಯ ಬುದ್ಧಿಯನು ಪಳಿದು ||
ತಳುವಗೈಯಲ್ಸಮಯಮಲ್ಲೆಂ |
ದಲುಗದಂದದೆ ಶಿಖರವನೆ ಕಿ |
ತ್ತೊಲವಿನಿಂದದ ತಂದು ರಾಘವನೆಡೆಯೊಳಿಳುಹಿದನು ||೩೭||

ನೆರೆಯರಕ್ಕಸರೇನಿದೇನೆಸ |
ಲರರೆ ಅಹುದಹುದೆಂದು ಜಾಂಬವ |
ಸುರೆವಿಭೀಷಣನೊಡನೆ ನಲಿಯುಲ್ಸುರರು ಭಾಷೆನಲು ||
ವರಪಿತಾಮಹಸುತನೆ ಕೊಳ್ಳಿದ |
ನರಸನನು ಬೇಗೆಬ್ಬಿಸೆಂದಾ |
ತುರದೆ ಹನುಮನು ಮೊರೆಯನಿಟ್ಟೊಡೆ ಬಂದನಜಸುತಸು ||೩೮||

ಅರಸಿ ಮೂಲಿಕೆಗಳನು ನಾಲ್ಕನು |
ಬೆರಸಿ ಮರ್ದಿಸಿ ರಘುವರಾನ್ವಯ |
ದರಸರಾ ನಾಸಿಕದ ಬಳಿಯೊಳ್ಪಿಡಿಯಲಾಕ್ಷಣದೆ ||
ಮರೆದು ನಿದ್ರಿಪರೆಚ್ಚರೊಂದುವ |
ಪರಿಯೊಳವರಾಗೆಳ್ದು ಕುಳ್ಳಿರ |
ಲರಲ ಸರಿಯನು ಸುರರು ಸುರಿದರು ಭರದಿನಂಬರದೆ ||೩೯||

ಬಳಿಕಮಾದಿವ್ಯೌಷಧದೆ ಕಪಿ |
ಬಲವನೆಬ್ಬಿಸಿ ಜಾಂಬವನು ರಘು |
ತಿಲಕನೆಡೆಗೈತಂದು ಹನುಮನು ಗೈದ ಸಾಹಸದೆ ||
ಉಳಿದೆವೆಲ್ಲರು ಲಾಲಿಸುವುದೆನ |
ಲೊಲಿದು ಭಕ್ತನ ಕರೆದು ಕರುಣಾ |
ಜಲಧಿ ತಕ್ಕೈಸಿದನು ಕೊಂಡಾಡಿದನು ಬಾಯ್ದಣಿಯೆ ||೪೦||

ಈಪರಿಯ ದುರ್ದಶೆಯೆ ವಾನರ |
ಭೂಪನಾಳ್ಗಳಿಗೆಂದು ಕಪಿತತಿ |
ಕೋಪದಿಂ ಪಂಜುಗಳ ಪತ್ತಿಸಿ ಲಂಕೆಯನು ಪೊಕ್ಕು ||
ಕಾಪಿನವರನು ಚಲ್ಲಬಡಿದಾ |
ಟೋಪದಿಂದಾನಗರಿಗಗ್ನಿ |
ಸ್ಥಾಪನೆಯ ಗೈದೆರಡನೆಯದೀದಹನವೆನಿಸಿದುದು ||೪೧||

ಆರನೆಯ ಸಂಧಿ ಸಂಪೂರ್ಣಂ

# ಏಳನೆಯ ಸಂಧಿ.

ಸೂಚನೆ || ಸೀತೆಯಂದದ ಬೊಂಬೆಯೊಂದನು |
ಘಾತಿಸಂಜೆಸಿದಿಂದ್ರರಿಪುವನು |
ಖ್ಯಾತಿಯಿಂ ಲಕ್ಷ್ಮಣನು ಕೊಂದನು ಸುರರು ಕೊಂಡಾಡೆ||

ಹೋಯಿತಿನ್ನೇನೆಮ್ಮ ನಗರಿಯು |
ಪಾಯವೇನಿದಕೆನ್ನುತಸುರರು |
ಬಾಯಬಿಟ್ಟರು ಭಯರಸಾಬ್ಧಿಯ ಮಧ್ಯದಲಿ ಸಿಲುಕಿ ||
ಹಾಯಿದರು ದೆಸೆದೆಸೆಗೆ ಮಕ್ಕಳು |
ತಾಯಿಗಿಲ್ಲೆಂದೆಂಬ ತೆರದಲಿ |
ಪಾಯದಳವಿಂತಾದುದೆಂಬುದ ಕೇಳ್ದನಸುರಪತಿ ||೧||

ಜೀವಿಸಿದರೇ ಮರಳಿ ವೈರಿಗ |
ಳಾವ ಸತ್ವವೊ ಕಾಣೆ ಶಿವಶಿವ |
ಸಾವನೊಂದದರೊಡನೆ ಕಾದಿದೊಡಾವ ಫಲ ತನಗೆ ||
ಈವಿಚಾರದಿನೇನು ಮೊದಲೊಳ |
ಗಾವಚಲವನು ಗೈದನೋ ಸಂ |
ಭಾವಿಸುವೆನದನೆಂದು ಮಕರಾಕ್ಷನನು ಕರೆದೆಂದ ||೨||

ಮಗನೆ ನೀನಪ್ರತಿಮುಖರನಿಂ |
ದೊಗೆದಸುತನೆಂಬುದನು ತೋರಿಸು |
ಹುಗು ರಣೋರ್ವಿಯನಯ್ಯನನು ತೆಗೆ ರಾಮನುದರದೊಳು ||
ಹಗೆಯು ಹರಿಯಿತ್ತೆನಿಸಿಯೆನ್ನಯ |
ಬಗೆಗೆ ಮುದವನು ಬೀರು ನೀನೆನೆ |
ಮಿಗುವ ಹರಿಸದೊಳಸುರನಡರಿದನಂದು ಮಣಿರಥವ ||೩||

ನೆರೆದ ಮೃಗಸಂಕುಲಕೆ ಪೆರ್ಬುಲಿ |
ಮೊರೆಯುತೆರಗುವೊಲಹಿತಕಟಕವ |
ನುರುಬಿ ಹೊಕ್ಕನು ಪೆಣನ ಮೆದೆಗೆಡಹಿದನು ನಿಮಿಷದಲಿ ||
ಅರಸನೆಲ್ಲಿಹನವನ ತೋರಿಸಿ |
ದರಿಗೆ ಲಕ್ಷಾಂತರದ ಹಣವನು |
ತರಿಸಿ ಕೊಟ್ಟಪೆನೆನ್ನುತಾಣೆಯನಿಟ್ಟು ಸಾರಿದನು ||೪||

ನೋಡಿದನು ಕಟ್ಬಾಳು ತನ್ನವ |
ರೋಡಿಬರ್ಪುದನಾನಿಶಾಚರ |
ನೀಡಿರಿಯುತೊಡನೈದುವುದುಮಂ ರಾಮಚಂದ್ರಮನು ||
ಕೇಡಿಗನು ನಮ್ಮಖಿಳಬಲವನು |
ಪಾಡುಪಡಿಸುವನಿವನ ನೆತ್ತರ |
ನೂಡಿಸುವೆನಾರಣಪಿಶಾಚಂಗಳಿಗೆ ನಾನೆನುತೆ ||೫||

ಆರು ನೀನೆಲೊ ಫಡ ದುರಾತ್ಮಕ |
ವೀರ ಕಪಿಸುಭಟಾಗ್ರಗಣ್ಯರ |
ಮೀರಿ ಪೌರುಷವೇರಿಯೈದುವುದೀಗಳಾವೆಡೆಗೆ ||
ಕಾರಿಸುವೆ ರಕುತವನು ನಿಲ್ಲೆನು |
ತೇರಿಸಿದಸಿಂಜಿನಿಗೆ ಸರಳನು |
ಸೇರಿಸೆಸೆಯಲು ಖಾತಿಗೊಂಡನು ಖಳನು ಕುದಿಕುದಿದು ||೬||

ಬರುವ ಶರವನು ಮಧ್ಯಮಾರ್ಗದೆ |
ತರಿದು ತನ್ನಯ ಪಿತನ ಕೊಂದಾ |
ಪರಮಪಾತಕಿಯಿವನ ಕೊಲ್ಲದೆ ಮಾಣೆನೀಗೆನುತೆ ||
ಸರಳ ಮಳೆಗರೆಯುತ್ತೆ ಲಕ್ಷ್ಮೀ |
ವರನ ತನುವನು ನೋಯಿಸಲ್ಕ |
ಚ್ಚರಿಯದೇನಸುದಾರಿ ಮಗುಳಿಡಲಸುರನಸುವುಳಿದ ||೭||

ಕೇಳಿಯಿದನಿಂದ್ರಾರಿ ತಾತನ |
ಬೀಳುಗೊಂಡನು ರಣಕೆ ಸೀತೆಯ |
ಹೋಲಿಕೆಯೊಳಾಕೃತಿಯನೊಂದನು ಗೈದು ಮಾಯೆಯೊಳು ||
ಸೀಳುವೆನು ನಿಮ್ಮರಸನರಸಿಯ |
ನಾಳುತನ ನಿಮಗಿರಲು ಬಿಡಿಸುವು |
ದೇಳಿ ನೀವೆಂದಾರ್ದನಭ್ರದೆ ಕಪಿಗಳಿದಿರಿನೊಳು ||೮||

ಇರಿಸಿ ರಥದೊಳಗದನು ಖಡ್ಗದಿ |
ನಿರಿಯತೊಡಗಲ್ಕಾಗಳದು ಗೋ |
ಳ್ಗರೆಯುತಿರ್ದುದು ನೀಚನಿವನಿಂದೆನ್ನ ಕೊಲ್ಲುವನು ||
ಮರಣವೇಳೆಯೊಳೆನ್ನ ರಮಣನ |
ಚರಣದರ್ಶನವಿಲ್ಲದೀಪರಿ |
ನರಕಭಾಜನವಪ್ಪ ಸಾವಿದು ಸಮನಿಸಿತು ತನಗೆ ||೯||

ಒಡೆಯನಿನ್ನೇನೆನ್ನ ಬಿಡಿಸುವ |
ನೆಡೆಯಸೇರುವೆನೆಂಬ ಸಮಯದೆ |
ಕಡುಗದಿಂ ಖಳನೆನ್ನ ತರಿವಸು ನಿನಗೆ ಸಮ್ಮತವೆ ||
ಬಡವನೇ ಬಲದಲ್ಲಿ ಹನುಮನೆ |
ಬಿಡಿಸಲಾಗದೆ ನೀನು ನಿನಗಾ |
ಸೊಡತಿಯಲೆ ನಿರ್ಘೃಣತೆಯಿನಿತೇಕೆಂದುದಾವಮಾಯೆ ||೧೦||

ಸೊಲ್ಲು ಮೇಣಾಕೃತಿಯೊಳರಸನ |
ವಲ್ಲಭೆಯೆ ದಿಟಮಿವಳು ಶಿವಶಿವ |
ಖುಲ್ಲನನ್ಯಾಯವನು ಬಳಸುವನೆನುತೆ ಲಟಕಟಿಸಿ ||
ನಿಲ್ಲಿಸೆಲೆ ದುಷ್ಕಾರ್ಯವಿದು ನಿನ |
ಗಲ್ಲ ನಿಮ್ಮನ್ವಯವು ತಾಂ ಕಿರಿ |
ದಲ್ಲ ತಡೆಯೆಂದೆನುತೆ ಮಾರುತಿ ಹಾಯ್ದನಂಬರಕೆ ||೧೧||

ಬರುವ ಹನುಮನ ಮುಂದೆ ಮಾಯಾ |
ತರುಣಿಯನು ಕಡಿಖಂಡವೆಸಗು |
ತ್ತರುಣಜಲವನು ಸುರಿದು ರೌದ್ರೋದ್ರೇಕವನು ನಟಿಸಿ ||
ಅರರೆ ನೀನಿನ್ನಾರ ಬಿಡಿಸುವೆ |
ಮರುಳಮಾರುತಿ ಮರಳಮರಳೆಂ |
ದೊರೆಯುತೊಡನೆಯೆ ಮಾಯವಾದನು ಖಳನು ಮುಗಿಲೊಳಗೆ ||೧೨||

ಪಾಳದಾಯಿತ್ತಖಿಳಲೋಕವು |
ಕೋಳುಹೋದುದು ರಾಮಕಾರ್ಯವು |
ಹೂಳಿತಿಳೆಯೊಳಗನಿಲನಂದನನಾಳುತನದೆಸಕ ||
ಖೂಳರಾವಣಿಯಿಂದೆ ಸಕಲರ |
ಬಾಳು ತಾನಿಂತಾಯ್ತೆ ನಾನಿದ |
ನಾಳಿದಂಗೆಂತೊರೆವೆನೆಂದನು ಹನುಮನುರೆ ಮರುಗಿ ||೧೩||

ಎತ್ತಿಕೊಂಡಾತುಂಡುಗಳ ನೃಪ |
ನತ್ತವೇಗದೊಳೈದಿ ತೋರುತೆ |
ಬಿತ್ತರಿಸಿದನು ಕಂಡುದೆಲ್ಲವನೆರಗಿ ಪದಯುಗಕೆ ||
ಚಿತ್ತದೊಳಗಿದಕಳುಕಲಾಗದು |
ಮಿತ್ತುವೆಂಬವಳಾರು ಮತ್ತವ |
ಳೆತ್ತಲಿರ್ಪಳು ಬೆಸಸೆ ಸಾಕೆನಗೆಂದನಾ ಹನುಮ ||೧೪||

ಕಂಡನಿದಿರೊಳಖಂಡಲಕ್ಷ್ಮಿಯ |
ಪುಂಡರೀಕಾಂಬಕೆಯ ಸೀತೆಯ |
ಖಂಡಿಸಿದ ಮೈತುಂಡನುಮ್ಮಳಗೊಂಡು ಮೈಮರೆದು ||
ತಂಡತಂಡದೊಳುಗುವ ಕಂಬನಿ |
ಕೆಂಡದಂತುರೆ ಸುಡಲು ಚೇತನ |
ಗೊಂಡು ಹಲುಬಿದನರಸ ನೆನೆನೆನೆದಾತ್ಮವಲ್ಲಭೆಯ ||೧೫||

ಏನಿದೆತ್ತಣೆನಾಯ್ತು ಚಿತ್ತ |
ಗ್ಲಾನಿಯೆಂದಾವರವಿಭೀಷಣ |
ನಾನುತತಿವಿಸ್ಮಯವನಾಲಿಸಿಯರಿದು ಸಂಗತಿಯ ||
ಹೀನಮಾಯೆಯ ಬಳಸಿ ರಾವಣಿ |
ಯಾನಿಕುಂಭಿಳೆಯಲ್ಲಿಯಾಗವ |
ದೂನವಾಗದೊಲೆಸಗಲೀಪರಿಕಪಟವೆಸಗಿಹನು ||೧೬||

ದೇವ ಬಿಡು ಚಿಂತೆಯನು ಸೀತಾ |
ದೇವಿಯರಿಗಿಲ್ಲಾವಭೀತಿಯು |
ಮೀವಿಚಾರವನರಿದು ಬರಲಿಂದಟ್ಟು ಪವನಜನ ||
ಸೇವಕನ ಬಿನ್ನಪವನಾಲಿಸು |
ಭಾವದಿಂದೀವ್ಯಥೆಯ ಕಳೆ ರಾ |
ಜೀವಮುಖಿ ಸುಖವಿಹಳು ಸತ್ಯವಿದೆಂದನಸುರೇಂದ್ರ ||೧೭||

ಅರಸನಾಣತಿಸಲ್ಕೆ ಹನುಮನು |
ಸರಸಿಜಾನನೆ ಸುಖದಿನಿರ್ಪುದ |
ನರಿದು ಬಂದರುಹಿದನು ಸಂತಸವುಕ್ಕಿತಖಿಲರಿಗೆ ||
ಶರಣರಗ್ರಣಿ ವರವಿಭೀಷಣ |
ನರಿಕೆಗೈಯುತ್ತಾಗ ಲಕ್ಷ್ಮಣ |
ವರಕಪೀಂದ್ರರ್ವೆರಸು ರಾವಣಿ ಗೈವಯಾಗವನು ||೧೮||

ಕಿಡಿಸಬೇಕೆಂದೆನುತೆ ಹಾವಳಿ |
ಯಿಡುತೆ ಮಾರಣಹೋಮಸಮಯಕೆ |
ದುಡುಕಿನಿಂದೊಳಪುಗಲು ಕಾವಲಿನಸುರರಾರ್ಭಟಿಸಿ ||
ಖಡುಗಕುಂತಮುಸುಂಡಿಗಳಿನೆಡೆ |
ಗುಡದೆ ಬಡಿಯಲ್ಕಂಡು ಲಕ್ಷ್ಮಣ |
ನೊಡನೆ ಶರಗಳನಿಡುತೆ ಕೆಡಹಿದನಗಡುರಕ್ಕಸರ ||೧೯||

ಧರಿಸಿ ಮುಡಿಯನು ದನುಜವಿಪ್ರರ |
ನೆರವಿಯೊಳು ಕುಳಿತುಗ್ರಮುಖವನು |
ವಿರಚಿಸುತ್ತಿಹ ದಾನವೇಶ್ವರಪುತ್ರನನು ಕಂಡು ||
ವರವಿಭೀಷಣನಾಗ ತೋರ |
ಲ್ಕರಿಭಯಂಕರಲಕ್ಷ್ಮಣನು ನಿಜ |
ಚರಣದಿಂದೊದೆಯಲ್ಕೆ ಲೆಕ್ಕಿಸದವನು ಕರ್ಮದೊಳು ||೨೦

ನಿರತನಾಗಿರೆ ಕಂಡು ಪುನರಪಿ |
ಕೆರಳಿಯಾತನ ಶಿರವನೊದೆಯು |
ಲ್ತಿರುಗಿ ನಿಟ್ಟಿಸಿಕುಪಿತನಾಗುತ್ತೆಳ್ದು ರಾವಣಿಯು ||
ದುರುಳನೆಮ್ಮವನಿಂದು ನಿನ್ನನು |
ಕರೆದುತಂದನು ನಮ್ಮ ಕೊಲಿಸ |
ಲ್ಕರರೆ ನಿಮಗಂ ಕೇಡ ತಾರದೆಮಾಣನಿವನೆಂದ ||೨೧||

ಯಾಗಮುರಿಯಿತ್ತಿಂದ್ರಜಿತ್ತುವು |
ಬೇಗ ರಥವೇರಿದನು ಶರವನು |
ತೂಗುತೆಚ್ಚನು ಕಪಿಗಳಗ್ರಣಿಗಳನು ನೋಯಿಸಿದ ||
ಕೂಗು ನಿಂದುದು ತನ್ನವರದೆಂ |
ದಾಗ ಲಕ್ಷ್ಮಣ ಕೋಪಗೊಳ್ಳುತ |
ಮೋಘಮಾರ್ಗಣದಿಂದಮೆಚ್ಚನು ರಾವಣಾತ್ಮಜನ ||೨೨||

ನಿಂದುದಸುರನ ರಥವು ವಾಜಿಯು |
ನೊಂದು ಮುಗ್ಗರಿಸಿದುವು ಸಾರಥಿ |
ಮುಂದುಗೆಟ್ಟನು ಮುರಿದುಬಿದ್ದುದು ಕರದ ಕಾರ್ಮುಕವು ||
ನೊಂದನೇನವನಡರಿದನು ಮ |
ತ್ತೊಂದುತೇರನು ಬಿಲ್ಲುಗೊಂಡನು |
ಹಂದೆಕೊಳ್ಳೆದನೆನ್ನುತೆಚ್ಚನು ರಾಘವಾನುಜನ ||೨೩||

ಹಿಂದೆ ಸುರಪನ ಗೆಲ್ದೆನೆನ್ನುವ |
ದೊಂದು ಬಡಿವಾರವನು ಬಗೆಯೊ |
ಳ್ತಂದು ನವ್ಮೊಡನಮುಮು ಕಾದಲ್ಕೆಂದು ನಿಂದಿಹೆಯ ||
ಕೊಂದು ನಿನ್ನನು ಭೂತಗಣಗಳಿ |
ಗಿಂದು ಬಡಿಸುತೆ ತೃಪ್ತಿವಡಿಸುವೆ |
ನೆಂದು ಲಕ್ಷ್ಮಣನವನ ಕಣೆಯನು ಕೊಚ್ಚಿ ಮೇಣೆರದೆ ||೨೪||

ಏನುತವಹ ಹರ್ಯಸ್ತ್ರವನು ನಿಜ |
ಧನುವಿಗೇರಿಸಿ ಬಿಡಲರಾತಿಯು |
ಚಣದೊಳದನಾಶಿವಸಶರದಿಂದರಿಯುತಜನಿತ್ತ ||
ಘನಮಹಾಶೂಲವನು ತೆಗೆದದ |
ನಿನಕುಲೋದ್ಭವನುರಕೆ ಗುರಿಯಿಡು |
ವನುವ ಕಂಡಾವರವಿಭೀಷಣ ಬೆದರಿದನು ಮನದೆ ||೨೫||

ದೇವ ತುಡುತುಡು ಸರಿಯ ಬಾಣವ |
ನಾವಿರಂಚಿಯ ಶೂಲವನು ಖಳ |
ರಾವಣಿಯು ತಾನೆಸೆವ ಮುನ್ನವೆ ಕಡಿಯ ನೀನದನು ||
ಭಾವಿಸಲ್ಕದನೆಸೆದ ಬಳಿಕಿ |
ನ್ನಾವುಪಾಯವುಮಿಲ್ಲ ನಿನ್ನಯ |
ಜೀವಮುಳಿಯದು ಸತ್ಯ ನಂಬುವುದೆಂದನಸುರೇಂದ್ರ ||೨೬||

ಕೇಳಿದೊಡನೆಯೆ ಲಕ್ಷ್ಮಣನು ಸಿರಿ |
ಲೋಲರಾಮನ ಚರಣಕಮಲವ |
ನೋಲಗಿಸಿ ಮನದಲ್ಲಿ ಮಂತ್ರಿಸುತಜಮಹಾಸ್ತ್ರವನು ||
ಹೇಳಲೇನದನೆಸೆಯಲಾಕ್ಷಣ |
ಶೂಲವಿಕ್ಕಡಿಯಾದುದಿಂದ್ರನ |
ಸೋಲಿಸಿದ ಬಲುಗಲಿಯ ಮಸ್ತಕವೆಸದುದಭ್ರದೊಳು ||೨೭||

ಕಂಡರಿದನಾಗಸದೊಳಮರರು |
ಮಂಡೆಬಾಗಿದರಹುದೊ ಲಕ್ಷ್ಮಣ |
ಗಂಡರಿಗೆ ನೀಂ ಗಂಡನಹುದಿಂದೆಮ್ಮನುಳುಹಿದಲಾ ||
ಭಂಡನಿವನೆಮ್ಮಮರನಗರಿಯ |
ಹಿಂಡಿ ರಸವನು ಬಸಿದುಕೊಂಡನು |
ಖಂಡಿಸಿದೆ ನೀನಿವನ ಥಣುಥಣುವೆನುತೆ ಪೊಗಳಿದರು ||೨೮||

ತಿರುಗಿದನು ಸೌಮಿತ್ರಿ ರಾಘವ |
ರರಸನಲ್ಲಿಗೆ ಧುರದೆ ನಡೆದುದ |
ನರಿಕೆಗೈದನು ವರವಿಭೀಷಣಮುಖ್ಯರಹುದೆನಲು ||
ಪರಮಕರುಣಾಸಿಂಧು ತಮ್ಮನ |
ಕರೆದು ತಕ್ಕೈಸಂಕವೇರಿಸಿ |
ಶಿರವನಾಘ್ರಾಣಿಸುತೆ ಸೊಕ್ಕಿದನಾಗಳತಿಮುದದೆ ||೨೯||

ಕಂದಲಕ್ಷ್ಮಣನಿನ್ನದೆಸೆಯಿಂ |
ದಿಂದಿರನ ಪಗೆಸಂದುಪೋದನ |
ಮಂದತೋಷಿತಹೃದಯರಾದರು ನಾಕನಿಲಯಿಗಳು ||
ಇಂದುತನಗುಪಕಾರವೆಸಗ |
ಲ್ಕೆಂದು ನೀಂ ಮಿಗೆ ನೊಂದೆಯೈ ಬೆ |
ನ್ನಿಂದೆ ಬಂದವರುಂಟು ಹಲಬರು ನಿನಗೆ ಸರಿಬಹರೆ ||೩೦||

ಎಂದು ರಾಮನು ಸೋದರನ ಗುಣ |
ವೃಂದವನು ಬಾಯ್ದಣಿಯೆ ವರ್ಣಿಸಿ |
ಯಂದು ಕರೆದುಸುಷೇಣನನು ಜವದಿಂದಮೌಷಧವ ||
ಇಂದುಲೇಪಿಸಿಯಿವನ ಗಾಯವ |
ನಂದದಿಂ ಮಾಯಿಸೆನೆ ವೈದ್ಯನು |
ಚಂದವೆಸಗಿದನದನು ಮಾರುತಿ ಮರ್ದ ತರಲೊಡನೆ ||೩೧||

ಏಳನೆಯಸಂಧಿ ಸಂಪೂರ್ಣಂ

---

## ಎಂಟನೆಯ ಸಂಧಿ.

ಸೂಚನೆ || ಗಂಡುಗಲಿ ರಾವಣನು ಶೂಲವ |
ಕೊಂಡು ಲಕ್ಷ್ಮಣನೆದೆಯನಿರಿಯ |
ಲ್ಕಂಡು ರಾಘವನವನ ಘಾತಿಸಿಯಟ್ಟಿದನು ಪುರಕೆ ||

ಇತ್ತಲಿಂತಿರಲತ್ತ ರಾವಣ |
ಸೊತ್ತುವತಿಚಿಂತೆಯೊಳು ಬಿಸುಸು |
ಯ್ಯುತ್ತೆ ಮಗನ ಗುಣಾವಳಿಯ ನೆನೆದೆತ್ತಿ ಬಣ್ಣಿಸುತೆ ||
ಮಿತ್ತುವಾದಳೆ ಮಗನೆ ನಿನಗಾ |
ತೊತ್ತು ಜನಕನ ಮಗಳು ಶಿವಶಿವ |
ಹುತ್ತದೊಳಗಣ ಹಾವ ಕೆಣಕುತೆ ಕೆಟ್ಟೆನಕಟೆಂದ ||೧||

ಆಡಲೇಕಿನ್ನದನು ಬರಿದೇ |
ಮೂಢನಾಗುತೆ ತಾನು ಕಾಲವ |
ನಾಡೆ ಕಳೆದೆನು ಪುತ್ರಮಿತ್ರರನಿಕ್ಕಿದೆನು ರಣಕೆ |
ನೋಡಲವನೀಸುತೆಯ ಕೊರಳಿಗೆ |
ಹೂಡಿ ಖಡ್ಗವ ಮೊದಲೆ ಸವರಿರೆ |
ಪಾಡಿಗೊಪ್ಪುವಫಲವದಿಲ್ಲೆಂದೆನುತೆ ರಾಘವನು ||೨||

ಜೋತು ಮನದೊಳಯೋಧ್ಯೆಯತ್ತನು |
ಜಾತನೊಡನಿಂದೈದುತಿರ್ದನು |
ನೀತಿಯಿದು ಮೊದಲೆನಗೆ ತೋರಿದುದಿಲ್ಲ ವಿಧಿವಶದೆ ||
ಘಾತಿಗೊಳಿಸೀಕ್ಷಣದೊಳವಳನ |
ಜಾತರಿಪುವಿವನೆನಿಸಿ ಲೋಕ |
ಖ್ಯಾತನಪ್ಪೆನೆನುತ್ತೆ ನಡೆದನು ಖಡ್ಗಕರನಾಗಿ ||೩||

ತತ್ತ ಕಡುಕೋಪದೊಳು ತೆರಳುತೆ |
ಮತ್ತಕಾಶಿನಿಯನ್ನು ಕಾಣುತೆ |
ತೊತ್ತುಗುವರಿಯೆ ನಿನ್ನದೆಶೆಯಿಂ ಸತ್ತರೆನ್ನವರು ||
ಮಿತ್ತುವೋ ನೀಂ ಕಾಲಭೈರವ |
ನೊತ್ತೆಯೋ ಘಡ ಮಾರಿಮಸಣಿಯೊ |
ಸತ್ತೆ ನೀನಿನ್ನೆನುತೆ ಖಡ್ಗವನೆತ್ತಿ ಝಳಿಪಿಸಿದ ||೪||

ತಡೆಯ ತಡೆಯೆಲೆಭೂಪ ನಿನ್ನಯ |
ಕಡುಪರಾಕ್ರಮಕಬಲೆ ಸಾಟಿಯೆ |
ದುಡುಕಿ ಕಿಡಿಸದಿರಿನಿತುದಿನ ನೀಂ ಪೊರೆದ ಧರ್ಮವನು ||
ಕಡಿಯಲೀಕೆಯನೊಡಲ ದಹಿಸುವ |
ಕಿಡಿಯು ತಣ್ಣಿತ್ತೆಂದು ಬಗೆದೆಯ |
ಕುಡಿದೊಡಹುದಲೆ ಶಾಂತಿ ರಾಘವರೊಡಲ ರಕುತವನು ||೫||

ಈಸುದಿನ ಚಲದಂಕನೆನಿಸುತೆ |
ವಾಸಿಯದನೀನೀಗಲುಳಿಯು |
ತ್ತೀಸುದಿನದಾಬಾಳಿಕೆಗೆ ತನುವಾಸೆಯನು ಬಿಡದೆ ||
ಹೇಸಿಕೆಗೆ ಪಕ್ಕಾಗಿ ಬದುಕುವೆ |
ದಾಶರಥಿಗಳ ಕೊಲುವೆನೆಂಬಾ |
ಬಾಸೆ ಹಳಚಿತ್ತೆಂದರೊಡನಿರ್ದಾಪ್ತಮಂತ್ರಿಗಳು ||೬||

ತಟ್ಟನದು ಕಿವಿದಟ್ಟಿ ಸೀತೆಯ |
ಬಿಟ್ಟು ಹಿಂದಕೆ ನಡೆದು ರಾವಣ |
ನಟ್ಟಹಾಸದೆ ತರಿಸಿ ಮಣಿಮಯರಥವನೇರುತ್ತೆ ||
ದಿಟ್ಟರಾದವರೆನ್ನ ಜತೆಯೊಳು |
ಬಿಟ್ಟು ಸಕಲವನೀಗಳೈದುವು |
ದಟ್ಟ ಬೋನವ ಬಿಟ್ಟು ಕಡೆಯುದ ಹೊಟ್ಟೆಗರು ನಿಲಲಿ ||೭||

ಹೆಂಡಿರಾಸೆಯ ಮಕ್ಕಳಾಸೆಯ |
ನುಂಡು ಸವಿಯದ ಭಾಗ್ಯದಾಸೆಯ |
ಗಂಡುಗುರುತಿನ ಷಂಡರಿರ್ಪುದು ಬಲಿದು ಬಾಗಿಲನು ||
ಗಂಡುಗಲಿಗಳು ವೈರಿಭಟರನು |
ದಿಂಡುದರಿಯುವೆವೆಂಬ ಸುಭಟರು |
ಗುಂಡಿಗೆಯ ರಣಧೀರರಾರವರೈದಲೆನ್ನೊಡನೆ ||೮||

ಎಂದು ಡಂಗುರಹೊಯಿಸಿ ಸಾರಿಸಿ |
ಮುಂದಿಮಾರ್ಬಲವೆರಸಿಯಸುರನು |
ಮುಂದುವರಿದೈತರ್ಪ ಠೀವಿಯ ಕಂಡು ರಾಘವನು ||
ಬಂದ ಶೂರನದಾವನೆನಲೈ |
ತಂದವನು ರಾವಣನು ಜೀಯೆನ |
ಲಂದು ಸಂಭ್ರಮದಿಂದೆ ಕೊಂಡನು ಧನುವ ಜೇವಡೆದು ||೯||

ಕಾಲರೂಪದ ಕಾಳರಕ್ಕಸ |
ನಾಲಿಗಳ ಮರಳಿಸುತೆ ಕಡುದ |
ವ್ಯಾಳಿಯಲಿ ಬೊಬ್ಬಿಡುತೆ ಬರುತಿರೆ ಕಂಡು ಕಪಿಸೇನೆ ||
ಕಾಲಿನೋಟವ ತೋರಿ ಕಾಣದೊ |
ಲೋಳಿಗೊಳಿಯುಂ ಬಿಡದೆ ಕೋಪದೆ |
ಮೌಳಿಗಳ ಕುಣಿಯಿಸುತೆ ಬಂದನು ರಾಮನೆಲ್ಲೆನುತೆ ||೧೦||

ಇಂದು ತನ್ನನುಜಾತನನು ಸುತ |
ಬಂಧುಮುಖ್ಯರಕೊಂದನೆಲ್ಲಿಹ |
ನಂದು ತಂಗಿಗೆ ಭಂಗವೆಸಗಿದ ನೀಚನೆಲ್ಲಿಹನು ||
ಸುಂದರಾಂಗಿಯನವನ ಸುದತಿಯ |
ನೊಂದಿ ನಾನುಯ್ದಂದೆ ತನ್ನನು |
ಕೊಂದುಕೊಳ್ಳದೆ ಜೀವವಿಡಿದಿಹ ಹಂದೆಯೆಲ್ಲಿಹನು ||೧೧||

ಹರಿಹರಬ್ರಹ್ಮರನು ಧುರದೊಳು |
ಸರಕುಮಾಡದ ವಿಗಡರಾವಣ |
ನುರುಪರಾಕ್ರಮದುರಿಯ ಮಧ್ಯಕೆ ಸಿಲುಕೆ ಸರಶಲಭ ||
ಕರಿಕುಗೊಳ್ಳದೆ ಸೀದು ತನ್ನಯ |
ಪರಿಯಸರಿಯದೆ ಕೆಣಕಿ ಕೆಟ್ಟನು |
ಕರಿಗೆ ಕುರಿ ಸರಿಸಮವದಹುದಹುದೆಂದನಸುರೇಂದ್ರ ||೧೨||

ಅಂದು ದಾನವರಾಯನೀಪರಿ |
ಯಿಂದೆ ನಿಂದಿಸುತಾಡೆ ರಾಘವ |
ನೆಂದನೆಳನಗೆ ಮಿಸುಗೆ ಘನತರವುಧುರವಚನದೊಳು ||
ಹಿಂದೆ ನಿನ್ನ ವರಕಟಿದೇಪರಿ |
ಮುಂದು ಗಾಣದೆ ನುಡಿದು ತನ್ನಿಂ |
ಹೊಂದಿದರು ಯಮಮಂದಿರವಸಂಬಂದವನು ಮರೆದು ||೧೩||

ಅರಿದರಿದು ನಿನ್ನ ವರ ವಿಧಿಯನು |
ಬರಿದೆ ಗಳಹಲ್ಬಲವ ಕಾಣೆನು |
ಹರಣದಾಸೆಯದುಂಟೆ ಚರಣಕ್ಕೆರಗು ಕರುಣಿಪೆನು ||
ಅರಸನೆಂಬಭಿಮಾನತಲೆಗೇ |
ರ್ದೆರಗಲೆಂತಹುದೆಂದು ಬಗೆವೆಯ |
ಕರೆಯಿಸಾ ಜಾನಕಿಯನಿತ್ತಿಹೆನಭಯವನು ನಿನಗೆ ||೧೪||

ಹೇಳು ಹೇಳಿನ್ನೊಮ್ಮೆ ಕೇಳುವೆ |
ನಾಳುತನದಾಪರಿಯ ನಿನ್ನಯ |
ಕಾಲಿಗೆರಗಿದೊಡೆವ್ಮನುಳಿವೆಯ ಸತ್ಯವೇ ನುಡಿಯು ||
ಕೇಳಿರೈ ಪರಿಜನರೆ ದಿಟ ನಿ |
ಮ್ಮಾಳಿದನು ಪುಸಿದಪನೆ ನೋಡಿರಿ |
ಕಾಲಿಗೆರಗಿಹೆನೆನುತೆ ರಾವಣ ರಾಮನಡಿಗೆಚ್ಚ ||೧೫||

ನೊಂದುವೇನಂಘ್ರಿಗಳು ದೇಹದ |
ಸಂಧಿಬಂಧವೆ ಬೇರೆಯುಳಿದವ |
ರಂದವೇ ರಾಘವರು ಗರುಡಿಯ ಹೊಂತಕಾರಿಗಳು ||
ಬಂಧಿಸಿದನಡುಗಟ್ಟಿಗಿನಿಸುಂ |
ಕುಂದತಾರದ ಬೊಮ್ಮಚರಿಯವ |
ನಂದು ಬಳಸಿದ ಮೇಲಿನಾಳ್ಗಳು ನಾಡಿನಣ್ಣಗಳೆ ||೧೬||

ನಿಲ್ಲೆಲವೊ ಫಡ ಖೂಳ ಕುಟಿಲದ |
ಖುಲ್ಲವಿಜ್ಜೆಯಿದಾರ ಬಳಿಯೊಳು |
ಬಲ್ಲತನ ನಿನಗುಂಟು ಬಿಲ್ಲಿನೊಳೆಂಬುದನು ತೋರ್ದೆ ||
ಎಲ್ಲಿ ನಿನ್ನಯ ಬಾಹುವಿಕ್ರಮ |
ದುಲ್ಲಸವನಿನ್ನೊಮ್ಮೆ ತೋರಿಸೆ |
ಮಲ್ಲನೀನಹುದೆನ್ನುತೆಚ್ಚನು ರಾಮನಹಿತನನು ||೧೭||

ಬಿದ್ದನಿನ್ನೇನಸುರರೊಡೆಯನು |
ಗೆದ್ದನಲೆ ರಘುರಾಯನೆಂಬಾ |
ಸದ್ದು ಹಬ್ಬಿತು ಕೇಳ್ದುದಸುರನ ಮೂಲಬಲವದನು ||
ಹೊದ್ದಿತಪಜಯವೊಡೆಯಗೆಂದು |
ಬ್ಬೆದ್ದಸಾಗರದಂತೆ ವೊರೆಯು |
ಕ್ರುದ್ಧತವೆಸಲ್ ಬಂದು ಮುತ್ತಿತು ಬಳಸಿ ರಾಘವನ ||೧೮||

ಮೀರೆದಪ್ಪಿದಜಲಧಿ ಕೊಳ್ವದೆ |
ತೀರದೊಳಗಿಹಮಳಲುವಟ್ಟಲ |
ತೋರಕೆಂಡದ ಮಳೆಯು ಸುಡದೇನರಳೆಯಾ ಕೊಡೆಯ ||
ಧೀರರಾವಣಸೇನೆಯಿದಿರಿಸ |
ಲಾರಿಗಳವದು ನಿಲಲು ಕೊಳ್ಳಿಂ |
ದಾರುಭಟಿಸುತ್ತಾಯುಧಂಗಳಿನದ್ದಿದುದುನೃಪನ ||೧೯||

ದನುಜಪತಿಯನು ಹಿಂದಕುಳಿಯಿಸಿ |
ಕೆಣಕಿ ತನ್ನನು ಬಳಸಿಕೊಂಡಿಹ |
ಗಣನೆಗಸದಳವಾದ ರಾಕ್ಷಸಗಣವನೀಕ್ಷಿಸುತೆ ||
ಇನಿತುಸಂಖ್ಯಾತೀತಭಟತತಿ |
ಯೆನಗೆ ದೊರೆತುದುಪೂರ್ವಜನ್ಮದ |
ಘನತರಾರ್ಜಿತಸುಕೃತವೆಂದನು ರಾಮನಾಪಡೆಗೆ ||೨೦||

ಚುಕ್ಕಿಗಳಿನಡಸಿರ್ಪ ನಭವನು |
ಹೊಕ್ಕಮಾತ್ರದೊಳೊರ್ವ ರವಿಯೇ |
ನಕ್ಕಜವೆ ಮುಸುಳಿಸವೆ ಚುಕ್ಕಿಗಳವನ ಕಿರಣದೊಳು ||
ಎಕ್ಕತುಳನಾರಾಘವೇಶನು |
ದಕ್ಕಡಿಗನಲೆ ನಿಖಿಲಲೋಕವು |
ಬೆಕ್ಕಸಂಬಡೆ ತೆಗೆದನಾಗಾಂಧರ್ವವರಶರವ ||೨೧||

ತೆಗೆದಪರಿಯೊಳಗದನು ಮಂತ್ರಿಸಿ |
ವುಗಿಸಿ ಕಾರ್ಮುಕಕಾಗಳೆಸೆಯ |
ಲ್ಜಿಗಿಯುತಲ್ಲಿಂದಮಿತಕೋಟಿಯ ರಾಮರೂಪಿನೊಳು ||
ಬಗೆಯದರಿಗಳ ಸದೆಯತೊಡಗುತೆ |
ಹಗೆಯು ಹರಿಯಿತ್ತೆನಿಸಿ ರಾಕ್ಷಸ |
ವಿಗಡವೀರರನೆಲ್ಲ ಕೊಂದತ್ತೊಂದುನಿಮಿಷದೊಳು ||೨೨||

ಇತ್ತ ರಾಘವನಸುರಬಲದೊಡ |
ನೊತ್ತಿ ಕಾದುತ್ತಿರಲು ಲಕ್ಷ್ಮಣ |
ನತ್ತ ರಾವಣನನ್ನು ಕೆಣಕಿದನಿರದೆ ಕಾಳೆಗಕೆ ||
ಎತ್ತಲೈದುವೆ ನಿಲ್ಲು ಖುಲ್ಲನೆ |
ಮಿತ್ತುವದು ಸನ್ನಿಹಿತವಾದುದು |
ಚಿತ್ತದೊಳು ನಿನ್ನಿಷ್ಟದೈವವ ನೆನೆದು ಕೊಳ್ಳೆನುತೆ ||೨೩||

ಕೊಂಡು ಕೋದಂಡವನು ಶರಗಳ |
ತಂಡತಂಡವ ನೂಕಿ ರಿಪುವಿನ |
ಗುಂಡಿಗೆಯ ತೋಡಿದನು ಕಂಡುದು ಮೇಲೆ ಸುರಕಟಕ ||
ಖಂಡಿತವು ಸಾವಿಂದು ರಾಕ್ಷಸ |
ಮಂಡಲೇಶ್ವರಗವುಮ ರಘುಜೋ |
ದ್ದಂಡರಾಮನ ಚಲವು ದಕ್ಕಿತ್ತೆಂದುದತಿನುದದೆ ||೨೪||

ಪರರ ಶಸ್ತ್ರಾಸ್ತ್ರಂಗಳಿರಿತವ |
ನರರೆ ರಾವಣ ಲೆಕ್ಕಿಪನೆ ಶಿವ |
ಗಿರಿಯನೆತ್ತಿದಕಾಯಕುಂಟೇ ಗಾಯವಾಯುಧದ ||
ಕೆರಳಿದನು ಕೆಂಪೇರೆ ಕಣ್ಣುಗ |
ಳುರುಗನಂದದೆ ಬುಸ್ಸುಬುಸ್ಸೆನು |
ತುರುವ ಶಕ್ತ್ಯಾಯುಧಕೆ ಮೆಲ್ಲನೆ ನೀಡಿದನು ಕರವ ||೨೫||

ಫಡಫಡೆಲವೋ ಲಕ್ಷ್ಮಣನೆ ತ |
ನ್ನೊಡಲು ಬಂದಾಸುರಪಜಿತ್ತನು |
ಕಡಿದಪಾಪಿಯೆ ನಿನ್ನನುಳಿಯಿಪನೆಂತು ರಾವಣನು ||
ಕುಡುವನಿದಕಾಹುತಿಯನಣ್ಣನು |
ಬಿಡಿಸಿಕೊಳ್ವೊಡೆ ಕರೆಯ ಕರೆಯೆಂ |
ದೊಡನೆ ಕಡುಘೋರ್ಗರೆವ ಶೂಲವನಿಟ್ಟು ಬೊಬ್ಬಿರಿದ ||೨೬||

ಇಟ್ಟ ಶೂಲವನಸುರನನುಜನು |
ನಿಟ್ಟಿಸುತೆ ತನ್ನುರುವ ಗದೆಯಿಂ |
ತಟ್ಟನೆರಗಲ್ಕದನು ಕೊಳ್ಳದೆ ಭುಗಿಲು ಭುಗಿಲೆನುತೆ ||
ಅಟ್ಟುತೈತರಲಿದನು ಬೊಮ್ಮನು |
ಕೊಟ್ಟು ಕಿಡಿಸಿದನೆಂದು ಕಡು ಕಂ |
ಗೆಟ್ಟು ಬಾಯ್ಬಿಡೆ ಸುರರು ಲಕ್ಷ್ಮಣ ನೆಮ್ಮಿದನು ನೆಲನ ||೨೭||

ಸಂಗರದೆ ಲಕ್ಷ್ಮಣನಸಿಗೀಪರಿ |
ಭಂಗವೊದವಿದುದನ್ನು ರಘುಕುಲ |
ಪುಂಗವನು ಕೇಳುತ್ತೆ ರೋಷಂಗೊಂಡು ಕುದಿಕುದಿದು ||
ಅಂಗವಣೆಯಿದನಸುರನೆನ್ನೊಳು |
ಸಂಗಳಿಸಿದನೆ ದನುಜಜಲಧಿಯ |
ನಿಂಗಿಸುವೆನೀಗೆನುತೆ ತರುಬಿದನೊಡನೆ ರಾವಣನ ||೨೮||

ನಿಲ್ಲುನಿಲ್ಲೆಲೊ ಖಳನೆ ಬಿಲ್ಲಿನ |
ಬಲ್ಲತನವನು ತೋರು ಲಂಕಾ |
ವಲ್ಲಭನೆ ನೀನಹುದು ನಮ್ಮೊಡನಿಂದು ಕಾದಿದೊಡೆ ||
ಎಲ್ಲಿ ನಿನಗಿರ್ಪಖಿಳಶಕ್ತಿಯ |
ನುಲ್ಲಸದೆ ತೋರೆನುತೆ ಕಣೆಗಳ |
ಚೆಲ್ಲಿದನು ರಘುರಾಮನಾತನ ಮೇಲೆ ಸುರರುಲಿಯೆ ||೨೯||

ಅಂಗವಿಸಿ ಕರಿಕುಂಭಕೆರಗುವ |
ಸಿಂಗನಂದದೊಳಾರ್ಭಟಿಸಿ ನೇ |
ತ್ರಂಗಳೊಳ್ಕಿಡಿ ಸೂಸೆ ರಾವಣನಾಗ ರಾಘವನ ||
ಭಂಗಿಸುವೆನೆಂದೊಡನೆ ಕಣೆಯತ |
ರಂಗವನು ಪರ್ಬಿಸಲು ತನ್ನಯ |
ಹೊಂಗಣೆಯ ಬಿರುಗಾಳಿಯಿಂದದನರಸ ಚದರಿಸಿದ ||೩೦||

ಹತ್ತುಶರದಿಂದರಿಯ ಚಾಪವ |
ಕತ್ತರಿಸಿದನು ಬಳಿಕವೊಡನೈ |
ವತ್ತುಕಣೆಯಿಂದವನ ಸಾರಥಿಯನ್ನು ಕೆಡವಿದನು ||
ಮತ್ತೆ ವಿಶಿಖಗಳೇಳರಿಂ ಬಿಡ |
ದೊತ್ತಿ ರಥವನು ತರಿದು ಹೂಡಿ |
ರ್ದುತ್ತಮಾಶ್ವಂಗಳನು ಸೀಳಿದನಾಗ ರಾವಣನ ||೩೧||

ಚಿತ್ತಲಾದನು ರಾವಣನು ಕ |
ಣ್ಗತ್ತಲಾಂತನು ತನ್ನ ಸನಿಹದೊ |
ಳೆತ್ತಲುಂ ರಥಹಯಗಜಂಗಳ ಸುಳಿವ ಕಾಣದೆಯೆ ||
ಚಿತ್ತದೊಳು ಬೆದರಿದನು ತನಗೀ |
ಹೊತ್ತನಿತ್ತುದೆ ವಿಧಿಯೆನುತೆ ಮರು |
ಗುತ್ತೆ ಪುರದತ್ತಿರದೆ ಸರಿವುದ ಕಂಡನಾರಾಮ ||೩೨||

ಹೋಗುಹೋಗೆಲೊ ಹಂದೆ ಕೈಯೊಳು |
ಬಾಗಿಸಿದ ಬಿಲ್ಲಿಲ್ಲದವನನು |
ತಾಗರಾ ರಘುವಂಶಸಂಭವರಿಲ್ಲ ಮೃತಿನಿನಗೆ ||
ಬೇಗನೆಲ್ಲವ ಸಜ್ಜುಗೊಳಿಸಿಯೆ |
ಭೋಗಕೆರೆದು ತಿಲಾಂಜಲಿಯ ನೀಂ |
ಸಾಗುವುದು ಮತ್ತಿತ್ತಲೆಂದನು ರಾಘವೇಶ್ವರನು ||೩೩||

ಎಂಟನೆಯ ಸಂಧಿ ಸಂಪೂರ್ಣ

## ಒಂಬತ್ತನೆಯ ಸಂಧಿ.

ಸೂಚನೆ || ಘೋರಯುದ್ಧದೆಹೋರಿರಾವಣ |
ನಾರುಬಟೆಯನುನಿಲಿಸಿ ರಾಘವ |
ವೀರನಣೆ ಕಲ್ಲಾಡಿ ಶಿರಗಳನವನ ಕೆಡವಿದನು ||

ಬಸಿವ ನೆತ್ತರ ಗಾಯದೊಡಲಿನ |
ಕುಸಿದ ಮಂಡೆಯ ರಾಕ್ಷಸೇಶ್ವರ |
ನುಸಿಕನ್ಯೆತಂದೊಡನೆಯರಮನೆಯಂತವುರದೊಳಗೆ ||
ಎಸೆವ ಚಿಂತಾಗಾರದೊಳಗು |
ಬ್ಬಸವನಾಂತೊರಗಿರಲು ಕೇಳ್ದದ |
ನಸುರನಾ ಶಶಿವದನೆ ಬಂದಳು ಕಂಡಳವನಿರವ ||೧||

ಕಾಳಗದೊಳಂದಾ ಕುಬೇರನ |
ಸೋಲಿಸಿ ಮಹೇಶ್ವರನ ರಜತದ |
ಶೈಲವನು ಬಿಡದೆತ್ತಿ ಕೊಂದನರಣ್ಯಭೂಪತಿಯ ||
ಕಾಲನನು ಕಂಗೆಡಿಸಿ ಸಗ್ಗಕೆ |
ದಾಳಿಯಿಟ್ಟಿಂದ್ರನನು ಮುರಿದಾ |
ಶೂಲಿಗೆಣೆಯಹ ಪತಿಯೆ ನಿನಗೀಗತಿಯೆ ಸೋಜಿಗವು ||೨||

ಅಂದು ಬೇಡಕಟೆಂದ ಮಾವನ |
ಚಂದದುಕ್ತಿಗೆ ಮನವನೀಯದೆ |
ಹಂದೆವಾತೆಂದಾ ವಿಭೀಷಣನೀತಿಯನು ಪಳಿದು ||
ಸುಂದರಾಂಗಿಯ ಬಿಡೆನು ನಾನೆಂ |
ಬೊಂದುಹಟವನು ಹಿಡಿಯುತದರಿಂ |
ಬಂಧುಬಳಗವನೆಲ್ಲ ಸವರಿಸುತಿಂದು ನೀಂ ನೊಂದು ||೩||

ಸೇರಿ ಮಂಚವನಿರಲು ನಾಂಕ |
ಣ್ಣಾರೆ ನೋಡುತೆ ಸಹಿಪ ಬಗೆಯೆಂ |
ತಾರಿಗೊರಲುವೆನಾರು ರಕ್ಷಕರಾರಿಗಘಟಿಹುದು ||
ನೀರ ನಿನ್ನಯ ಚರಣಕೆರಗುತೆ |
ಚೀರಿ ಬಲುಬಾಯಾರಿಯರ್ಥಿಪ |
ನೀರೆಯಾದೆನ್ನಲ್ಲಿ ದಯೆಯನು ತೋರು ಮುದಬೀರು ||೪||

ಆದುದಾಯಿತು ರಮಣ ನಿನ್ನಯ |
ಯೋಧರೆಲ್ಲರು ಮಡಿದರಿನ್ನಿದ |
ನೋದಿ ಫಲವೇನಳಿದ ಸುತಸೋದರರು ಮರಳುವರೆ |
ಹಾದಿ ಬೇರೊಂದಿಲ್ಲವುಳಿವಿಂ |
ಗಾದಯಾನಿಧಿ ರಾಮಚಂದ್ರನು |
ಮೇದಿನಿಯೊಳುದಿಸಿರ್ಪ ಹರಿಯೆಂದೆಲ್ಲರಾಡುವರು ||೫||

ಅರಸ ನೀನವನಸರಸಿಯೊಳು ಮನ |
ವಿರಿಸಿ ಬಾಳುವೆನೆಂದು ಬಗೆದೆಯ |
ಸರಸಿಜಾಲಯೆ ಸಕಲಲೋಕದ ಮಾತೆಯುವಳರಿಯ ||
ಧರಿಸಿ ಸೀತಾಕೃತಿಯನಿಂದವ |
ತರಿಸಿಹಳು ನೀನಿನ್ನು ತಡೆಯದೆ |
ಕರೆಯಿಸವಳನು ರಘುಜಗೊಪ್ಪಿಪುದೆಂದಳಾ ಕಾಂತೆ ||೬||

ಕೇಳಿದನು ದಶಶಿರನು ಮಹಿಳಾ |
ಮೌಳಿಮಂಡೋದರಿಯ ವಚನವ |
ನಾಲಿಯೊಳು ನೀರ್ದುಂಬುತೆಂದನು ನುಡಿಯು ತಡಬಡಿಸೇ ||
ಶೀಲವತಿ ನಿನ್ನೀಹಿತೋಕ್ತಿಯ |
ನಾಲಿಸಿದೊಡೆನಗುಂಟು ಸೌಖ್ಯವು |
ಮೇಲು ತಾನಹುದಾದೊಡಂ ಕೇಳೆನ್ನ ಮನದನುವ ||೭||

ಹರಿಯು ರಾಘವನೆಂಬುದನು ದಿಟ |
ವರಿದಿಹೆನದಂತಿರಲಿ ಲೋಕದೆ |
ನರರೊಳುದಯಿಸಿ ತಾನುಮವರಂತಾಡಿದಾ ಬಳಿಕ ||
ಒರೆಯದೇ ಜನವಿವನಯೋಧ್ಯೆಯ |
ನರಪತಿಯಸುತನೆಂದು ದನುಜೇ |
ಶ್ವರನ ಸಹಜೆಯ ಮೂಗನರಿದಪ್ರತಿಮಭಟನೆಂದು ||೮||

ಜಸವೆ ಸದ್ಗತಿ ಜನುಮವೆತ್ತಿದ |
ಗುಸಿರಲಳಿಜಸವದುವೆ ದುರ್ಗತಿ |
ಯುಸಿರು ಮಸುಳುನವರೆಗೆ ಮಾನವೆ ಫಲವು ಬಾಳಿಕೆಗೆ ||
ದಶರಥೇಂದ್ರನ ಸುತನ ಸುದತಿಯ |
ನಸುರಚಕ್ರೇಶ್ವರನು ಶೌರ್ಯೋ |
ಲ್ಲಸಿತನಪಹರಿಸಿದನು ಕೊರೆದನು ಮೂಗನಿನಕುಲದ ||೯||

ದಿಟ್ಟನಿವನೆಂದೆನ್ನನುರೆ ಮನ |
ಮುಟ್ಟಿ ಪೊಗಳಲಿ ಲೋಕವೆಂದೀ |
ಕೆಟ್ಟಕಜ್ಜವ ಬಳಸಿದೆನು ಬೇರಿಲ್ಲ ಮತವೆನಗೆ ||
ನಿಟ್ಟಿಸಲ್ಕಾಂ ಕಾಮಿಯಾಗು |
ತ್ತಟ್ಟಹಾಸದೆ ರಾಮನರಸಿಯ |
ಕಟ್ಟಿ ತಂದೆನು ಸೆರೆಯೊಳಿಟ್ಟೆನು ನಿಟ್ಟುರವದೇನು ||೧೦||

ಅರಸಿ ನಿನಗೆನ್ನಂತರಂಗವ |
ನರಿಪಿದೆನು ನೀನಿದನು ಮಿಕ್ಕರಿ |
ಗೊರೆಯಲಾಗದು ತನ್ನ ಸದ್ಗತಿಗೊಂದೆ ದಾರಿಯಿದು ||
ಮರುಗದಿರು ಮನದಲ್ಲಿ ಲಕ್ಷ್ಮೀ |
ಧರನ ಕೈಯಿಂ ಸಾವು ಸಮನಿಸೆ |
ಕರಗತವು ತಾಂ ಮುಕ್ತಿಸಂಪದವೆಂದನಸುರೇಂದ್ರ ||೧೧||

ಎಂದು ಸುದತಿಯ ಮನದ ಕದಡನು |
ಸಂದುವಿಡದವೊಲೊರಸಿ ಮಿಹಿರ |
ಸ್ಯಂದನವು ಪೂರ್ವಾದ್ರಿಯೊಳ್ತಲೆದೋರುವನಿತರೊಳು ||
ಬಂದು ತನ್ನೋಲಗದ ಚಾವಡಿ |
ಗಂದು ನೆರವುತೆ ಸಕಲರನು ರಣ |
ವಂದಗೆಟ್ಟುದನರುಹಿ ಪೇಳ್ದನು ಮುಂದಣಾಹದನ ||೧೨||

ಅಂಕೆಯಿಲ್ಲದ ಕಪಿಗಳನು ನಿ |
ಶ್ಶಂಕೆಯಿಂ ರಾಘವರು ನೆರಹುತೆ |
ಲಂಕೆಯನು ಮುದ್ರಾಬ್ಧಿಯಾಗಿಯುನೊಗ್ಗಿಸಿಂ ಸುಗ್ಗಿ ||
ಅಂಕದೊಳು ನಮ್ಮಖಿಳಬಲವನು |
ಬಿಂಕದಿಂ ತರಿದೊಟ್ಟಿ ತನ್ನನೆ |
ಶಂಕೆಯುದುಳಿದಪಕ್ಕಿಯಂದದೊಳಕಟ ನಿಲಿಸಿದರು ||೧೩||

ಎಂದು ದೋರ್ಬಲದಿಂದೆ ಲಂಕೆಯ |
ನೊಂದಿದೆನೊ ನಾನಂದು ಮೊದಲಾ |
ಗಿಂದುಪರಿಯಂತೋವಿದೆನು ಬಿಡದಖಿಲರಾಕ್ಷಸರ ||
ಒಂದುಮಂತಿಳಿಯದಿಹ ಮೂಢರಿ |
ಗಂದವಹ ವಿದ್ಯೆಗಳನರುಹು |
ತ್ತೊಂದುಗೂಡಿಸಿ ಕಲಹವಿಲ್ಲದೆ ಬಾಳ್ವುದನು ಕಲಿಸಿ ||೧೪||

ಅಂದಿಗಂದಿಗೆ ಯುಕ್ತವೆನಿಪನಿ |
ಬಂಧನಂಗಳನೇರ್ಪಡಿಸಿ ನಾಂ |
ತಂದೆಯವೊಲೀರಾಜ್ಯದಾಡಳಿತನು ನಿರ್ವಹಿಸಿ ||
ದಂದುಗಂಗಳನೆಲ್ಲ ಬಾಹು |
ಸ್ಪಂದಮಾತ್ರದೊಳಡಗಿಸುತ್ತರಿ ||
ಗಂಧಗಜಕಂಠೀರವನು ತಾನೆನಿಸುತಾಳಿದೆನು ||೧೫||

ತಪ್ಪನೆಸಗಿದುದಿಲ್ಲ ತಾನೆಂ |
ದಪ್ಪುತನೃತವನಾಡೆ ನಾಂ ಮನ |
ವೊಪ್ಪದನ್ಯಾಯಗಳ ಗೈದೆನು ಬಿಡದೆ ಪಲಬಗೆಯ ||
ಕಪ್ಪು ಚಂದ್ರನೊಳಿಪ್ಪುದಾದೊಡ |
ಮೊಪ್ಪಿಕೊಂಡಾಜನವು ಮನಮೊಸೆ |
ದಿಪ್ಪತೆರದಿಂದವನು ನಿಮ್ಮಯ ಬೊಪ್ಪರೊಪ್ಪಿದರು ||೧೬||

ಪೊದ್ದಿಹುದು ರಣವಿಂದು ತನಗ |
ತ್ಯುದ್ಧತರ ರಾಘವರ ಜತೆಯಲಿ |
ಗೆದ್ದುಬಹೆನೆಂಬಾಸೆ ಬೀತುದದೇತಕೆಂದರಿಯೆ ||
ಬಿದ್ದೆನಾದೊಡೆ ತನ್ನ ವಂಶದ |
ಸದ್ದಡಗದಾತೆರದೆ ಕರೆಯಿಸಿ |
ಬುದ್ಧಿಶಾಲಿವಿಭೀಷಣನ ನೀಂ ಗದ್ದುಗೆಯೊಳಿರಿಸಿ ||೧೭||

ಕಟ್ಟಿಹನು ರಾಘವನು ಲಂಕೆಯ |
ಪಟ್ಟವನು ನಮ್ಮಯ ವಿಭೀಷಣ |
ಗಟ್ಟಹಾಸದೊಳೆರಗಿ ತನ್ನನು ಸೇರಿದಾದಿನವೆ ||
ಕೆಟ್ಟತನುಜನ ಬುದ್ಧಿಯೆನ್ನುತೆ |
ಬಿಟ್ಟುಕುಡದಿರಿ ಗುಟ್ಟನಿತರರಿ |
ಗೊಟ್ಟುಗೂಡುತೆ ಬಾಳ್ವುದೊಳ್ಳಿತ್ತೆಂದನಸುರಾರಿ ||೧೮||

ಹೇಳಿಯಿಂತು ವಿವೇಕವನು ಬಿ |
ಲ್ಲಾಳು ನಿಜರಥವೇರಿ ರಾಕ್ಷಸ |
ಮೌಳಿ ಹೊಕ್ಕನು ಕಣವ ಮೃತ್ಯುವಿನಣಲ ಹುಗುವಂತೆ ||
ಕಾಳಮೇಘಚ್ಛವಿಯ ಕಾಯದ |
ಕಾಲಭೈರವನುಗ್ರರೂಪದ |
ಶೂಲಕೋದಂಡಾಸಿಧರನನು ರಾಮನೀಕ್ಷಿಸಿದ ||೧೯||

ಹಿಂದೆ ಲಕ್ಷ್ಮಣನಿವನ ಶೂಲದೆ |
ಸಂದು ಮೂರ್ಛೆಗೆ ಸಂದುದನು ತಾ |
ನಂದು ಕಷ್ಟದಿನದನು ತೊಲಗಿಸಿದುದನು ನೆನೆನೆನೆದು ||
ತಂದು ಕೋಪವನೀಗಳಿವನನು |
ಕೊಂದು ತೀರ್ಚದೆ ಬಿಡೆನು ತಾನೆಂ |
ದೊಂದಿಸುತೆ ಧನುವಿಂಗೆ ಬಾಣವನಾರ್ದು ತೆಗದೆಚ್ಚ ||೨೦||

ಬರುವ ಸರಳನು ಬಿಡದೆ ದನುಜನು |
ಶರದೊಳೊಂದರೊಳರಿದು ಮತ್ತಂ |
ಕೆರಳಿ ರಾಘವನುರವನೆಂಟಂಬಿನೊಳು ಘಾತಿಸಲು ||
ಶರಗಳೆದೆಯಾರವನು ತಾಂಕುತೆ |
ಮುರಿದು ಬಿದ್ದವು ಭಾನುಕುಲಜನ |
ಕರಚಮತ್ಕೃತಿಯೆನಿತೊ ಕಡಿದನು ಖಳನ ಕಾರ್ಮುಕವ ||೨೧||

ಹೋಯಿತದು ಧನುವೆಂಬನಿತರೊಳ |
ಗಾಯತದ ಮತ್ತೊಂದನೊದವಿಸಿ |
ಸಾಯಕವ ಮಗುಳೆಚ್ಚೊಡಾರಾಘವನು ಖತಿಗೊಂಡು ||
ಗಾಯಗಾಣಿಸುತಾಗ ರಿಪುವಿನ |
ಕಾಯದೊಳು ಕಟುವೆನಿಪ ಬಾಣದ |
ಬಾಯ ಸವಿದೋರಿದನು ರಾಕ್ಷಸಸಾರ್ವಭೌಮಂಗೆ ||೨೨||

ಅಸುರನಿರದೊಡನಾಗ ಮಾಯದೆ |
ಮುಸುಕಿದನು ಮುಗಿಲಾಗಿ ಸಿಡಿಲಾ |
ಗೆಸಗಿದನು ದಳ್ಳುರಿಯ ರೂಪವ ತಾಳ್ದು ದಹಿಸಿದನು ||
ಬಿಸದಮಳೆಯನು ಸುರಿದನಿದ ಸುಮ |
ನಸರು ಕಂಡುರೆ ಬೆದರಿಯಿಂದ್ರಂ |
ಗುಸಿರಿದರು ಜೇಯಿಂದಿನಾಹವವರಿದು ರಘುಪತಿಗೆ ||೨೩||

ಅಸುರಪತಿ ಸಲವಿಂದೆ ರಥದೊಳ |
ಗೆಸದಿಹನು ನೆಲದಲ್ಲಿ ನಿಂದಿಹ |
ದಶರಥಾತ್ಮಭವಂಗೆ ರಾಕ್ಷಸಜಯವು ಸಮನಿಪುದೆ ||
ಒಸೆದು ಮಾತಲಿಮುಖದೆ ನಿನ್ನಯ |
ಪೊಸರಥವನಿರದಟ್ಟು ರಾಮನು |
ನಿಸದಮದನೊಲ್ದೇರಿ ಸೆಣಸಲು ಸಿದ್ಧಿಪುದು ಫಲವು ||೨೪||

ಎಂದು ಸುರರರ್ಥಿಸಲು ಸುರಪತಿ |
ಯಂದು ಸಹಜವಿದೆಂದು ತಾಂ ಮನ |
ದಂದು ರಥವನು ಕೊಂಡು ಪೋಗೆಂದಾಣತಿಯನೀಯೆ ||
ಬಂದುದದು ಭೂಲೋಕಕೊಡನೆಯೆ |
ನಿಂದುದಾಗಳೆ ಭೂಪನೆಡೆಯೊಳು |
ವಂದಿಸಿಯೆ ಮಾತಲಿಯು ಕೈಮುಗಿದೆಂದನಾ ನೃಪಗೆ ||೨೫||

ದೇವ ನೀವೀರಥವನೇರ್ದಾ |
ರಾವಣಾಸುರನೊಡನೆ ಸೆಣಸ |
ಲ್ಕಾವಿಯಚ್ಚರರಾಜನಟ್ಟಿದನೀಮಹಾರಥವ ||
ನೀವು ಕಾಲಾಳಾಗಿ ಕಾದುವು |
ದಾವಿಕಾರಿಯು ರಥದೆ ಮೆರೆವುದು |
ಭಾವಕೊಪ್ಪದು ತನಗಿದೆಂಬುದನರುಹಪೇಳಿದನು ||೨೬||

ಧಿಕ್ಕರಿಸದೀದಿವಿಜನಾಥನ |
ರಕ್ಕೆಗೂಡಿಪ ತೇರನಡರ |
ಲ್ಕಕ್ಕಜವೆ ಜಯವೀಗ ಬಿಜಯಂಗೈಯಬೇಕೆನಲು ||
ತಕ್ಕುದಿದು ಸುರಪಂಗೆ ನನಗಿಂ |
ದುಕ್ಕಿತಧಿಕೋತ್ಸವವು ರಿಪುವನು |
ತಿಕ್ಕಿಮುಕ್ಕುವೆನೆನುತೆ ರಥವೇರಿದನು ರಾಘವನು ||೨೭||

ಸುರರುಘೇಎಂದೆನಲು ಮನುಮುನಿ |
ವರರು ಪೊಗಳಲು ಕಪಿಕುಲೋತ್ತಮ |
ರೆರಡುಕೈಗಳನೆತ್ತಿ ಜಯಯೆನಲರಸನದನೇರಿ ||
ಸಿರಿಯ ಮದದಿಂದುಬ್ಬಿ ಸತ್ಕುಲ |
ಜರನು ಬಾಧಿಪ ಪಾಪಬುದ್ಧಿಯ |
ನಿಕದೆತೊಲಗಿಪ ಶರವ ಕೊಳ್ಳೆಂದೆಚ್ಚನಹಿತನನು ||೨೮||

ಸಿರಿಯ ಮದದಿಂದುಬ್ಬಿರುವ ಹರಿ |
ದುರಿತದೊಳು ಸಂಚರಿಸಬಗೆವನೆ |
ಸಿರಿಯನುಳಿದಿಹ ನಿನ್ನ ವಂಶಿಗರಲ್ತೆ ಪಾಪಿಗಳು ||
ಸುರಪನಟ್ಟಿದನೆಂದು ರಥವನು |
ಬರಿದೆ ಜರೆತಿಹೆ ಪಿಂತೆ ಯುದ್ಧದೆ |
ಸುರಪನಿದರೊಳ್ಕಾದುತೆನ್ನೊಡನೋಡಿದನು ಕಡೆಗೆ ||೨೯||

ತೇರಸಾರಥಿಯನ್ನು ನಂಬುತೆ |
ವೀರರಾವಣನೊಡನೆ ರಣದೊಳು |
ಹೋರಿ ಜಯಿಸುವೆನೆಂಬ ಬಗೆಯಿರೆ ಸಾರು ಪಿಂದೆಸೆಗೆ ||
ತೋರತೋಳ್ಬಲವುಂಟ ತನಗಿ |
ನ್ನಾರಬಲದಿಂದೇನೊ ಎಂಬತಿ |
ಧೀರನಾದೊಡೆ ಮುಂದೆ ಬಾರೆಂದೆಚ್ಚನಸುರೇಂದ್ರ ||೩೦||

ಎಚ್ಚ ದಾನವರರಸನಂಬುಗ |
ಳಚ್ಯುತನ ದೇಹವನು ಜರಿಸಿಂ |
ಚುಚ್ಚೆ ಕಂಗಳು ಕಿಚ್ಚುಸುಚ್ಚಿದುವಚ್ಚರಿಯನರನ ||
ಪೊಚ್ಚಮುಸೆವೆತ್ತಲಗುಗಳನೊಡ |
ನುಚ್ಚಳಿಸಿ ಕಾರ್ಮುಕದೆ ಮಗುಳಿರ |
ದಚ್ಚಮಂತ್ರಾಸ್ತ್ರಗಳನೆಚ್ಚನು ದೇವರಿಪುದಾವ ||೩೧||

ಮುರಿದುದಸುರನ ತೇರ ಟೆಕ್ಕೆಯ |
ಬಿರಗುಗೊಂಡನು ರಾವಣನು ರಥ |
ತುರಗದೊಡಲೊಳು ಶರಗಳುಗಿಯಲು ಮುರಿದುವವು ಮುಖವ ||
ಅರಿದು ಸಾರಥಿಯಣಸು ಪಿಂದೆಸೆ |
ಗಿರದೆ ತಿರುಗಿಸೆ ರಥವನಸುರೇ |
ಶ್ವರನು ಕಂಡುರೆ ಕನಲಿ ಮೂದಲಿಸಿದನು ಸಾರಥಿಯ ||೩೨||

ಖೂಳಸಾರಥಿ ರಥವ ತಿರುಗಿಸಿ |
ಪಾಳುಗೈದೆಯ ಪೆಸರನಿಂದವ |
ಹೇಳನವ ಗೈದೆನ್ನ ಜಗವೇಂ ನಗದೆ ನಾಚಿಸದೆ ||
ಕೋಳುಹೋದುದು ತನ್ನ ಬಾಳಿದಿ |
ರಾಳಿಗಂಜುತೆ ಸರಿದೆನೆಂದದ |
ಹೇಳಿ ಫಲವೇನರಿಯ ಸಮ್ಮುಖಕೊಡನೆ ತಿರುಗಿಸೆನೆ ||೩೩||

ಇಂದು ಸಮ್ಮೊಡೆಯಂಗೆ ಕೊನೆಯಹು |
ದೆಂದು ಸಾರಥಿ ನೊಂದು ಮರುಗುತೆ |
ತಂದು ನಿಲಿಸಿದನಾಜ್ಞೆ ಜೀಯೆಂದೆನುತೆ ಮಾರಥವ ||
ಬಂದ ಬಿರಿಸಿನೊಳಿರದೆ ರಾವಣ |
ನೊಂದು ಶೂಲವ ಮಂತ್ರಿಸುತ್ತಿಡೆ |
ಬೆಂದುದಿನ್ನೇಂ ಲೋಕವೆಂಬವೊಲೈದಿತದು ಭರದೆ ||೩೪||

ಸಾಕುಸಾಕಿನ್ನೆದೆಯೊಳಿದನೆಂ |
ದಾಖಳಾಗ್ರಣಿ ಗರ್ಜಿಸುತ್ತಿರ |
ಲಾಕಕುತ್ಸ್ಥಾನ್ವಯನು ಕೋಪಂಗೊಂಡು ಕುದಿಕುದಿದು ||
ನೂಕಿದೊಡೆ ದಿವ್ಯಾಸ್ತ್ರಚಯವನ |
ನೇಕವನು ತಾನದನು ನುಂಗುತೆ |
ಭೀಕರದ ರಿಪುಶೂಲವೈದಿತು ನಾಕಿಗಳು ಬೆದರೆ ||೩೫||

ಭೀತಿಯಾಂತಿರಲಿಂತು ಸಕಲರು |
ಮಾತಲಿಯು ಕಂಡಾಗ ಸೀತಾ |
ನಾಥಗೆಂದನು ಸುರಪನಿತ್ತಿಹನೊಂದುಶಕ್ತಿಯನು ||
ಓತು ತತ್ಕ್ಷಣಮೆಸೆಯೆ ನೀನದ |
ನೇತರತಿಶಯಶೂಲಮೆಂದೆನೆ |
ಲಾತು ಕರದೊಳಗದನು ರಘುಪತಿಯೆಸೆದು ಬೊಬ್ಬಿರಿದ ||೩೬||

ಶೂಲವೆತ್ತೈದಿತ್ತೊ ಕಾಣೆನ |
ದಾಲುತಿರ್ದುದು ಕಪಿವಹಿಯುಮೇ |
ಲಾಲಿಮೆಯ್ಯವನಮರರೊಡನಂದುಬ್ಬಿದನು ನಲಿದು ||
ಕಾಲವಿದು ಸರಿಯೆಂದಗಸ್ತ್ಯನು |
ಭೂಲಲಾಮನ ಬಳಿಗೆ ಬಂದನು |
ಮೇಲೆನಿಸುವಾದಿತ್ಯಹೃದಯವ ನರುಹಿದನು ನೃಪಗೆ ||೩೭||

ಮುಂದೆ ನಿನಗಹುದಖಿಳಶುಭವಿ |
ನ್ನೆಂದು ಪರಸುತೆ ಸಾರ್ದನಾಗಸ |
ಕೆಂದಿನಂದದೆ ರಾಮರಾವಣರೆರಗಿದರು ಬಳಿಕ ||
ಇಂದು ರಾಮನು ಗೆಲುವನೆನೆ ಕಪಿ |
ವೃಂದಮುಕಟಂತೆಂದುಮಾಗದು |
ಸಂದೆಗವೆ ಜಯುವೆಮ್ಮರಾಯಂಗೆಂದುದಸುರಬಲ ||೩೮||

ಮೀರಿ ಬೀಗದಿರೆಲವೊ ಶೂಲವು |
ಜಾರಿಪೋದುದೆನುತ್ತು ಮಿಂದ್ರನ |
ಸಾರಥಿಯದೆಸೆಯಿಂದೆ ಬದುಕಿದ ಬಾಳದೇತರದು ||
ಹಾರಿಸುತೆ ನಿನ್ನ ಸುವನೀಗಳೆ |
ತೋರಿಸುವೆನದನಭ್ರದೊಳು ಕೈ |
ಮೀರಿತೆನ್ನೀಶರವು ಕೊಳ್ಳೆಸುತೆಚ್ಚನಮರಾರಿ ||೩೯||

ನೋಡಿ ರಾಮನು ನಗುತೆ ಮಿಗೆ ಮಾ |
ತಾಡಿದನು ಕೇಳೆಲವೊ ರಕ್ಕಸ |
ಹೇಡಿ ನಿನ್ನಯ ಸರಳು ತನ್ನಯ ಸೆಳಲ ಸೋಂಕುವುದೆ ||
ಪಾಡುಪಟ್ಟೈ ಬರಿದೆ ನಿನ್ನಾ |
ಜೋಡಣೆಯ ತಲೆಗಳನು ತರಿದೀ |
ಡಾಡುವೀಶರಗಳನು ಕೊಳ್ಳೆಂದಾರ್ದು ತೆಗೆದೆಚ್ಚ ||೪೦||

ಕತ್ತರಿಸಿದೊಡೆ ತಲೆಗಳೊಡನೆಯೆ |
ಹತ್ತಿಕೊಂಡುವು ಮೊದಲಿನಂದದೆ |
ಮತ್ತೆ ರಘುಪತಿಯುರುಳಿಸಿದನವನೊತ್ತಿ ಬಳಿಸರಳ ||
ಸತ್ತುವವದೆನಿತುಂಟೊ ದನುಜನ |
ಕತ್ತಿನೊಳು ತಲೆಮರಳಿ ತೋರ್ದುವು |
ಹತ್ತುಸೂಳಿಂತಾಯ್ತು ಸೋತನು ನೃಪನು ಮನದೊಳಗೆ ||೪೧||

ಸರಿದುದರಸನ ಚಿತ್ತಧೃತಿ ತಾಂ |
ಸಿರಿಯಸುಳಿದುದು ಪೌರುಷವು ಚಲ |
ದುರುಮಹಾತರು ಮುರಿದು ಬಿದ್ದುದು ನಂದಿದುದು ಮುಳಿಸು ||
ತರಿದತಲೆಗಳು ಮರಳಿ ಪುಟ್ಟುವ |
ಪರಿಯು ಪೊಸತಿದು ಜಗದೊಳೀತಂ |
ಗರರೆ ಸಾವಿಲ್ಲೆನುತೆ ರಾಘವನಿಳುಹಿದನು ಧನುವ ||೪೨||

ಪಿಡಿದಚಾಪವನಿಡುವುದಂದವೆ |
ಬಡವನೇ ಬಾಣದೊಳು ನೃಪ ನೀಂ |
ತುಡು ಮಹಾಬ್ರಹ್ಮಾಸ್ತ್ರವಿದೆ ರಥದೊಳಗೆ ಕೊಂಡದನು ||
ತಡೆಯದೀಬಾಹಿರನನಿದರಿಂ |
ತೊಡಚಿ ಹೃದಯವನಿಸುವುದೆನುತವೆ |
ನುಡಿದ ಮಾತಲಿಗೊಪ್ಪಿಯರಸನು ಮರಳಿ ಬಿಲುಗೊಂಡ ||೪೩||

ಎಲವೊ ರಕ್ಕಸ ನಿಮ್ಮ ಗುರು ಸಲೆ |
ಕಲಿಸಿದಾ ಕಪಟಾಸ್ತ್ರವಿದ್ಯೆಯಿ |
ನುಳಿಸಿಕೊಳ್ವುದು ನಿನ್ನ ಹರಣವನೆಂದು ಘುಡುಘುಡಿಸಿ ||
ಹಲವು ಬಾರಿಯೊಳದನೆ ನುಡಿನುಡಿ |
ದಲಘುವೆನಿಪಜಶರವ ಚಾಪದೊ |
ಳಳವಡಿಸುತಾ ಗಕುಟಿಲಾತ್ಮಕನೆಂದನೀಹದನ ||೪೪||

ಮೂರುಲೋಕದ ಗಂಡನೆಂಬೀ |
ಭಾರಿನಾಮದ ಬಿರುದನೊಂದಿಯೆ |
ವಾರಿಜೋದ್ಭವವಿಷ್ಣುಮೃತ್ಯುಂಜಯರನಳುಕಿಸಿಯೆ ||
ಆರಿಗಂ ಗೆಲಲಾಗದಮರರ |
ತಾರುತಟ್ಟನೆ ಬಡಿದು ನಾಂ ಮಿತಿ |
ಮೀರಿದೊಡೆ ಸೋದರಿಯ ಮೂಗಂದುದಕೆ ಕುದಿಕುದಿದು ||೪೫||

ನೀರೆಯನ್ನವಳನ್ನು ಕೊಂಡೊ |
ಯ್ದಾರುಭಟಿಸುತೆ ರಣದೆ ನಿಂದೀ |
ಧೀರಭೂಪರ ಚಾರುಧರ್ಮವಿಚಾರಕೊಪ್ಪಿದೆನು ||
ನೂರುಚಿತ್ತಾರವನದೊಂದೇ |
ಬಾರಿ ನುಂಗುವುದೊಂದು ಮುಸಿಯೆಂ |
ಬೂರಗಾದೆಯ ಸಫಲಮೆನಿಸಿದೆ ಮಿಕ್ಕ ನಡೆಗಳಲಿ ||೪೬||

ಹುಟ್ಟಿನಲಿ ಪೌಲಸ್ತ್ಯನಿಂದೊಡ |
ಹುಟ್ಟಿದಾತ ಕುಬೇರನಲ್ಲದೆ |
ಶಿಷ್ಟಜನಹಿತ ವೇದಮಾರ್ಗಾಚಾರಕೋವಿದನು ||
ನಿಷ್ಠೆಯಲಿ ನೀನಗ್ನಿಹೋತ್ರವಿ |
ಶಿಷ್ಟನೆನಿಸುತಕೀರ್ತಿಯಾಂತತಿ |
ಕಷ್ಟವೃತ್ತಿಯ ಬಳಸಿ ಕಟ್ಟೈ ದುಷ್ಟನೆಂದೆನಿಸಿ ||೪೭||

ಬಲುಹಿನಿಂದಣ್ಣನ ಕುಬೇರನ |
ಲಲಿತವಹ ಸಂಪದವನೆಲ್ಲವ |
ಸೆಳೆದೆ ಕೆಣಕಿದೆ ವೇದವತಿಯನು ದುಷ್ಟಭಾವದಲಿ ||
ಚಲದೆ ರಂಭೆಯನಟ್ಟಿ ಕೂಡಿದೆ |
ಪಲರ ಸುರಯುವತಿಯರ ಕಿಡಿಸಿದೆ |
ಲಲಿತೆಸೀತೆಯನಲ್ಪನುಡಿಗಳಿಸಿರದೆ ನೋಯಿಸಿದೆ ||೪೮||

ತಿಳಿಯೆ ನೀನತಿಪಾಪಿ ಋಷಿಗಳ |
ಕೊಲೆಗನತಿದೂಷಕನು ದುರ್ಗುಣ |
ನಿಲಯ ನಿನ್ನನು ವಧಿಸಲಪ್ಪುದು ಮುದವು ಮೂಜಗಕೆ ||
ಕೊಲುವೆನದರಿಂದಳುಕದಿರು ನೀಂ |
ಗಳಿಸಿದನ್ಯಾಯಗಳ ಫಲವಿ |
ನ್ನಳಿದು ಪೋಪುದು ಚಣದೊಳೆಂದಾರ್ದೆಚ್ಚನುರುಶರವ ||೪೯||

ಬರುತಮಿಪಾರ್ಶರದೊಳಜಹರಿ |
ಹರರು ಸೇರ್ದರು ರಾವಣನ ಪರಿ |
ಹರಿಸಲಿಂದೇ ಸಮಯವೆಂದದನಸುರಪತಿಯರಿದು ||
ಪರಿಸಮಾಪ್ತಿಯಕಾಲಮೊದನಿ |
ತ್ತರರೆ ತನಗಿಂದಾ ತ್ರಿಮೂರ್ತಿಗ |
ಳಿರಕಗೊಂಡೈತರ್ಪರಂಬಿನೊಳೆನ್ನ ಕೊಲೆಗೆನುತೆ ||೫೦||

ಧರೆಯೊಳಿಂದೆನಗಲ್ಲದಾರಿಗೆ |
ದೊರೆದುದೀಶುಭಮರಣವಾನರ |
ಹರಿಯವೈರಕ್ಕಿನಿತುಫಲಮೆನೆಭಕ್ತಿಗಿನ್ನೆನಿತೊ ||
ಅರಿಯಲದರಿಂದೆನ್ನ ಮೊದಲಿನ |
ಪರಿಯನೊಂದುವೆನೆಂದು ಬಪಾರ್ |
ಶರವನೆಚ್ಚನು ದಿವ್ಯಮಾರ್ಗಣದಿಂದೆಬೊಬ್ಬಿಡುತೆ ||೫೧||

ಮತ್ತೆ ಪೊಸಪೊಸಸರಳನೆಸೆದದ |
ನೊತ್ತಿಮುರಿವೆನೆನುತ್ತೆ ಸಾಗದೆ |
ಹತ್ತಿರೈತರಲದನು ಕತ್ತಿಯೊಳಿರದೆಕುತ್ತಿದನು ||
ಮಿತ್ತುವಡಸಿದ ಜೀವತತಿಗಿ |
ನ್ನೆತ್ತಣೌಷಧಮಿಹುದು ಬಗೆಯ |
ಲ್ಕೊತ್ತಮುಟ್ಟಿತು ಬಾಣವೆದೆಯನು ಬಗಿದು ರಾವಣನ ||೫೨||

ರಾಮಬಾಣದಮಹಿಮೆಯಸದಳ |
ವಾಮಹೋಗ್ರನ ಹರಣವೆಳೆದಾ |
ನೇಮವನು ಪೂರೈಸಿಮರಳಿತು ಮೂಡಿಗೆಗೆ ನೃಪನ ||
ವ್ಯೋಮದಿಂದಿರದಾಗ ಕರೆದರು |
ಪೂಮಳೆಯನಮರರ್ಕಳಸುರರ |
ಧೂಮಕೇತುವೆ ರಾಮ ಜಗದಭಿರಾಮ ಜಯವೆನುತೆ ||೫೩||

ಒಂಬತ್ತನೆಯ ಸಂಧಿ ಸಂಪೂರ್ಣಂ

## ಪಟ್ಟಣೆಯ ಸಂಧಿ.

ಸೂಚನೆ || ಪಟ್ಟಗಟ್ಟಿ ವಿಭೀಷಣಗೆನಿಜ |
ಪಟ್ಟದರಸಿಯ ಪುಗಿಸಿ ಶಿಬಿಯೊಳ |
ಗಟ್ಟಿ ಹಳಿವನು ಸುರರ ಮೆಚ್ಚಿಸಿ ರಾಮ ಕೈವಿಡಿದ ||

ಧೀರರಾಘವನೊಲ್ದು ತನ್ನಯ |
ವೀರಲಕ್ಷ್ಮಿಗೆ ಪಟ್ಟಗಟ್ಟಲು |
ಸೂರಿಯನು ನೈರ್ಮಲ್ಯದಿಂದಾಗಸದೆ ಬೆಳಗಿದನು ||
ಭೋರೆನುತೆ ಮೊಳಗಿದುವು ದುಂದುಭಿ |
ತೋರಿದುದು ಶಂಗಾಳಿ ಹಿತವೆನೆ |
ಭೂರಿತೋಷವು ತುಂಬಿತುಳುಕಿತು ಮೂರುಲೋಕದೊಳು ||೧||

ಉಕ್ಕಿತುರೆ ಸಂತಸವು ಮೊದಲಲಿ |
ಸೊಕ್ಕಡಗಿ ಮಲಗಿರಲು ಸಹಜನು |
ದುಕ್ಕವೊಡನೆಯೆ ಮನದೊಳೊದವಿತಾತ್ರವಿಭೀಷಣಗೆ ||
ಎಕ್ಕತುಳಬಲ ನಿನಗೆಸಾವೆನ |
ಲಕ್ಕಜದ ನುಡಿಯಲ್ತೆ ಕಾಲನ |
ನೊಕ್ಕಲಿಕ್ಕಿದ ದಕ್ಕಡಿಗಗೆಂತಹುದು ಮೃತಿಯೆಂದ ||೨||

ಅಣ್ಣನಾಪೆಣದಿದಿರೊಳೀಪರಿ |
ಬಣ್ಣಿಸುತೆ ಮರುಗುವ ವಿಭೀಷಣ |
ನನ್ನು ರಘುಪತಿ ಸಂತವಿಟ್ಟನು ಮಧುರವಚನದಲಿ ||
ಇನ್ನುನೀನಿರದೆಳ್ದು ಛಲಸಂ |
ಪನ್ನಗೀತಂಗಗ್ನಿಕಾರ್ಯವ |
ನುನ್ನತಿಯ ವಿಧಿಯಿಂದ ಮೆಸಗೆಂದಿತ್ತನಾಣತಿಯ ||೩||

ಬರಿಸಿ ಮಂಡೋದರಿಯೆ ಮೊದಲಾ |
ದರಸಿಯರನರುಹಿದನು ಘನಸಂ |
ಗರದ ಪರಿಯನು ಬಳಿಕಮೊರಸಿದನವರ ಮನದಳಲ ||
ಇರಿಸಿ ಪೆಣವನು ಚಿತಿಯೊಳುರೆ ಸಂ |
ಸ್ಕರಿಸಿ ವಿಧ್ಯುಕ್ತದಲಿ ರಾಘವ |
ರರಸನೆಡೆಗೈದಾವಿಭೀಷಣನೆರಗಿದನು ಪದಕೆ ||೪||

ಅರಸನಿಂದ್ರನ ಸಾರಥಿಯನುಪ |
ಚರಿಸಿ ಮನ್ನಣೆಯಿತ್ತು ಕಳುಹಿಸಿ |
ಕರೆದು ಸೌಮಿತ್ರಿಯನು ಗುಣಸಿಧಿಯಿಾವಿಭೀಷಣನು ||
ಪರಮಮಿತ್ರನು ನಮಗೆ ನಾವಿವ |
ಗೊರೆದಪರಿಯಿಂದೀಕ್ಷಣದೆ ನೀಂ |
ತೆರಳಿ ಲಂಕೆಯ ಸಿಂಹಪೀಠದೊಳಿವನ ನಿರಿಸೆನಲು ||೫||

ಜೀಯ ಬೆಸನೆಂದೊಡನೆ ತರಿಸಿಸು |
ತೋಯವನು ನಾಲ್ಗಡಲದೆಸೆಯಿಂ |
ದಾಯತದೆ ವಿಧ್ಯುಕ್ತರೀತಿಯ ಪಟ್ಟವನು ಕಟ್ಟಿ ||
ರಾಯನಿಮಗಿವನಿನ್ನು ರಾಘವ |
ರಾಯನಾಜ್ಞೆಯಿದೆಂದುಸಾರುತ |
ಜೀಯಲಕ್ಷ್ಮಣನಾಗ ಬಂದನು ರಾಮನಿದ್ದೆಡೆಗೆ ||೬||

ದನುಜಪತಿಯೈ ತಂದವೋಘದ |
ಕನಕಮಯ ವಸ್ತುಗಳನೊಪ್ಪಿಸಿ |
ಯಿನಕುಲೇಂದ್ರನ ಚರಣಕಮಲಕ್ಕೆರಗಿ ನುತಿಸುತಿರೆ ||
ತನುವ ಬೋಳೈಸುತ್ತುಮೆತ್ತು |
ತ್ತನುವಿನಿಂ ನೃಪನೆಂದನೆನ್ನಯ |
ಘನಶಪಥವದು ಪೂರ್ಣಮಾಯಿತು ನಿನ್ನದೆಸೆಯಿಂದೆ ||೭||

ಕೂಡಿ ನಾನೀಕಪಿಕುಲೇಶನ |
ನಾಡುಪಡಿಸಿದೆ ನರಿಕುಲಾರ್ಣವ |
ಬಾಡಬಾನಲ ಹನುಮನೆನಗಾಗಬುದಿಯನು ದಾಂಟಿ ||
ಆಡಲಸದಳಮೆನಿಪ ಕಷ್ಟ |
ಕ್ಕೀಡೆನಿಸಿದನು ಸಹಜನೆಂದೊಡ |
ಗೂಡಿ ಸುಖಿಸದೆ ನನಗೆ ಹಿತನಸು ಬಗೆದು ನೀಂ ದಣಿದೆ ||೮||

ನಿಮ್ಮದೆಸೆಯಿಂದೆನ್ನ ಜಸವಿರೆ |
ಹೊಮ್ಮಿ ತಿಳೆಯೊಳಗಾಂ ಕೃತಜ್ಞನು |
ನೆಮ್ಮಲೈಸಿರಿ ನಿಮ್ಮನಿರ್ಪುದು ಸುದಿನೆಂದೊರೆದು ||
ದುಮ್ಮಸವನೊಡನಾಂತು ಸೀತೆಯ |
ನೆಮ್ಮದಿಯ ನೀನರಿದು ಬಾರೆಂ |
ದೊಮ್ಮೆ ಸೂಚಿಸಿ ಹನುಮ ಹಾಯ್ದನು ಕಂಡನವನಿಜೆಯ ||೯||

ಚಿಂತೆಯಿಂ ಕಡುನೊಂದು ದುಃಖಾ |
ಕ್ರಾಂತೆಯಾಗಿಹ ರಾಘವನ ಸೀ |
ಮಂತಿನಿಯ ಪದಯುಗಳಕಂಡೆರಗೆಲ್ದು ನಿಂದಿರಲು ||
ಅಂತರಂಗದೆ ತುಳುಕುತಿರ್ಪ |
ತ್ಯಂತಹರ್ಷವಸೂಚಿಪಾ ಹನು |
ಮಂತನಾಸ್ಯದಿನರಿದಳಂಗನೆ ಪತಿಯಜಯಸಿರಿಯು ||೧೦||

ಬಂದೆಯೇನೈ ಹನುಮರಘುವರ |
ನಿಂದೆ ತಂದೈ ವಿಜಯವಾರ್ತೆಯ |
ನಂದಗೆಟ್ಟುದೆ ರಾವಣನ ತನುವೆಂದು ಸತಿ ನುಡಿಯೆ ||
ಸಂದೆಗವೆ ಜಗದಂಬೆ ನೀವು |
ಸ್ಸಂದಬಳಿಕೇನಸುರನುಳಿವನೆ ||
ಕೊಂದನೌ ದಿಟವರಸನೀದಿನವಾ ದಶಾನನನ ||೧೧||

ಅವನ ತನುಜಾನುಜರನಾಹವ |
ದವನಿಯಲಿ ಬಲಿಗೊಟ್ಟು ರಾಕ್ಷಸ |
ನಿವಹವನು ನಿರ್ನಾಮವೆನಿಸುತೆ ರಾವಣನ ಕೊಂದು ||
ತವಕದಿಂ ಲಂಕೆಯನು ತತ್ಸಹ |
ಭವವಿಭೀಷಣಗಿತ್ತು ನಿಮ್ಮಯ |
ಹವಣನರಿಯೆಂದೆನ್ನ ಸಟ್ಟಿದನೆಂದನಾ ಹನುಮ ||೧೨||

ಸಂದನೇ ರಾವಣನು ರಘುಪತಿ |
ಕೊಂದನೇ ನೀನೀಸುವಾರ್ತೆಯ |
ನೆಂದುದಕ್ಕಡುಗೊರೆಯ ನಿನಗಿಂದೇನನಿತ್ತಪೆನು ||
ಕಂದನೇಸ್ಥಿರಜೀವಿಪಟ್ಟವ |
ನೊಂದಿ ರಾಮನ ಚರಣಭಜನಾ |
ನಂದರಸದೊಳಗಾಳು ನೀನೆಂದರಸಿ ಹರಸಿದಳು ||೧೩||

ಇಂತು ಪವನಾತ್ಮಜನ ಪರಸಿ ಹೃ |
ದಂತರದೊಳಾನಂದಿಸುತೆ ನಿಜ |
ಕಾಂತಸಂದರ್ಶನವು ಲಭಿಸುವುದೆಂಬ ಸಂಭ್ರಮದೆ ||
ಪಿಂತಣಗಣಿತ ಕಷ್ಟಕಿನಿಸುಂ |
ಚಿಂತೆಗೊಳ್ಳದೆಯದನು ಮರೆತಖಿ |
ಳಾಂತರಾತ್ಮಕನರಸಿಯೊಪ್ಪಿದಳಧಿಕತೇಜದಲಿ ||೧೪||

ತಾಯೆ ನಿಮ್ಮಯ ಕರುಣದಿಂ ನಿರ |
ಪಾಯನಾಂ ಕೃತಕೃತ್ಯನಾದೆನು |
ರಾಯರಾಘವಗೇನನೆಂಬೆನು ಬೆಸಸವೇಳ್ಕುಮೆನೆ ||
ಕಾಯಜೋಪಮಪತಿಯ ಮೂರ್ತಿ |
ಶ್ರೀಯದರ್ಶನಕಾಂಕ್ಷೆಯಿಂದಿ |
ರ್ಪೀಯಭಾಗ್ಯೆಯು ಬೆಸಸು ಪೆರತೇನೆಂದಳಿಂದುಮುಖಿ ||೧೫||

ತಪ್ಪದೌ ಶ್ರೀರಾಮದರ್ಶನ |
ಮಪ್ಪುದೌ ನಿಮಗಿಂದು ತನಗಿ |
ನ್ನಪ್ಪಣೆಯ ಕರುಣಿಪುದು ನೀವೆಂದವನಿಸುತೆಗೆರಗಿ ||
ಕುಪ್ಪಳಿಸುತಲ್ಲಿಂದೆ ರಾಘವ |
ನಿಪ್ಪತಾಣವ ಸೇರ್ದು ದೇವಿಯ |
ರೊಪ್ಪುತಿರ್ಪರು ದೇವಬಸದೊಳಗೆಂದನಾಹನುಮ ||೧೬||

ಹಿಂದೆ ನಾನೈದವರನೀಕ್ಷಿಸಿ |
ದಂದು ತಾನಿರ್ದಂಗಲತೆಯುಂ |
ಕಂದು ಪೋಗಿಹುದಿಂದು ನೋಡಲ್ಕಿನಕುಲೇಶ್ವರಿಯ ||
ಇಂದು ನಿಮ್ಮಯ ವಿಜಯವಾರ್ತೆಯ |
ನಂದ ತನ್ನನು ಪೊಗಳಿ ದೇವರ |
ನೆಂದು ಕಂಡಪೆನೆಂಬ ಬಯಕೆಯನರುಪಹೇಳಿದರು ||೧೭||

ಚಿತ್ತವಿಪುದಿದನೆಂದ ಹನುಮರಿ |
ಗುತ್ತರಪನೀಯದೆಯೆ ಕಣ್ಗಳೊ |
ಳೊತ್ತುತೈತಹಜಲವನಡಿಗಡಿಗೊರಸಿ ಸೆರಗಿನಲಿ ||
ಚಿತ್ತದಲಿ ಕಡುನೊಂದು ಚಿಂತಿಸಿ |
ಹತ್ತಿರಿರ್ದ ವಿಭೀಷಣನಕರೆ |
ದಿತ್ತನಾಜ್ಞೆಯನರಸನವನೀಸುತೆಯ ಬರಿಸೆಂದು ||೧೮||

ಪೋಗಿ ನೀನರಮನೆಗೆ ಭೂಮಿಜೆ |
ಗೀಗಳಭ್ಯಂಜನವನೆಸಗಿಸಿ |
ರಾಗರಂಜಿತವಸ್ತ್ರಭೂಷಣದಿಂದಲಂಕರಿಸಿ ||
ವೇಗದಿಂ ಕರೆತರ್ಪುದೆನೆಲವ |
ನಾಗಳೈದಿಯಶೋಕವನದಾ |
ಭಾಗಿಲವರನು ಕರೆದು ನೀವಿದನರಿಕೆಗೈವುದೆನೆ ||೧೯||

ಬಿನ್ನವಿಸೆ ದನುಜೆಯರು ಗುಣಸಂ |
ಪನ್ನೆ ಜಾನಕಿಯೊಪ್ಪುವಳೆ ತಾಂ |
ತನ್ನ ಮೊದಲಿನ ವಸ್ತ್ರದೊಡನೆಯೆ ಪತಿಯ ಕಾಣ್ಬೆನೆನೆ ||
ಎನ್ನಭೀಷ್ಟವಿದಲ್ಲ ರಾಮನ |
ನನ್ನಿಯಾಜ್ಞೆಯನಡೆಸಬೇಕಿದ |
ನೆನ್ನುತವನಂದರುಹಲೊಪ್ಪಿದಳರಸನಾಜ್ಞೆಯನು ||೨೦||

ಉಡಿಸಿ ದಿವ್ಯಾಂಬರವನೊಡನೆಯೆ |
ತುಡಿಸಿ ಸರ್ವಾಭರಣಗಳ ತ |
ಮ್ಮೊಡತಿಯೆಂದೇ ನಮಿಸುತೇರಿಸಿಹೊನ್ನಿನಂದಣವ ||
ಬಿಡದೆ ದನುಜೆಯರುಭಯಪಾರ್ಶ್ವದೆ |
ಗಡಣಿಸೈತರೆ ಕಂಡು ರಕ್ಕಸ |
ರೊಡೆಯ ನಡೆದನು ಮುಂದೆ ತನ್ನಯ ದನುಜಬಲದೊಡನೆ ||೨೧||

ಇರದೆ ಬೇಗನೆ ಮುಂದೆಪೋಗು |
ತ್ತರಸಗಭಿವಂದಿಸುತೆ ದೇವಿಯ |
ರರಿಕೆಯೊಡನೆಯೆ ಬರುತುಮಿರ್ಪರು ಚಿತ್ತವಿಪುದೆನಲು ||
ಅರಸಿಯನು ಕಾಣ್ಬಧಿಕತೋಷವು |
ನೆರೆಯಮಾನಚ್ಯುತಿಯರೋಷವು |
ವಿರಹದುಃಖದಚಿಂತೆಯಾವರಿಸಿದುವು ನೃಪಮನವ ||೨೨||

ತರಹರಿಸುತಸುರಾರಿಯೊಳ್ಳಿತು |
ಬರಿಸು ಸನಿಹಕ್ಕೆನೆ ವಿಭೀಷಣ |
ನಿರದೆಯಾಣತಿಸಲ್ಕೆ ಕೆಲಸಾರೆಂಬ ಬಲುದನಿಯು ||
ಹರಹಿತಲ್ಲಲ್ಲಸುರರುಂ ವಾ |
ನರರುಮಂಜುತೆ ಸರಿಯೆ ಕಂಡದ |
ನರಸು ಭಕ್ತನ ಕರೆದು ಕೋಪಂಗೊಳ್ಳುತಿಂತೆಂದ ||೨೩||

ಎಲೆವಿಭೀಷಣ ನನ್ನ ಬಳಿಯಿಹ |
ಬಲವನೇತಕೆ ಚಲ್ಲಬಡಿಸುವೆ |
ಸಲುಗೆಯಿತ್ತರದಾರು ನಿನಗಾನಿದನು ಬೆಸಸಿದೆನೆ ||
ನಿಲಿಸು ನಿನ್ನವರನ್ನು ಸಾಧ್ವಿಯ |
ರೆಳಸರಲ್ತೆ ಕುಮಾರ್ಗಕಂತವ |
ರೆಳಸಲರಮನೆಪಾಳಿ ಮೇಲ್ಮುಸುಕವರ ಕಾದಪುವೆ ||೨೪||

ಮದುವೆಗಾಲದೆ ದುಗುಡಗಾಲದೆ |
ಕದರಿದಾಹವಕಾಲದೊಳು ನೃಪ |
ಸುದತಿಯರನೀಕ್ಷಿಸಲುಬಹುದೆಂದೊರೆಯುತಿದೆ ನೀತಿ ||
ಇದು ರಣಾಂಗಣವಿಲ್ಲಿ ದರುಶನ |
ಮೊದವೆವಿಹಿತವು ದೋಷವಣವಿ |
ಲ್ಲದರೊಳವನೀತನುಜೆ ಬರಲೆಂದರಸನೇಮಿಸಿದ ||೨೫||

ಒಡೆಯನಾಜ್ಞೆಯನಾವಿಭೀಷಣ |
ಸೊಡತಿಗಾಗಳೆ ಬಿನ್ನವಿಸೆ ದಡ |
ದಡಿಸಿತೆದೆ ರಘುರಾಮಚಂದ್ರನ ಸತಿಗೆ ಸುವ್ರತೆಗೆ ||
ತಡಯದೊಡನೆಯೆ ವಾಹನವ ನಿಳಿ |
ದಡಿಗಡಿಗೆ ನಿಂದಳುಕಿ ನಾಣ್ಚುತೆ |
ಮಡದಿಮಣಿ ತಾಂ ಬಂದಳೊಯ್ಯನೆ ಪತಿಯ ಸಮ್ಮುಖಕೆ ||೨೬||

ಕಂಡಳಾಮಾರ್ತಾಂಡನಿಭಭೂ |
ಮಂಡಲೇಶ್ವರಮಣಿಯನಖಿಲೋ |
ದ್ದಂಡರಿಪುವೇತಂಡಕಂಠೀರವನ ರಾಘವನ ||
ಮಂಡೆಬಾಗಿದಳವನಮೃದುಪದ |
ಪುಂಡರೀಕಕೆ ಬಳಿಕ ಮುಸುಕಿನ |
ಕಂಡಿಯಲಿ ನೋಡಿದಳು ಕಾಂತನ ಸುಂದರಾನನವ ||೨೭||

ಅಂಬುಜಾನನೆಗಾಗಳೆದೆಯಲಿ |
ತುಂಬಿಕೊಂಡಿರ್ದಳಲು ಪೊರಮ |
ಟ್ಟೆಂಬುಪರಿದಕ್ಷಿಗಳಿನುದಿರಿತ್ತಂಬುರೂಪದಲಿ ||
ಕಂಬುಕಂಠಿಯ ಕಂಠದೇಶದೊ |
ಳಿಂಬುಗೊಂಡಿರ್ದಳಲು ರೋದನ |
ವೆಂಬರೂಪಿಂ ಪೊರಟು ಪರ್ಬಿತು ಕುಂಭಿಸಿಯೊಳಿರದೆ ||೨೮||

ಇಂತು ತನ್ನಯ ಮುಖವ ನೋಡು |
ತ್ತಂತಮಿಲ್ಲದ ದುಃಖಕೆಡೆಯಾಂ |
ತಂತರಂಗದ ಮಡದಿ ಬಿಕ್ಕುತೆ ರೋದಿಸುತ್ತಿರಲು ||
ಚಿಂತೆಯೆಂಬುದನಿನಿಸುಮಂ ಮೊದ |
ಲಂತೆ ತಾರದೆ ಮನಕೆ ದುರ್ಜನ |
ನಂತೆ ಕೋಪಿಸುತಡ್ಡಮೊಗವಿಟ್ಟೆಂದನಾರಾಮ ||೨೯||

ಸೀತೆ ನೀಂ ಪ್ರಖ್ಯಾತೆ ನಿಮಿಕುಲ |
ಜಾತೆ ರಾಘವದಯಿತೆ ನಿನ್ನನು |
ನೀತಿಯರಿಯದ ಕುನ್ನಿಯೊರ್ವನು ಕಳವುಗೈದನೆನೆ ||
ಮಾತು ಹೊರುವುದು ಸುಮ್ಮನಿರ್ದೊಡೆ |
ಭೂತಳೇಶರ ವಿಮಲಕುಲಕೆಂ |
ದಾತುಡುಗನಸು ಕೊಂದು ನಿನ್ನಯ ಸೆರೆಯ ಬಿಡಿಸಿದೆನು ||೩೦||

ಮನುಜಯತ್ನಕೆ ಸಾಧ್ಯವಾಗಿ |
ರ್ಪನಿತುವಂ ಮಾಡಿದೆನು ನಿನಗಾ |
ದನುಜರುಪಟಳವನ್ನು ತಪ್ಪಿಸಿ ಗೈದೆನುಪಕೃತಿಯ ||
ವನದ ಕಪಿಗಳ ಕೂಡೆ ಮೈತ್ರಿಯು |
ವನಧಿಮಧ್ಯದೆ ಸೇತುರಚನೆಯು |
ಘನಪರಾಕ್ರಮರಾವಣನ ವಧೆ ಸುಲಭವೇನರಿಯೆ ||೩೧||

ಹೊದ್ದಿದಪವಾದವನು ತಿದ್ದುವ |
ಬುದ್ಧಿಯಿಂದಮುಮೆನ್ನ ಲೋಕಸು |
ಸಿದ್ಧವಾದಾಕ್ಷತ್ರಧರ್ಮಕೆ ಭಂಗವೊದವಿಸದೆ ||
ಉದ್ಧರಿಸಬೇಕೆಂಬ ಹೃದಯನಿ |
ಬದ್ಧವಾದಾಕಾಂಕ್ಷೆಯಿಂ ಶ್ರಮ |
ಬಿದ್ದೆನಲ್ಲದೆ ಬೇರೆಯಾಶಯವಿಲ್ಲ ಸಾಹಸಕೆ ||೩೨||

ಜಾರಚೋರನ ರಾವಣನ ತೊಡೆ |
ಯೇರುತಾತನಮನೆಯೊಳವನಿಕು |
ಮಾರಿಯಿರ್ದವಳೆಂದು ನಿನ್ನನು ಪಳಿಯದೇ ಜಗವು ||
ದೂರಿಗಾಕರವಾದ ನಿನ್ನನು |
ಸೇರಿಸುವೆನೆಂತಾನು ಮನೆಯನು |
ಸಾರು ನೀಂ ಬಗೆಬಂದಕಡೆಗಾನಿಂದು ಬಿಟ್ಟಿಹೆನು ||೩೩||

ಎಂದ ಕಾಂತನ ನಿಷ್ಠುರೋಕ್ತಿಯ |
ನಂದು ಕೇಳ್ದಾ ಪರಮಸಾಧ್ವಿಯು |
ನೊಂದು ಕುಂದುತ್ತಿಳೆಯೊಳೊರಗಿದಳೊಂದಿ ಮೂರ್ಛೆಯನು ||
ತಂದು ತಿಳಿವನು ಮತ್ತೆ ರಮಣನ |
ಕಂದಿದಾನನದಿರವ ಕಂಡಿವ |
ನಿಂದು ರಾಘವನಲ್ಲ ಮಾಯದ ದನುಜನಿವನಾರೊ ||೩೪||

ಅರಸನೆನ್ನ ವನೀತನಾದೊಡೆ |
ವಿರಸಮಾದೀಮುಖವುವೀನಿ |
ಷ್ಠುರದವಚನವುಮೆನ್ನೊಳೊಪ್ಪುವುವೆಂತು ವಾಯವಿದು ||
ಪರಿಕಿಸುವೆನಿದನೆಂದು ಸೀರೆಯ |
ಸೆರಗಿನಿಂ ಕಂಬನಿಯನೊರಸಿವ |
ನೆರೆಯನೇ ದಿಟವಿಂದು ಗತಿಯೇನೆಂದಳೀಕ್ಷಿಸುತೆ ||೩೫||

ಬಿಕ್ಕುಬಿಕ್ಕುತೆ ಭಯದೆ ನಡುಗುತೆ |
ಪಕ್ಕಕೈದುತೆ ಮೆಲ್ಲನೆಂದಳು |
ತಕ್ಕುದೇ ನಿನಗರಸ ಕಾಂತೆಯೊಳೀಪರಿಯ ವಿರಸ ||
ಸಿಕ್ಕಿದಂದದೊಳೆನ್ನ ನಾಡುತೆ |
ಧಿಕ್ಕರಿಸಿದೊಡೆ ರಮಣ ನನಗಾ |
ರ್ದಿಕ್ಕು ನಾನಿನ್ನಾರಸೇರುವೆನೆಂತು ಜೀವಿಪೆನು ||೩೬||

ಶಿವಶಿವೇಕಿಂತಾದೆ ನಾಡಿನ |
ಯುವತಿಯಿವಳೆಂದೆನ್ನ ಬಗೆಯುತೆ |
ಕಿವಿಗೆ ಸಲ್ಲದ ನಿಷ್ಠುರೋಕ್ತಿಯಿನೇಕೆ ಕೊಲ್ಲುತಿಹೆ ||
ಭುವಿಯ ಮನುಜರ ಬಸಿರಿನೈತಂ |
ದವರು ಪರಿಶುದ್ಧಾತ್ಮಕರು ದಿಟ |
ವವನಿದೇವಿಯಿನೊಗೆದಯೋನಿಜೆಯಲ್ಲಿಸಂಶಯವು ||೩೭||

ಪುರುಷನಸು ಬಿಟ್ಟಿರ್ದಮಾತ್ರದೆ |
ಪರಪುರುಷರಲಿ ಮನವು ನಾಂಟುವು |
ದರಿಯಲಿದು ಸಾಮಾನ್ಯರೀತಿಯು ಪೆಣ್ಗಳೊಳಗೆಂದು ||
ಪರಮಪುರುಷನೆ ನಿನ್ನ ಪಟ್ಟದ |
ತರುಣಿಯಾದೆನ್ನಲ್ಲಿ ಸಂಶಯ |
ವಿರಿಸುತೀಪರಿಯೊರೆವುದುಚಿತವೆ ನಿನಗೆ ಸಮ್ಮತವೆ ||೩೮||

ದುರುಳನೆನ್ನನು ಸೋಂಕಿ ಪಿಡಿದತಿ |
ಭರದೆ ಕೊಂಡೊಯ್ವಂದು ನಾನಕ |
ಟರಿಯಲಬಲೆಯು ಮಾಳ್ಪನೇಸನು ಸಾಧ್ಯವೇನೆನಗೆ ||
ಅರಸ ನನ್ನೊಳಗಿಲ್ಲ ದೋಷವು |
ಬರಿದೆ ದೂರುವೆಯೇಕೆ ನನ್ನನು |
ನರಕವಾಗಲಿ ನನಗೆ ನೆನೆದಿರೆ ಮನದೊಳಾತನನು ||೩೯||

ಅಂದು ಮುದ್ರಿಕೆಯೊಡನೆ ಮಾರುತ |
ನಂದನನ ನೀಂ ಕಳುಪಿದಾಗಳೆ |
ಮಂದಭಾಗ್ಯೆಗೆಯೀವಿಚಾರವನೊರೆಯಹೇಳಿರಲು ||
ಕೊಂದುಕೊಂಡೆನ್ನ ಸುವನಸುರನ |
ಬಂಧನದ ಕಡುಕಷ್ಟವೆಲ್ಲವ |
ನಂದೆ ನೀಗುತ್ತಿರ್ದೆನದನೇಕಕಟ ನೀಂ ಮಾಣ್ದೆ ||೪೦||

ಸಲುವ ಕುಲಶೀಲಗಳಿಗೊಪ್ಪ |
ತ್ತೊಲಿದು ನನ್ನನು ವರಿಸಲಿಲ್ಲವೆ |
ತಿಳಿವದಿಲ್ಲದ ಬಾಲ್ಯದಲಿ ನೀನೆನ್ನ ವರಿಸಿದೆಯ ||
ಹಲವುನುಡಿಯಿಂದೇನು ಪೂರ್ವದೆ |
ಗಳಿಸಿದುದನೀಗುಣ್ಬೆನಲ್ಲದೆ |
ತಿಳಿಯೆ ತಪ್ಪೆಳ್ಳನಿತುಮಿಲ್ಲವು ನಲ್ಲ ನಿನ್ನಲ್ಲಿ ||೪೧||

ಹೋಗಲಿನ್ನೇನಕಟ ನನ್ನಸು |
ನೀಗಿದನು ನಿಮ್ಮಣ್ಣದೇವನು |
ಬಾ ಗುಣಾಢ್ಯನೆ ಮೈದುನನೆಯಿಾಕಷ್ಟವನು ಬಿಡಿಸು ||
ಬೇಗನಿಂಧನವೊಟ್ಟಿಸಗ್ನಿಯ |
ನೀಗ ಪೊತ್ತಿಸು ಬೀಳ್ವೆನದರಲಿ |
ರಾಘವೇಶಂಗಿಷ್ಟಮಪ್ಪುದು ತೋಷವೆನಗಹುದು ||೪೨||

ಎಂದು ಜಾನಕಿ ನುಡಿಯೆ ಲಕ್ಷ್ಮಣ |
ನಂದು ಮರುಗುತ್ತಣ್ಣದೇವಂ |
ಗೆಂದನಿಂದೆನಗೇನನುಜ್ಞೆಯು ದೇವಿಯರ ನುಡಿಗೆ ||
ಅಂದಮಾವುದೊ ಚಿತ್ತಕದರಂ |
ತಿಂದು ನಡೆಯಿಪೆನೆನಲು ಸುದತಿಗೆ |
ಚಂದಮಾವುದೊ ನಡೆಸು ನೀನದನೆಂದನಾ ರಾಮ ||೪೩||

ತರಿಸಿ ಕಾಷ್ಠಂಗಳನು ಜೋಡಿಸಿ |
ಯುರಿಯ ಪರ್ಬಿಸೆ ಕಂಡು ಜಾನಕಿ |
ಯರಸನನು ಬಲವಂದು ಪೊಡಮಟ್ಟೆಳ್ದು ಕೈಮುಗಿದು ||
ಮೆರೆವ ನಿನ್ನೀಚರಣಕಮಲದೊ |
ಳೆರಕಗೊಳ್ಳದೆ ಮನವು ಬೇರೆಡೆ |
ಚರಿಸಿರಲು ಪಾಪಿನಿಯನೆನ್ನನು ನುಂಗಲೀಶಿಖಿಯು ||೪೪||

ಅಲ್ಲದೊಡೆ ನಿನ್ನೀಪದಾಂಬುಜ |
ದಲ್ಲಿ ನನ್ನಸು ಮರಳಿ ಕೆಡಹಲಿ |
ವಲ್ಲಭನೆ ನೀನೀವುದಾಜ್ಞೆಯ ನಿನ್ನ ವಲ್ಲಭೆಗೆ ||
ನಲ್ಲನಾನಿದೊ ನಮಿಸಿದೆನು ನ |
ನ್ನಲ್ಲಿ ಕೃಪೆಯಿರಲೆಂದು ಮೊರೆಯಿ |
ಟ್ಟಲ್ಲಿ ಭುಗ್ಗೆಂದುರಿಯುವಗ್ನಿಯೊಳಮಲೆ ಸೇರಿದಳು ||೪೫||

ಹಾಯೆನುತೆ ಬಾಯ್ವಿಟ್ಟರಖಿಳರು |
ರಾಯರಾಘವನತ್ತ ತಿರುಗದೆ |
ನೋಯದಿರ್ದನು ಮನದೆ ಪಾರ್ಥಿವರೇಂದ್ರಢವ್ರತರೊ ||
ಬಾಯಬಿಟ್ಟುದು ಸುರಕದಂಬಕ |
ವಾಯತಾಕ್ಷಿಗೆ ಘನಪತಿವ್ರತೆ |
ಗಾಯಿತನ್ನೆಯವಕಟವೆಂದುದು ಬಂದುದೊಗ್ಗುಡಿಸಿ ||೪೬||

ಧರಣಿಗಿಳಿದರು ವಾಸವಾದಿಗ |
ಳಿರದೆ ಕಮಲಜಹರರ ಜತೆಯಲಿ |
ನರರ ಪರಿಯಾಹರಿಯ ಕಂಡರು ನುತಿಸಿ ನುಡಿಸಿದರು ||
ಪರಮಪುರುಷನು ಹರಿಕಣಾ ನೀ |
ನರಸಿ ನಿನ್ನವಳಾದಿಮಾತೆಯು |
ಬರಿಯಭೂಧವರಲ್ಲ ನೀವೆಂದರುಹಿದರು ನೃಪಗೆ ||೪೭||

ಏನಿದಕಟನಿತೆನಗೆ ಸಲುವುದೆ |
ಭಾನುವಂಶದ ಮಾನವಾಧಿಪ |
ಸೂನು ತಾನಹೆನಿದುವೆ ಸತ್ಯವು ಲೋಕವರಿಯಲ್ಕೆ ||
ಮಾನಧನನಾದೆನ್ನ ಸತಿಯನು |
ಹೀನರಕ್ಕಸನಪಹರಿಸಲಪ |
ಮಾನವಳಿಯಲ್ಕವನ ಕೊಂದೆನು ಬಿಡಿಸಿದೆನು ಸತಿಯ ||೪೮||

ಪೆರನ ಮನೆಯೊಳಗಿರ್ದಳನು ನಾ |
ನರಿದರಿದು ಕೂಡುವೆನೆ ಕುಲಕಿದು |
ಕೊರತೆಯಲ್ಲವೆ ನಿಮ್ಮ ಚಿತ್ತದೊಳರಿಯಿರೇನಿದನು ||
ಪರಮಪೂಜ್ಯರೆ ಲೋಕಧರ್ಮಾ |
ಚರಣೆಗಾರಿದಕಾದಿಕರ್ತೃಗ |
ಳರಿಯೆ ನೀವಲೆ ನಿಮ್ಮ ನೇಮವನುಳಿಯಲೆನ್ನಳವೆ ||೪೯||

ಎಂದ ರಾಮನ ಸಾರವಹ ನುಡಿ |
ಗಂದು ತಲೆದೂಗಲ್ಕೆ ಸಕಲರು |
ಕುಂದದವನೀಸುತೆಯ ತಲೆವೂ ಕಂದದಂದದಲಿ ||
ತಂದು ಮುಂದೆಡೆ ಯಜ್ಞಪುರುಷನು |
ಸುಂದರೇಂದೀವರದಳಾಕ್ಷಿಯ |
ನಿಂದಿರೆಯ ನೀನೆಂದು ಕೊಳ್ಳೆಂದಿತ್ತನರಸಂಗೆ ||೫೦||

ಹರಿಯು ನೀನಹೆ ಸಿರಿಯು ಸೀತೆಯು |
ಸರಿಯೆ ನಿನಗಿವಳಲ್ಲಿ ಸಂಶಯ |
ವರಿವುದಿದನೀಂ ನಿಮ್ಮ ಬೊಪ್ಪನೊಳೆನಲು ಹುತವಹನು ||
ಅರಸ ದಶರಥನಾಗ ಬಂದನು |
ತರಳರನು ತಕ್ಕೈಸುತೆಂದನು |
ಪರಮಸಾಧ್ವೀಮಣಿಯು ಸೀತೆಯು ಸತ್ಯವೀನುಡಿಯು ||೫೧||

ಇವಳ ಪಾತಿವ್ರತ್ಯಮಹಿಮೆಯಿ |
ನಿವಳ ಸೌಶೀಲ್ಯಾದಿಗುಣಗಳಿ |
ನವಿರಳಾನಂದಾನುಭವವೆನಗಾಯ್ತು ಸಗ್ಗದಲಿ ||
ಇವಳು ಸಾಕ್ಷಾಲ್ಲಕ್ಷ್ಮಿ ನೀನೀ |
ಭುವಿಯೊಳವತರಿಸಿರ್ಪ ಹರಿರಾ |
ಘವನೆಸುಖಮಿಹುದೀಕೆಯೊಡನೆಂದುಸಿರಿ ತೆರಳಿದನು ||೫೨||

ಬಳಿಕೆ ರಾಘವನೆರಗಿ ದೇವ |
ರ್ಕಳಿಗೆ ಭಕ್ತಿಯೊಳಾಗಳೆಂದನು |
ಲಲನೆಯಿವಳಹುದನಘೆ ರಾವಣನೀಕೆಯನು ಪಿಡಿದು ||
ಚಲಕೆ ಸೆರೆಯೊಳಗಿಟ್ಟನಲ್ಲದೆ |
ಚಲಿಸಲಿಲ್ಲಕ್ರಮಕೆ ಮನದೊಳು |
ತಿಳಿದೆನಾದೊಡಮಿದನು ಲೋಕದ ಪಳಿವಿಗಂಜಿದೆನು ||೫೩||

ಇಂದು ನಿಮ್ಮನದೊಂದನರ್ಥಿಪೆ |
ನೆಂದಿನಂದದೆ ಬದುಕಲೀಗಳಿ |
ನೊಂದಿ ಬಿದ್ದಿರ್ಪೆಮ್ಮ ಕಪಿಕುಲವಿದನು ಸಲಿಪುದೆನೆ ||
ಇಂದಿರೇಶನೆ ನಿನ್ನ ಘನಕೃಪೆ |
ಯಿಂದಮುಜ್ಜೀವಿಪುದು ಪೊಸತೇ |
ನೆಂದುಪರಸಲ್ಕೊಡನೆಯೆಳ್ದುದು ಮಡಿದ ಕಪಿಕುಲವು ||೫೪||

ವರದನಾದೆನು ನಾನು ನಿಮ್ಮಯ |
ಚರಣಸಂದರ್ಶನದೊಳೆನುತಡಿ |
ಗೆರಗಿದಾ ರಘುವರನನಾಶೀರ್ವದಿಸಿ ಬೀಳ್ಕೊಂಡು ||
ತೆರಳಿದರು ಸುರಮುಖ್ಯರಾಗಳ್ |
ಹರುಷಲತೆ ಪರ್ಬಿತ್ತು ಪಾಳ್ಯದೊ |
ಳರಸನರಸಿಯ ಕರವ ಪಿಡಿದಸು ಜಗವುಘೇಯೆನಲು ||೫೫||

ಹತ್ತನೆಯ ಸಂಧಿ ಸಂಪೂರ್ಣಂ

## ಹನ್ನೊಂದನೆಯ ಸಂಧಿ.

ಸೂಚನೆ || ದೇವಪುಷ್ಪಕವೇರ್ದಯೋಧ್ಯೆಗೆ |
ದೇವರಾಘವನೈದಿಭರತನ |
ಭಾವಕುರೆಮೆಚ್ಚಾಂತುಕೊಂಡನುರಾಜ್ಯಭಾರವನು ||

ಸಡಗರದೆ ಕರೆದಾಶ್ರಿತನನೆ |
ನ್ನೊಡನೆ ಜನಿಸಿದ ಭರತಗಿತ್ತಾ |
ಗಡುಬವದು ಸನ್ನಿಹಿತವಾದುದು ಪುರಕೆ ಮರಳುವೆನು ||
ಅಡಸಿದಾಪತ್ತಿನಲಿ ನನ್ನನು |
ಕಡೆಯಹಾಯ್ಸಿದ ಸಖನೆ ನೀನೀ |
ಪೊಡವಿಯಾಳುತೆ ಸುಖದಿಮಿಲ್ಲಿಹುದೆಂದನಾ ರಘುಜ ||೧||

ದೇವ ನಿಮ್ಮಯ ಪಯಣಕಿರ್ಪುದು |
ದೇವಪುಷ್ಪಕವೆನ್ನೊಳದರೊಳ |
ದಾವಬಳಿಗೆನಿತೆಸಿತು ವೇಗದೊಳೈದಬೇಕೆಂದು ||
ಭಾವದೊಳು ಭಾವಿಸುವಿರಂತಾ |
ಭಾವನೆಗೆ ತಕ್ಕಂತೆ ಪೋದಪು |
ದೀವಿಮಾನವನೊಪ್ಪಿಕೊಳ್ಳೆಂದಸುರಪತಿ ನುಡಿದ ||೨||

ಮೆಚ್ಚಿದೆನು ನಿನಗಾನು ಮನಕೆಂ |
ತಿಚ್ಛೆಯಪ್ಪುದೊ ಮಾಳ್ಪುದಂತೆನ |
ಲಚ್ಚರಿಯ ಪುಷ್ಪಕವ ತರಿಸಿದನಾ ವಿಭೀಷಣನು ||
ಬಿಚ್ಚಿದನು ಬಳಿಕಂತರಂಗವ |
ನಚ್ಯುತನೆ ನಿನ್ನ ಮಲನಗರಿಯ |
ಹೆಚ್ಚಳಿಕೆಯನು ನೋಡಬೇಕೆಂಬಾಶೆ ತನಗೆಂದು ||೩||

ತನಗುಮೀಯಭಿಲಾಷೆಯುಂಟೆಂ |
ದಿನಜನರ್ಥಿಸಿಕೊಳಲು ನಿಮ್ಮಯ |
ಘನಚತುರ್ಬಲದೊಡನೆ ಬಹುದೆಂದವರ ಸಂತವಿಸಿ ||
ವಿನುತವುಷ್ಪಕವೇರಲಾಂ ತಾ |
ನೆನುತುಮಖಿಳರುಮಡರಿದರು ಮೇ |
ಲನಿಮಿಷಾಧ್ವದೊಳೆಸೆದುದಾಗಳೆ ಧನದನಾಯಾನ ||೪||

ತ್ರಿದಶಪತಿಮುಖಸುರರು ಕಂಡಿದ |
ನೆದೆಯೊಳಂಜಿದರಹಹ ಮತ್ತಿಂ |
ಬೊದವಿತೇ ಖಳಬಾಧೆತಮಗಿನ್ನೇನುಗತಿಯೆನುತೆ ||
ಚದರಿದರಿವನು ಮರಳಿ ಸೇರಿಸಿ |
ಬೆದರನುಳಿದರು ರಾವಣನವಧೆ |
ವಿದಿತವೆನೆ ನಮ್ಮಿದಿರೊಳಾಗಿರಲೇಕೆ ಭಯವೆಂದು ||೫||

ಅತ್ತ ನಡೆದುದು ವರವಿಮಾನವು |
ಚಿತ್ತಜಾತನ ಪಿತನು ಮಡದಿಗೆ |
ಬಿತ್ತರಿಸಿದನು ಮಾರ್ಗದಲ್ಲಿರ್ಪುತ್ತಮಾಂಶಗಳ ||
ಚಿತ್ತವಲ್ಲಭೆ ನೋಡು ಸೇತುವ
ನೆತ್ತಿ ಕರವನು ಸಾರುವಂತಿಹು |
ದಿತ್ತ ಕುಳ್ಳಿರ್ಪಿೀಕಪೀಂದ್ರರ ಸತ್ವದಳೆತೆಯನು ||೬||

ಇದರ ಮೂಲದೊಳುಭಯಸಾಗರ |
ವಿದೆಕೊ ಸೇರಿಹುವಿಲ್ಲಿ ಮಿಂದವ |
ರೊದೆದು ಕಳೆವರು ಪಾಪವನು ತಾನಿದು ಧನುಷ್ಕೋಟಿ ||
ಅದೆಕೊ ಕಿಷ್ಕಿಂಧೆಯನು ನೋಡಿಂ |
ಬದುವೆ ಮಿತ್ರನ ರಾಜಧಾನಿಯು |
ವಧಿಸಿ ವಾಲಿಯ ನಿವನಸಲಹಿದತಾಣವಿತ್ತಿದೆಕೊ ||೭||

ಎಂದ ಕಾಂತನ ಮಧುರವಚನವ |
ನಿಂದುಮುಖಿಯಾಚಿಸುತೆ ತನಗಿಹು |
ದೊಂದುಬಯಕೆಯು ವಾನರೇಶ್ವರಮುಖ್ಯಕಪಿವರರ ||
ಸುಂದರಾಂಗಿಯರೊಡನಯೋಧ್ಯೆಯ |
ನೊಂದಬೇಕೆಂದಿದನು ಕರುಣಿಪು |
ದೆಂದು ಯಾಚಿಸಲೊಡನೆ ಪುಷ್ಪಕವಿಳಿದುದಾ ಪುರದೆ ||೮||

ದೇವನಾಣತಿಸಲ್ಕೆ ವರಸು |
ಗ್ರೀವನಿಷ್ಪದೆ ಪುರದವನಿತೆಯು |
ರಾವಿಮಾನವನೇರಲದು ಮತ್ತೈದಿತಘ್ರದಲಿ ||
ದೇವಿ ನಿನಗಾಗಾ ಜಟಾಯುವು |
ಸಾವನೊಂದಿದ ತಾಣವಿದು ನೀಂ |
ರಾವಣನ ಕೈಸೆರೆಗೆ ಸಿಕ್ಕಿದ ಪರ್ಣಗೃಹವಿದೆಕೊ ||೯||

ಖರನೆ ಮೊದಲಾದಸುರರೆನ್ನಿಂ |
ಹರಣವುಳಿದಾ ತಾಣವಿತ್ತಿದೊ|
ಪರಮಪಾವನೆ ಗಂಗೆಯೆಸೆದಪಳತ್ತ ನೀಂ ನೋಡು ||
ಹಿರಿಯರೆಮ್ಮನ್ವಯದ ಭೂಮಿಪ |
ವರರು ಸತ್ಯದಿನಾಳ್ದ ಸರಯೂ |
ಪರಿವೃತಾಯೋಧ್ಯೆಯನು ನೋಡೆರಗೆಂದನಾರಾಮ ||೧೦||

ಇಂತು ಜಾನಕಿಗಿರದೆ ತೋರುತ |
ನಂತರ ಭರದ್ವಾಜಮುನಿಗಳ |
ಶಾಂತಿನಿಲಯವಿದೆನಿಸುವಾಶ್ರಮದೆಡೆಯ ಕಂಡಿಳಿದು ||
ಪಿಂತಣಂದದೊಳವರಿಗೆರಗಿ ಸ |
ಮಂತು ಶೋಭಿಪುದೇನಯೋಧ್ಯೆಯು |
ಸಂತಸದಿಮಿರ್ದಪರೆ ಸಕಲರು ಬೆಸಸವೇಳ್ಪುದೆನೆ ||೧೧||

ಅರಸ ನಿನ್ನಸುಜಾತ ಭರತನು |
ಧರಿಸಿ ಜಟೆಯನು ನಿನ್ನ ಪಾದುಕ |
ವಿರಿಸಿ ಸಿಂಹಾಸನದೆ ರಾಜ್ಯವನಾಳುತಿರ್ದಪನು ||
ಪುರಕೆ ಬಾರದೆ ನೀನು ತಳುವಿರೆ |
ಕೊರಗಿ ನಾರುಡೆಯುಟ್ಟು ನಿಯಮಾ |
ಚರಣೆಯಿಂದಿಹನಿದುವೆ ನಿನ್ನಯ ದೇಶವೃತ್ತಾಂತ ||೧೨||

ಇಂದು ನೀನೆಮ್ಮತಿಥಿಯಾಗುತೆ |
ನಿಂದು ನಮ್ಮೀ ಪರ್ಣಶಾಲೆಯೊ |
ಳೊಂದಿ ಸತ್ಕಾರಂಗಳಂ ರಾತ್ರಿಯನು ನೀಂ ಕಳೆದು ||
ಮುಂದೆ ಬಿಜಯಂಗೈಯಬೇಕೆನು |
ತೆಂದ ಮುನಿವರರಿಷ್ಟವನು ಸಲಿ |
ಸಂದು ಹನುಮನ ಕರೆದು ಬೆಸಸಿದನಾ ರಘೂದ್ವಹನು ||೧೩||

ವೀರ ಬಾರ್ೆ ಹನುವು ಮುಂಗಡೆ |
ತೋರುತಿರ್ಪುದಯೋಧ್ಯೆಯಲ್ಲಿಗೆ |
ಸಾರಿ ನೀನಾ ಭರತಭೂಪನ ಕಂಡು ಸಂತೈಸಿ ||
ನೀರೆಯೊಡನಾವಹೆವು ಕುಶಲಿಗ |
ಘೊರನೀದಿನ ಸೇರುವೆವು ಪರಿ |
ವಾರಮೊಡನುಂಟೆಂಬುದನು ನೀನೊರೆವುದಿವನೊಡನೆ ||೧೪||

ಬಲಯುತನು ರಾವಣನು ಸೀತಾ |
ಲಲನೆಯನು ಕದ್ದೊಯ್ಯಲೀಕಪಿ |
ಕುಲಲಲಾಮನ ಮೈತ್ರಿಯಿಂ ವಾರಿಧಿಗೆ ಸೇತುವನು ||
ಬಲಿದು ಲಂಕೆಯ ಪೊಕ್ಕು ದನುಜನ |
ನಳವಿಯಲಿ ಸಂಹರಿಸಲಾಶಿವ |
ಜಲಜಭವರೆಮ್ಮಯ್ಯನೊಡನೈತಂದುದನು ತಿಳಿಪು ||೧೫||

ಕಲುಷವಿಲ್ಲದದೇವಿಯನು ಮನ |
ಮೊಲಿದು ಕೂಡೆಂಬವರನುಜ್ಞೆಯ |
ನೊಲವಿನಿಂದಾನಾಂತ ಪರಿಯನು ಮರೆಯದಿಂದುಸಿರು ||
ಕುಲಪರಂಪರೆಯಿಂದೆ ಬಂದಿಹ |
ನೆಲವನಾವನು ಬಿಡುವನೈ ನೀಂ |
ಪಲವುಬಗೆಯಿಂ ತಮ್ಮನಿಂಗಿತವರಿದು ಬಂದರುಹು ||೧೬||

ಎಂದವನ ನುಡಿ ಹಿಂಚಿತೆಂದೆನ |
ಲಂದು ನಿಂದನು ಹನುಮ ಭರತನ |
ಮುಂದೆ ಸಂದಿಗ್ರಾಮದೆಡೆಯೊಳಗೆಂದನೆಲ್ಲವನು ||
ಬಂದನಗ್ರಜನೆಂಬಸುದ್ದಿಯ |
ತಂದ ಹನುಮನನಪ್ಪಿ ಭರತನು |
ಚಂದದಾನಂದಾಮೃತಾಬ್ಧಿಯೊಳಳ್ದು ತೇಲಿದನು ||೧೭||

ನಲಿದನುಲಿದನು ಮನವು ದಣಿವವೊ |
ಲಲಘುಮತಿಯಾಗಣ್ಣದೇವನ |
ಹಲವುಸದ್ಗುಣಗಳನು ಬರಿಸಿದನಖಿಳಮಂತ್ರಿಗಳ ||
ಜಲಜಸಖಕುಲದಾಣ್ಮನನು ನಿ |
ಸ್ಖಲಿತಭಾವದಿನಿದಿರುನೋಡು |
ತ್ತಲುಗದೆಸೆದನು ನಿಖಿಲಸದ್ಗುಣಭರಿತನಾಭರತ ||೧೮||

ಎಸೆಯುತಂಬರಪಥದೊಳೈತಹ |
ದಶಶಿರೋರ್ಣವಬಾಡಬಾನಲ |
ನಸಮಯಾನವನಾವಿಮಾನವ ಕಂಡು ಬಳುತಿಯಲಿ ||
ನೊಸಲಿಗೇರಿಸಿ ಮುಗಿದ ಕರಗಳ |
ನುಸಿರುಮೊಗಚದ ತೆರದೆ ರಾಮನ |
ಜಸವ ಪಸರಿಪ ವಿಮಲಮಂತ್ರವ ಪಠಿಸಿದನು ಭರತ ||೧೯||

ಬಂದುದಾ ಪುಷ್ಪಕವು ಧರೆಗಿಳಿ |
ತಂದು ನಿಂದುದು ಪುರದ ಬಾಗಿಲೊ |
ಳಂದು ಮೈಯಿಕ್ಕಿದುದು ಭರತಾದ್ಯಖಿಳಪುರಜನವು ||
ಇಂದುಮುಖಿಯೊಡನಂದು ರಘುಕುಲ |
ದಿಂದುಶೇಖರನಿಳಿದುಯಾನದಿ |
ನೊಂದಿದಾನಂದದಲಿ ತಮ್ಮನನಪ್ಪಿ ಮುದ್ದಿಸಿದ ||೨೦||

ಮಾತೆಯರಿಗೆರಗಿದನು ಸತಿಸಹ |
ಜಾತನುಂಬೆರಸಾವಸಿಷ್ಠರ |
ಪೂತಚರಣಕೆ ನಮಿಸಿ ಯವರಾಶಿಷವ ಕೈಕೊಂಡು ||
ಆತುರಿಸಿ ಮಾನಸದೆ ದರ್ಶನ |
ಕೌತುಕದೆ ನಿರುಕಿಸುವ ಪೌರ |
ವ್ರಾತಕಿತ್ತನು ಸಮಯವನು ಕೈಕೊಂಡು ಕಾಣಿಕೆಯ ||೨೧||

ಅಣ್ಣ ನಿನ್ನಯ ಬರವನಿರುಕಿಸು |
ತಿನ್ನೆಗಂ ನಾಂ ಸಿರದೊಳಾಂತೀ |
ಯುನ್ನತಾವನಿಭಾರವನು ಕೃಪೆಯಿಂದೆ ನೀಂ ವಹಿಸು ||
ಚಿಣ್ಣನಾದೆನ್ನಿಂದೆ ಸಾಧ್ಯವೆ |
ಮನ್ನಿಸುವುದಿದನೆಂದ ಭರತನ |
ಬಿನ್ನಹಕೆ ತಲೆದೂಗಿ ಮೆಚ್ಚಿದನವನಿಜಾಪತಿಯು ||೨೨||

ಬಳಿಕಮರಮನೆಗೈದಿ ಯೊಡನ |
ಲ್ಲಿಳುಹಿದರು ಧರಿಸಿರ್ದ ಜಟೆಗಳ |
ನಳಿಸಿದರು ಬನದಲಸಿಕೆಯನಾ ರಾಮಲಕ್ಷ್ಮಣರು
ತಳುವದೊಡನೈದಿರ್ಪ ಸಕಲರ |
ನೊಲವಿನಿಂದುಪಚರಿಸಿ ರಾಮನು |
ಕಳುಹಿದನು ಪುಷ್ಪಕವ ಧನದನ ಬಳಿಯೊಳಿರಲೆಂದು ||೨೩||

ನೀತಿಯಪ್ಪುದು ದೇವ ನೀಂ ಸಾ |
ಕೇತಪುರಕ್ಕೈತಂದು ರಘುಕುಲ |
ಜಾತರೆಡವಿಡದೇರ್ದ ಸಿಂಹಾಸನದೆ ಮಂಡಿಸುತೆ ||
ಪೂತವಹ ಪಟ್ಟಾಭಿಷೇಕವ |
ನೋತು ತಳೆದಿಳೆಯಾಳುವುದು ಸಂ |
ಪ್ರೀತಿ ನಮಗೆಂದಖಿಳಮಂತ್ರಿಗಳೊರೆದರರಸಂಗೆ ||೨೪||

ಆಗಲಂತೆಂಬರಸನಾಣತಿ |
ಗಾಗಳೇ ರಥ ಬಂದು ನಿಂದುದು |
ವೇಗವುಳ್ಳತ್ಯುತ್ತಮಾಶ್ವಗಳಿಂದೆ ಸಜ್ಜೆನಿಸಿ ||
ರಾಗರಸದೊಳ್ಮುಳುಗಲುರ್ವಿಯು |
ರಾಘವೇಶ್ವರನಡರಿದನು ನಲಿ |
ದಾಗಮೋಕ್ತದೆ ಪರಸೆ ಬುಧತತಿ ದಿವ್ಯಮಣಿರಥವ ||೨೫||

ಆಸಮಯದೊಳಗಂತರಿಕ್ಷದೆ |
ವಾಸವನು ಮೊದಲಾದಸುರರು |
ದ್ಘೋಷಿಸಿದರಸುರಾರಿ ರಾಘವ ಜಯಜಯೆಂದೆನುತೆ ||
ಕೀಶರಾಜವಿಭೀಷಣರ್ಪರಿ |
ತೋಷದಿಂದಿಭಮೇರಿಯೈತರೆ |
ದಾಶರಥಿಯಾ ರಥವು ನಡೆದುದಯೋಧ್ಯೆಯಾಕಡೆಗೆ ||೨೬||

ಭರತನೆಸೆದಿರೆ ಸಾರಥಿತ್ವದೊ |
ಳೆರಡುಪಕ್ಕದೊಳುಳಿದಸೋದರ |
ರಿರುತಿರಲ್ ಸತ್ತಿಗೆಯ ಚಾಮರದಾಳುಗೆಲಸದಲಿ ||
ಪುರವ ಪೊಕ್ಕುದು ತೇರು ಜನಗಳ |
ನೆರವಿಯಲಿ ಕಡವಾಯ್ತು ಗಮನವು |
ಮೆರೆವ ಮೇಲ್ಮಚ್ಚುಗಳಿನೆಸೆದರು ವನಿತೆಯರು ಸುಮವ ||೨೭||

ಒರೆಯಲೇಕಿದನದನು ತೇರಿರ |
ದರಮನೆಯ ಬಾಗಿಲಲಿ ನಿಂದುದು |
ಸಿರಿಯರಸನಿಳಿದದನು ಪೊಕ್ಕನು ರಾಜಮಂದಿರವ ||
ಒರೆದು ಸುಗ್ರೀವಂಗೆ ಭರತನು |
ತರಿಸಿ ಸಾಗರಜಳವನಾಗಳೆ |
ಗುರುವಶಿಷ್ಠರಿಗರುಹೆ ಕೂಡಿತ್ತಖಿಳವಸ್ತುಗಳು ||೨೮||

ಸೃಷ್ಟಿಗೊಡೆಯನ ಬರಿಸಿ ಭುವನ |
ಶ್ರೇಷ್ಠಮಾದಾ ಸಿಂಹಪೀಠದೊ |
ಳಷ್ಟಕೋಭೆಯಿನಖಿಳಋತ್ವಿಗ್ವರರು ಮುನಿವರರು ||
ಅಟ್ಟಹಾಸದೆ ಪಟ್ಟಗಟ್ಟಿದ |
ರಿಷ್ಟವಾಂತುದು ಜಗವು ಬಳಿಕ ವ |
ಸಿಷ್ಠರಿಟ್ಟರು ಮಣಿಕಿರೀಟವ ರಾಘವನ ಮುಡಿಗೆ ||೨೯||

ದೇವಿಯೊಪ್ಪಿರೆ ವಾಮದಲಿ ಸು |
ಗ್ರೀವದನುಜೇಶ್ವರರು ಚಾಮರ |
ಸೇವೆಗೊಂಡಿರಲುಭಯಪಾರ್ಶ್ವದೊಳರಸುಸತ್ತಿಗೆಯ ||
ಕೋವಿದನು ಶತ್ರುಘ್ನನಾಂತಿರ |
ಲಾವನೇಜಾಂಬಕನು ಲಕ್ಷ್ಮೀ |
ದೇವಿಯರಸನು ರಾಮಚಂದ್ರನು ಮೆರೆದನೋಲಗದೆ ||೩೦||

ನೆರೆದ ಸಭೆಯೊಳಗರಸನರಸಿಯ |
ಕೊರಳಿಗನುಗೊಳಿಸಿದೊಡನರ್ಘದ |
ಸರವನೊಂದನು ದೇವಿ ಸಡಿಲಿಸಿ ಕಂಠದಿಂದದನು ||
ಕರದೆ ಪಿಡಿದಂದಿನಯನಾನನ |
ಸರಸಿರುಹವನು ನೋಡಲದನರಿ |
ದರಸನೆಂದನು ಬುದ್ಧಿಪೌರುಷಶಾಲಿಗೀಯೆಂದು ||೩೧||

ಭರದಿಸದನವನಿಜೆಯು ಹನುಮಂ |
ಗಿರದೆಯಿತ್ತೊಡೆ ಮೇಲೆ ಸುರಗಣ |
ವರರೆಧಣುಧಣು ಹನುಮ ಭಕ್ತಲಲಾಮ ಘನಮಹಿಮ ||
ಸರಿಯೆ ನಿನಗಿಲ್ಲೆಂದು ಪೊಗಳ |
ಸರಿಯ ಕರೆಯುತ್ತಿರಲು ಕಂಠದೆ |
ಧರಿಸಿ ಸರವನು ರಾಮನಂಘ್ರಿಗೆ ನಮಿಸಿದನು ಹನುಮ ||೩೨||

ಬಳಿಕ ರಾಘವನಾ ವಿಭೀಷಣ |
ಗೊಲಿದು ಸನ್ಮಾನವನು ಗೈದಾ |
ಜಲಜಮಿತ್ರನ ಸುತನನುಡುಗೊರೆಯಿಂದೆ ಮನ್ನಣೆಸಿ ||
ಉಳಿದಕಪಿಗಳನುಡುಗೆತೊಡುಗೆಯಿ |
ನೊಲಿಸಿ ಸಂತಸದಿಂದೆ ನಿಜಪುರ |
ಗಳಿಗೆಮರಳಲನುಜ್ಞೆಯಿತ್ತನು ಪರಸಿ ಪಲಬಗೆಯ ||೩೩||

ಇಂತು ರಘುಕುಲಸಾರ್ವಭೌಮನು |
ಸಂತಸದೆ ಜಯಲಕ್ಷ್ಮಿಯನು ಪಡೆ |
ದಾಂತು ಮೂಜಗದರಸುತನವನು ಲಕ್ಷ್ಮಣನ ಕರೆದು ||
ಪಿಂತಣಿಂದೆಮ್ಮನ್ವಯದ ಭೂ |
ಕಾಂತರಾಳ್ದೀಧರಣಿಯಲಿ ನಿ |
ಶ್ಚಿಂತೆಯಿಂ ಯುವರಾಜಪಟ್ಟದೊಳಿಹುದು ನೀನೆನಲು ||೩೪||

ನಿನ್ನ ಸೇವೆಯೊಳೆನ್ನತನುವನು |
ಮುನ್ನತೇಯುವೆನೆಂಬ ಸುವ್ರತ |
ವೆನ್ನ ಒಲಿದಿದೆ ಸಾಗದೆನ್ನಿಂ ಯೌವರಾಜ್ಯವೆನೆ ||
ಮನ್ನಿಸುತೆ ಲಕ್ಷ್ಮಣನ ಭರತಂ |
ಗುನ್ನತಿಯಪದವದನು ಕರುಣಿಸಿ |
ಸನ್ನುತಾಂಗನು ರಾಮಚಂದ್ರನು ಜಗವ ಪಾಲಿಸಿದ ||೩೫||

ಹತ್ತುಸಾಸಿರವರುಷ ಸುಖದಿಂ |
ದುತ್ತಮೋತ್ತಮಸಿಳೆಯಭಾರವ |
ಪೊತ್ತು ಸಲಹುತ್ತಿರ್ದನಂದಿನ ಜನದ ಭಾಗ್ಯದಲಿ ||
ಹೊತ್ತುಹೊತ್ತಿಗೆ ಮಳೆಗಳಾದುವು |
ಬತ್ತವಾಕೆರೆಕಟ್ಟೆ ಸಂತತ |
ವಿತ್ತುವಿಂಪನು ಮನಕೆ ಮೆರೆವಾಪೈರುಪಚ್ಚೆಗಳು ||೩೬||

ಎತ್ತಲುಂ ಪೂಗಾಯಿಪಣ್ಗಳು |
ಮೆತ್ತಿಮೆರೆದುವು ವೃಕ್ಷತತಿಗಳೊ |
ಳೊತ್ತಿ ತುಂಬಿದ ಧಾನ್ಯಮೋಲಗಿಸಿತ್ತು ಕೃಷಿಕರನು ||
ಚಿತ್ತಜಾತನ ಮೋಹನಾಸ್ತ್ರಕೆ |
ತೆತ್ತು ಮನವನು ಧರ್ಮವನು ತುಳಿ |
ದೊತ್ತಿ ಚರಿಪವಿವೇಕಮುಡಗಿತು ರಾಮರಾಜ್ಯದಲಿ ||೩೭||

ಪತಿವಿಯೋಗಾಕುಲತೆಯರಿಯರು |
ಸತಿಯರೆಲ್ಲರು ಪುತ್ರವತಿಯರು |
ಪಿತರಿಗೀಯದೆ ಗತಿಯನಳಿಯರು ಪುತ್ರರಾದವರು ||
ಸತತ ಜಪ ತಪವಗ್ನಿಹೋತ್ರವೆ |
ಗತಿಯು ತಮಗಿನ್ನಿತರವಿಲ್ಲೆಂ |
ಬತಿಪವಿತ್ರರು ಭೂಸುರೋತ್ತಮರೆಸೆದರಾನೆಲದೆ ||೩೮||

ಇಳೆಯು ರಕ್ಷಣೆಯಲ್ಲಿ ದಕ್ಷರು |
ಸಲೆಧನುರ್ವೇದದಲಿ ಕೋವಿದ |
ರಲಘುನಿಗಮಾದ್ಯಖಿಲವಿದ್ಯಾನ್ವಿತರು ಪಾರ್ಥಿವರು ||
ಬೆಳಗುತಿರ್ದರು ಪೊಳಲನಖಿಲರಿ |
ಗೆಳಸಿದುದನಿತ್ತಲ್ಪಲಾಭ |
ಕ್ಕೊಲಿವ ವೈಶ್ಯರುಮಾತ್ಮಧರ್ಮದ ಶೂದ್ರರುಂ ಮುದದೆ ||೩೯||

ವೇದ ಬೇರೊಂದಲ್ಲ ಲೋಕದ |
ನಾದಿವಸ್ತುವಿನಾತ್ಮತತ್ವವು |
ಬೋಧಿಸುವುದಿಂತದನೆರಾಮಾಯಣಸುಕಾವ್ಯವದು ||
ಮೇದಿನಿಯೊಳಾರಿದನು ಮೋದದಿ |
ನೋದುವರೊ ಕೇಳುವರೊ ಮಿಗೆ ವಿ |
ಚ್ಛೇದಮೊಂದುವುದವರ ಪಾತಕಮುವರುವರ್ಧಿಪರು ||೪೦||

ಮಂಗಳಂ ದಶರಥನ ಬಾಲಗೆ |
ಮಂಗಳಂ ಸೀತಾವಿಲೋಲಗೆ |
ಮಂಗಳಂ ಸುರವಿನುತಶೀಲಗೆ ಪರಮವೈಭವಗೆ ||
ಮಂಗಳಂ ಮುನಿಚಿತ್ತಖೇಲಗೆ |
ಮಂಗಳಂ ಸುಜನಾಳಿಪಾಲಗೆ |
ಮಂಗಳಂ ಕರುಣಾಲವಾಲಗೆ ವೀರರಾಘವಗೆ ||೪೧||

ಕೊಟ್ಟು ಯುವನೃಪಪದವ ತನ್ನೊಡ |
ಹುಟ್ಟಿದಾ ನರಸಿಂಹಭೂಪಂ |
ಗಿಟ್ಟುಮಂತ್ರಿತ್ವದಲಿ ಮಾತುಳಕಾಂತರಾಜರ್ನ ||
ಶಿಷ್ಟರಿಷ್ಟವ ಸಲಿಸಿ ಬಹುಸಂ |
ತುಷ್ಟಿಗೊಳಿಸಿಳೆಯಾಳ್ವ ಸಕಲಜ |
ನೇಷ್ಟವರಕೃಷ್ಣೇಂದ್ರಭೂಪಂಗಕ್ಕೆ ಮಂಗಳವು ||೪೨||

ವಿದಿತಘನಕರ್ಣಾಟರಾಜ್ಯದ |
ಪದಕೊಡೆಯನಹ ಕೃಷ್ಣಭೂಪನ |
ಪದದ ಸೇವಕನೆನಿಪ ಚಿಕಲಿಂಗಾಖ್ಯಪಾರ್ಥಿವನು ||
ಪಡೆದು ನುಡಿದನು ಯುದ್ಧಕಾಂಡವ |
ನಿದನು ಸುಲಲಿತಭಾಮಿನೀಷ |
ಟ್ಪದಿಯೊಳಿದು ರಾಜಿಸುಗೆ ಸುಜನರ್ಗೊಲವನೊಡರಿಸುತೆ ||೪೩||

ಭೂಮಿಪಾಲಕಕೃಷ್ಣಭೂಪನ |
ನೇಮದಿಂ ತಿಳಿಗನ್ನಡದೊಳೀ |
ರಾಮಕಥೆಯನು ಲಿಂಗರಾಜನು ಮುದದೆ ರಚಿಸಿದನು ||
ಸೋಮಭಾನುಗಳಿರ್ಪವರೆಗಂ |
ಭೂಮಿಯೊಳಗಿದು ಮೆರೆಗೆ ಪಂಡಿತ |
ಪಾಮರರ ಮೆಚ್ಚಿಸುತೆ ಪೆರ್ಚಿಸಿ ರಾಮಭಕ್ತಿಯನು ||೪೪||

ಯುದ್ಧಕಾಂಡಂ ಸಂಪೂರ್ಣಂ

ಕರ್ಣಾಟಕ ರಾಮಾಯಣಸಂಗ್ರಹಂ ಸಮಾಪ್ತಂ.






# ಶೋಧನಪತ್ರ.

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. | ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|---|---|---|---|
| ೨ | ೧೯ | ದ್ಬವ | ದ್ಭವ | ೧೧೬ | ೩೦ | ಮಣ | ಮಣಿ |
| ೩ | ೨೮ | ಶಾಸ್ತ್ರಜ್ಜ | ಶಾಸ್ತ್ರಜ್ಞ | ೧೩೦ | ೨೭ | ವೆರರು | ಪೆರರು |
| ೫ | ೪ | ಮನುವಿಂದೆ | ಯನುವಿಂದೆ | ೧೩೨ | ೧೪ | ಪುಂಡದ | ಪುಂಡ್ರದ |
| ೮ | ೩ | ಸತ್ಕರಿಸುಕೆ | ಸತ್ಕರಿಸುತ್ತೆ | ೧೪೪ | ೧೬ | ಸೀತೆಯುನ | ಸೀತೆಯನು |
| ೧೨ | ೩೦ | ಕುಲಾಗ್ರಣ | ಕುಲಾಗ್ರಣಿ | ೧೪೯ | ೧೫ | ವದು | ಪುದು |
| ೧೪ | ೩ | ಬುದ್ದಿ | ಬುದ್ಧಿ | ೧೫೩ | ೩೦ | ಹುಡುಕುವೆ | ಹುಡುಕುವ |
| ೨೦ | ೧೮ | ಧರಣ | ಧರಣಿ | ೧೬೧ | ೧೪ | ನಡೆಯ | ನಡೆವ |
| ,, | ೨೫ | ಪೆಣ | ಪೆಣ್ಣ | ೧೬೯ | ೧೨ | ತನು | ಸಹ |
| ೨೯ | ೨೩ | ಸೆತ್ಯ | ಸತ್ಯ | ೧೭೧ | ೨ | ಪುಟ್ಟುತೆ | ಪುಟ್ಟತೆ |
| ೩೩ | ೨೭ | ನುದುರಿ | ನುದಿರಿ | ೧೭೫ | ೧೭ | ರಿರ್ವರುಂ | ನಾಗಿತಾಂ |
| ೩೫ | ೨೩ | ಬೆಳಸಲು | ಬೆಳೆಸಲು | ೧೮೧ | ೧೨ | ಸೇಂ | ನೆರೆ |
| ಮುಂದೆಯೂ "ಬೆಳಸು" ಎಂಬಕ್ರಿಯೆಗ | | | | ೧೮೯ | ೧೭ | ಹೊಳೆಂಯುಸೆ | ಹೊಳೆಯೆನೆ |
| ಳಲ್ಲಿ "ಬೆಳೆಸು 'ಎಂದು ತಿದ್ದಿಕೊಳ್ಳುವುದು. | | | | ೧೯೩ | ೪ | ಲ್ಲಿರರುವ | ಲ್ಲಿರುವ |
| ೩೭ | ೨೦ | ಕರೆಯ್ಯಲ್ಕೆನು | ಕರೆದುಯ್ಯಲ್ಕೆ | ೧೯೫ | ೬ | ನೀಗುವನು | ನೀಗಿದನು |
| ೩೯ | ೨೨ | ರಾಮುಂನಿ | ರಾಮುಂ | ೧೯೭ | ೨೮ | ಕಾಲವಿದುಸಾ ಹಸಕೆಪೌರುಷ | ಪೌರುಷಕೆಕಾಲ ವಿದುಸಾಹಸ |
| ೪೮ | ೮ | ಧತಣಿ | ಧರಣಿ | | | | |
| ೫೫ | ೧೭ | ವಡೆವಳೇಳ್ಕೆ | ವಡೆವಳೇ | ೧೯೮ | ೧೭ | ಬೆಳದನು | ಬಳೆದನು |
| ,, | ,, | ರೌದ್ರಾವೇಷ | ರೌದ್ರಾವೇಶ | ೨೦೮ | ೧೦ | ದುಷ್ವನ | ದುಷ್ಟನ |
| ೫೮ | ೨೬ | ನಿಧಿನೀನೀ | ನಿಧಿಪೇಳೀ | ೨೧೨ | ೧೮ | ಪಟ | ಪಟು |
| ೫೯ | ೯ | ನಿಜಸತಿ | ನಿಜ ಸತಿ | ,, | ೨೭ | ಪರಕಿಸಲು | ಪರಿಕಿಸಲು |
| ೬೦ | ೧೪ | ಳೆಂಬರೆ | ಳೆಂಬುದೆ | ೨೧೬ | ೨೨ | ಜೆಲ್ಲ | ಚೆಲ್ಲ |
| ,, | ೩೦ | ತೋರ್ವರೆ | ತೋರ್ಪುದೆ | ೨೨೬ | ೨ | ತರಿದಕ್ಷಯಕು | ತರಿದಕ್ಷಸುಕು |
| ೭೭ | ೨೧ | ಮದಪರ | ಮಪರ | ೨೨೬ | ೨೫ | ಅಗ | ಆಗ |
| ೯೨ | ೨೭ | ಮಿಮಲ | ವಿಮಲ | ೨೨೭ | ೧೬ | ಪ್ರೆಮದಿಂ | ಪ್ರೇಮದಿಂ |
| ೯೫ | ೨೯ | ತ್ರಿರಸಿ | ತ್ರಿರಿಸಿ | ೨೩೦ | ೧೦ | ತೆಗದಿದ | ತೆಗೆದಿದ |
| ೧೦೯ | ೪ | ನಿಮ್ಮಯ | ನಮ್ಮಯ | ೨೩೩ | ೩೦ | ನೀವೆ | ನೀವೇ |
| ೧೧೫ | ೨೧ | ರುಳದಾ | ರುಳಿದಾ | ೨೩೪ | ೧೨ | ಲ್ಲರದೆ | ಲ್ಲಿರದೆ |

| | | | |
|---|---|---|---|
| ೨೩೪ | ೧೮ | ಹೊರಿ | ಹೊರ |
| ,, | ೨೬ | ಪಕ್ಷಯುಕು | ಪಕ್ಷಸುಕು |
| ೨೩೬ | ೬ | ಪದೀಗ | ಪುದೀಗ |
| ೨೩೯ | ೩ | ನೇವು | ನೇವ |
| ,, | ೨೭ | ಶಶಣೆಂದ | ಶರಣೆಂದ |
| ೨೪೦ | ೨೯ | ಳ್ಸಡಿಲು | ಲ್ಸಡಿಲು |
| ೨೪೫ | ೩ | ತಡಯಿ | ತಡೆಯಿ |
| ,, | ೨೯ | ಸಂಗತಿಯು | ನೆಲೆಬಗೆಯು |
| ೨೪೭ | ೨೬ | ನುತ್ತುಮಾಂಗ | ನುತ್ತವಾಂಗ |
| ೨೪೯ | ೧೮ | ನೆನ್ನತ್ತಡಿ | ನೆನ್ನತಡಿ |
| ೨೫೨ | ೭ | ದಕ್ಷಯುಕು | ದಕ್ಷಸುಕು |
| ೨೫೯ | ೬ | ಮ್ಯೆಂದವನ | ಮ್ಯೆಂದನನು |
| ,, | ೧೬ | ನಕ್ಷಯುಕು | ನಕ್ಷಸುಕು |
| ೨೭೩ | ೧೯ | ಪಶಿ | ಹರಿ |
| ೨೭೫ | ೫ | ಮದು | ಮವ |
| ೨೭೬ | ೧೯ | ದಿಂದವಸು | ದಂಬವನು |
| ೨೭೭ | ೧೨ | ಟಿಂದು | ಟಿಂದು |
| ,, | ೨೭ | ,, | ,, |
| ೨೭೭ | ೬ | ದನುಜ್ಜೆ | ದನುಜ್ಜೆ |
| ೨೭೯ | ೫ | ಗರುಹಿ | ನರುಹಿ |
| ೨೭೯ | ೯ | ದಾಸಿ | ದಾಸೆ |
| ೨೮೭ | ೨೮ | ಎಚ್ಚ | ಉಚ್ಚ |
| ೨೮೮ | ೨೦ | ನಸುವ | ನಿಸುವ |
| ೨೮೯ | ೩೦ | ನೆಲಿ | ನೆಲ್ಲಿ |
| ೨೯೦ | ೯ | ಕ್ಷಥಿತಿ | ಕ್ಷಶಿಥ |
| ೨೯೩ | ೪ | ನದಿರಿ | ಸದರಿ |
| ೨೯೪ | ೨೪ | ಭೇಥಿಪ | ಭೇದಿಪ |
| ೨೯೭ | ೨೪ | ದೊರೆಯು | ದೊರೆಯ |
| ೨೯೮ | ೮ | ವದಟಿಗ | ವದಟಗ |

| | | | |
|---|---|---|---|
| ,, | ,, | ಮೂಳೆಯು | ಮೂಳೆಯ |
| ೩೦೦ | ೨೩ | ತೆರದು | ತೆರೆದು |
| ೩೦೨ | ೯ | ವೀಭೀ | ವಿಭೀ |
| ೩೦೨ | | ೪೯, ೫೦, ೫೧ ನೆಯ ಪದ್ಯಗಳ | |
| ೩೦೩ | | ನ್ನು ಓದಿದನಂತರ ೪೬, ೪೭, ೪೮ ನೆಯ ಪದ್ಯಗಳನ್ನು ಓದಿಕೊಳ್ಳಬೇಕು. | |
| ೩೧೦ | ೧೧ | ನರೇಂನ್ರ | ನರೇಂದ್ರ |
| ೩೧೩ | ೧೨ | ಳಂದು | ಳಿಂದು |
| ,, | ೨೯ | ಳಂಗದನ | ಳಂಗದನು |
| ೩೧೪ | ೬ | ದಾನವ | ದಾನವನ |
| ೩೧೫ | ೪ | ಸ್ಯಂವನವು | ಸ್ಯಂದನವು |
| ೩೧೫ | ೧೭ | ನಳಿಪಿದು | ನಳಿವಿದು |
| ೩೧೮ | ೬ | ತಿಪುಕಿದ | ತಿರುಗಿದ |
| ೩೨೨ | ೧೪ | ಗ್ಯವನೋ | ಗ್ಯದೆನೋ |
| ೩೨೭ | ೧೮ | ವೆಸದುದ | ವೆಸೆದುದ |
| ೩೩೬ | ೨೧ | ತಡಬಡಿಸೇ | ತಡಬಡಿಸೆ |
| ೩೩೮ | ೫ | ಸರುವಹು | ನರುಹು |
| ೩೩೯ | ೧೨ | ತೆಗದೆಚ್ಚ | ತೆಗೆದೆಚ್ಚ |
| ೩೪೦ | ೨ | ಗೆಸದಿಹಸು | ಗೆಸೆದಿಹನು |
| ೩೪೫ | ೧೦ | ವೊದನಿ | ವೊದವಿ |
| ೩೪೯ | ೧೯ | ಹನುಮರಿ | ಹನುಮಂ |
| ೩೫೧ | ೧೦ | ತಡಯು | ತಡೆಯು |
| ೩೫೨ | ೨೫ | ನಿಷ್ಠುರೊಕ್ತಿ | ನಿಷ್ಠುರೋಕ್ತಿ |
| ೩೫೬ | ೫ | ಸುಂದರೆಂದೀ | ಸುಂದರೇಂದೀ |
| ೩೫೭ | ೨೬ | ಪುಷ್ಟಕವ | ಪುಷ್ಪಕವ |
| ೩೬೧ | ೨ | ದಶಶಿರೊರ್ಣವ | ದಶಶಿರೋರ್ಣವ |
| ೩೬೨ | ೩ | ರಡವಿಡ | ರೆಡೆವಿಡ |